ಅಂತರ ಭಾರತೀಯ ಪುಸ್ತಕ ಮಾಲೆ

# ಸೂರ್ಯಕಾಂತಿಯ ಕನಸು

('ಸೂರಜ್ಯ ಮುಖೀರ್ ಸ್ವಪ್ನ' ಎಂಬ ಅಸ್ಸಾಮಿ ಭಾಷೆಯ ಕಾದಂಬರಿಯ
ಕನ್ನಡ ಅನುವಾದ)

**ಸಯ್ಯದ್ ಅಬ್ದುಲ್ ಮಲಿಕ್**

ಅನುವಾದ

**ಎ.ಎಂ. ರಾಮಚಂದ್ರ**



ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ

# ಭೂಮಿಕೆ

ಅರುಣೋದಯ ಕಾಲದಲ್ಲೇ (ಕ್ರಿ.ಶ. 1846 - 82) ಅಸ್ಸಾಮಿ ಭಾಷೆಯಲ್ಲಿ ಕಾದಂಬರಿಯ ರಚನೆ ಆರಂಭವಾಯಿತು. ಈ ಕಾಲದಲ್ಲಿ ಅಸ್ಸಾಮಿ ಭಾಷೆ ತನ್ನ ಪೂರ್ವ ಸ್ವರೂಪವನ್ನು ತೊರೆದು ಹೊಸ ಸ್ವರೂಪವನ್ನು ಅನುಸರಿಸಿತು. ರಚನಾಶೈಲಿಯಲ್ಲಿ ಹೊಸತನ ಕಾಣಿಸಿತು. ಅದೇ ರೀತಿ ಸಾಹಿತ್ಯದಲ್ಲೂ ಒಂದು ಹೊಸ ಬಗೆಯ ಸಾಹಿತ್ಯ ಸೃಷ್ಟಿಗೆ ಬಾಗಿಲು ತೆರೆಯಿತು. ಅದೇ ಕಾದಂಬರಿ ಸಾಹಿತ್ಯ. ಬೃಹತ್ ಕಥೆಯ ಕಾಲದಿಂದಲೂ ಭಾರತೀಯ ಸಾಹಿತ್ಯದಲ್ಲಿ ಕಥೆ ಮತ್ತು ಆಖ್ಯಾನ ಬರೆಯುವ ಪರಂಪರೆ ಇದ್ದರೂ ಕಾದಂಬರಿ ಎಂದ ಕೂಡಲೇ ಈಗ ನಮ್ಮ ಮಾನಸಪಟಲದ ಮೇಲೆ ಮೂಡುವಂಥ ಸಾಹಿತ್ಯಪ್ರಕಾರ ಆ ಕಾಲದಲ್ಲಿ ರಚಿತವಾಗಿರಲಿಲ್ಲ. ಆದುದರಿಂದ ಪ್ರಾಚೀನ ಅಸ್ಸಾಮಿ ಸಾಹಿತ್ಯದಲ್ಲೂ ಸಹ ಆಧುನಿಕ ಯುಗದ ಕಾದಂಬರಿಯ ಛಾಯೆ ಕಂಡು ಬರುತ್ತಿರಲಿಲ್ಲ. "ಮಹಾಕಾವ್ಯ ಮತ್ತು ಕಾದಂಬರಿ ಎರಡರಲ್ಲೂ ಅಂಥ ಮೂಲಭೂತ ವ್ಯತ್ಯಾಸವೇನೂ ಇಲ್ಲ. ಏಕೆಂದರೆ ಎರಡೂ ಮೂಲತಃ ಆಖ್ಯಾನವನ್ನೇ ವರ್ಣಿಸುತ್ತವೆ" ಎಂದು ರವೀಂದ್ರನಾಥ ಠಾಕೂರರು ಖಚಿತವಾಗಿ ಹೇಳಿದ್ದಾರೆ.

ಅರುಣೋದಯ ಕಾಲದಲ್ಲಿ ಬುನಿಯಾನ್ ವಿರಚಿತ 'ಪಿಲ್‌ಗ್ರಿಮ್ಸ್ ಪ್ರೋಗ್ರೆಸ್' ಎಂಬ ಕೃತಿಯನ್ನು ' ಜಾತ್ರಿಕರ್ ಜಾತ್ರಾ' ಎಂದು ಭಾಷಾಂತರಿಸಲಾಯಿತು. ಇಲ್ಲಿ ಗಮನಿಸಬೇಕಾದ ಅಂಶವೇನೆಂದರೆ ' ಜಾತ್ರಿಕ್' ಎಂಬ ಶಬ್ದದ ಬಳಕೆ ಅಸ್ಸಾಮಿ ಭಾಷೆಯಲಿಲ್ಲ. ಸಂಸ್ಕೃತ ಮತ್ತು ಪ್ರಾಕೃತ ವ್ಯಾಕರಣದ ಪ್ರಕಾರ 'ಜಾತ್ರಿಕ' ಶಬ್ದದ ನಿಷ್ಪತ್ತಿ ಸಾಧ್ಯವಿಲ್ಲ.

ಇದಲ್ಲದೆ ಈ ಕಾಲದಲ್ಲೇ ಕಾಮಿನಿಕಾಂತ್, ಫುಲಮನಿ, ಆರು ಕರುಣಾ, ಎಲೋಕೇಶಿ ಬೆಶ್ಯಾರ್ ಕಥಾ- ಮುಂತಾದ ಕಾದಂಬರಿಗಳಿಂದ ಕೆಲವು ಕಥೆಗಳ ಪ್ರಚಾರವಾಯಿತು. ಈ ಎಲ್ಲ ಕಾದಂಬರಿಗಳನ್ನೂ ಮಿಷನರಿಗಳು ಬಂಗಾಳಿ ಭಾಷೆಯಲ್ಲಿ ಬರೆದಿದ್ದರು. ಅನಂತರ ಅಸ್ಸಾಮಿ ಭಾಷೆಗೆ ಭಾಷಾಂತರ ಮಾಡಿಸಿದ್ದರು. ಈ ಎಲ್ಲ ಕಾದಂಬರಿಗಳು ಧಾರ್ಮಿಕ ದೃಷ್ಟಿಕೋನದಿಂದ ಬರೆದ ಪ್ರಚಾರಾತ್ಮಕ ಉಪದೇಶಪ್ರಧಾನ ಕಾದಂಬರಿಗಳೆಂದು ಬೇರೆ ಹೇಳಬೇಕಾಗಿಲ್ಲ. ಇದೇ ಕಾಲದಲ್ಲಿ ಪ್ರಕಟಿತವಾದ ಪದ್ಮಾವತಿ ಫುಕನನಿಯವರ "ಸುಧರ್ಮ್ಮಾರ್ ಉಪಾಖ್ಯಾನ" ಎಂಬ ಕಾದಂಬರಿ ಇದೇ ಶ್ರೇಣಿಗೆ ಸೇರಿದ ಮೌಲಿಕ ಕೃತಿ. ಉಪದೇಶ ಪ್ರಧಾನವಾಗಿದ್ದರೂ ' ಸುಧರ್ಮ್ಮಾರ್ ಉಪಾಖ್ಯಾನ' ಪ್ರಚಾರಾತ್ಮಕ ರಚನೆ ಅಲ್ಲ.

ವಾಸ್ತವವಾಗಿ 19ನೇ ಶತಮಾನದ ಅಂತಿಮ ದಶಕದಲ್ಲೇ ಅಸ್ಸಾಮಿ ಭಾಷೆಯಲ್ಲಿ ಕಾದಂಬರಿ ಪ್ರಕಾರ ಉದಯವಾಯಿತು. 1891ರಲ್ಲಿ ಪ್ರಕಟಿತವಾದ ಶ್ರೀ ಪದ್ಮನಾಥ ಗೊಹಾಞಿ ಬರುಆ ಅವರ 'ಭಾನುಮತಿ' ಮತ್ತು ಅದರ ಅನಂತರ ಪ್ರಕಟವಾದ ಅವರ 'ಲಾಹರಿ' ಅಸ್ಸಾಮಿ ಕಾದಂಬರಿ ಸಾಹಿತ್ಯದ ಶಿಲಾನ್ಯಾಸ ಸ್ವರೂಪವಾಗಿದೆ. ಈ ಎರಡು ಕಾದಂಬರಿಗಳಿಗೆ ಕಥಾವಸ್ತುವನ್ನು ಆಹೋಮ್ ಶಾಸನಕಾಲದ ಅಂತಿಮ ಅವಧಿಯ ಇತಿಹಾಸದಿಂದ ತೆಗೆದುಕೊಳ್ಳಲಾಗಿದೆ. ಕಥಾವಸ್ತುವನ್ನು ಐತಿಹಾಸದಿಂದ ತೆಗೆದುಕೊಂಡಿದ್ದರೂ

ಈ ಎರಡು ಕಾದಂಬರಿಗಳನ್ನು ಐತಿಹಾಸಿಕ ಕಾದಂಬರಿಗಳೆಂದು ಹೆಸರಿಸುವುದು ಸುಲಭಸಾಧ್ಯವಾದ ಮಾತಲ್ಲ. ಐತಿಹಾಸಿಕ ಘಟನೆಗಳ ಪರಂಪರೆ ಈ ಎರಡು ಕಾದಂಬರಿಗಳ ಪ್ರತ್ಯಕ್ಷ ಆಧಾರವಾಗಿರದೆ ಪರೋಕ್ಷವಾದ ಹಿನ್ನೆಲೆಯಾಗಿದೆ. ಐತಿಹಾಸಿಕ ಘಟನೆಗಳು ಕಥಾವಸ್ತುವಿನ ವಿಕಾಸಕ್ಕೆ ಪೂರಕವಾಗಿಲ್ಲ. ಐತಿಹಾಸಿಕ ಪಾತ್ರಗಳು ಐತಿಹಾಸಿಕ ಸಂಭಾವ್ಯತೆಯ ಉನ್ಮುಕ್ತ ಗತಿಗೆ ಅವಕಾಶ ಕಲ್ಪಿಸಿವೆ.

ಅನಂತರದ ಕೆಲವೇ ದಿನಗಳಲ್ಲಿ ಶ್ರೀ ಲಕ್ಷ್ಮೀನಾಥ ಬೆಜಬರುಆ ಅವರ "ಪದುಮ ಕುಂವರಿ" ಎಂಬ ಕಾದಂಬರಿ ಪ್ರಕಟವಾಯಿತು. 'ಪದುಮ ಕುಂವರಿ' ಕಾದಂಬರಿಗೆ ಕಥಾವಸ್ತುವನ್ನು ಸಹ ಅದೇ ಕಾಲದ ಇತಿಹಾಸದಿಂದ ತೆಗೆದುಕೊಳ್ಳಲಾಗಿದೆ. ಆದರೆ 'ಭಾನುಮತಿ' ಮತ್ತು 'ಲಾಹರಿ' ಕಾದಂಬರಿಗಳಿಗಿಂತ ' ಪದುಮ ಕುಂವರಿ' ಕಾದಂಬರಿಯ ಮೇಲೆ ಇತಿಹಾಸದ ಪ್ರಭಾವ ಅಧಿಕವಾಗಿದೆ. ನೈಜ ಘಟನಾಕ್ರಮ, ಇತಿಹಾಸದೊಡನೆ ಸಮಾವೇಶಗೊಂಡಿದ್ದರೂ 'ಪದುಮ ಕುಂವರಿ' ಕಾದಂಬರಿಯ ಹೆಚ್ಚು ಪಾತ್ರಗಳು ಕಾವ್ಯಜಗತ್ತಿನ ಪಾತ್ರಗಳಾಗಿವೆ. ಪರಿಸ್ಥಿತಿಯ ಅವಾಸ್ತವಿಕ ಚಿತ್ರಣ ಕಾದಂಬರಿಯ ಸೌಷ್ಠವವನ್ನು ಹದಗೆಡಿಸಿದೆ.

ಕಥಾವಸ್ತುವಿನ ವಿಕಾಸ, ಘಟನೆಗಳ ಕ್ರಮ, ನಿರೂಪಣಾ ಶೈಲಿ, ಪಾತ್ರ ಚಿತ್ರಣ, ಮನಸ್ಥಿತಿ ಮತ್ತು ತುಮುಲದ ಅಭಿವ್ಯಕ್ತಿ - ಇವುಗಳ ದೃಷ್ಟಿಯಿಂದ ವಿಮರ್ಶಿಸಿ ನೋಡಬೇಕಾಗುತ್ತದೆ.

ಇದೇ ದಶಕದಲ್ಲಿಯೇ ಶ್ರೀ ರಜನೀಕಾಂತ ಬರದಲೈ ಅವರ ಸಾಮಾಜಿಕ ಕಾದಂಬರಿ 'ಮಿರಿಜಯರಿ' ಪ್ರಕಟಿತವಾಯಿತು. ಸೋವನಗಿರಿ ನದಿಯ ದಡದಲ್ಲಿದ್ದ 'ಮಿಥಿ' ಜಾತಿಯ ಸಮಾಜದ ತರುಣ-ತರುಣಿ ಇವರೀರ್ವರ ಪ್ರೇಮ ಕಥೆಯನ್ನು ಆಧರಿಸಿ ಬರೆಯಲಾಗಿರುವ 'ಮಿರಿಜಯರಿ' ಒಂದು ದುಃಖಾಂತ ಕಾದಂಬರಿ. ನಿಜಕ್ಕೂ ಅಸ್ಸಾಮಿ ಸಾಹಿತ್ಯದಲ್ಲಿ ಇದೇ ಮೊತ್ತ ಮೊದಲನೆಯ ಸಾಮಾಜಿಕ ಕಾದಂಬರಿ. ಅನಂತರ ಶ್ರೀ ಬರದಲೈ ಅವರ 'ರಹದೈ-ಲಿಗಿರಿ' , 'ಮನೋಮತಿ', 'ರಂಡಿಲಿ' 'ನಿರ್ಮ್ಮಲ್,' 'ಭಕ್ತ ಮತ್ತು ತಾಮೇಶ್ವರಿ ಮಂದಿರ' - ಮುಂತಾದ ಐತಿಹಾಸಿಕ ಕಾದಂಬರಿಗಳು ಪ್ರಕಟವಾದುವು.

ಅಸ್ಸಾಮಿ ಕಾದಂಬರಿ ಸಾಹಿತ್ಯದ ಪಥ ನಿರ್ಮಾತೃಗಳಾದ ಗೋಹಾಞಿ ಬರುಆ, ಬೆಜಬರುಆ, ಮತ್ತು ಬರದಲೈ -ಈ ಮೂವರು ಇತಿಹಾಸದಿಂದ ತಮ್ಮತಮ್ಮ ಕಾದಂಬರಿಗಳಿಗೆ ಕಥಾವಸ್ತುವನ್ನು ಆರಿಸಿಕೊಂಡಿದ್ದರೂ ಅವರ ಮನಸ್ಸಿನ ಮೇಲೆ ಸ್ವತಂತ್ರ ಅಸ್ಸಾಮಿನ ಘಟನೆಗಳು ಗಂಭೀರವಾದ ಪ್ರಭಾವವನ್ನು ಬೀರಿದ್ದುವು ಎಂದು ಊಹಿಸಬಹುದು. ಸಂಭವತಃ ವೈಚಿತ್ರ್ಯರಹಿತ 'ಸ್ಥವಿರ' ಸಮಾಜಕ್ಕಿಂತ ಸಂಘಾತ ಪ್ರಧಾನವಾದ ಅತೀತ ಘಟನೆಗಳು ಅವರಿಗೆ ಅತ್ಯಂತ ಆಕರ್ಷಕವಾಗಿದ್ದವು.

ನಾಟಕ ಮತ್ತು ಕಾದಂಬರಿಗಳ ಕಥಾವಸ್ತುವಿನ ಸ್ವರೂಪವನ್ನು ವಿಮರ್ಶಿಸಿದರೆ ಸಾಮಾನ್ಯವಾಗಿ ಪೌರಾಣಿಕ ಆಖ್ಯಾನಗಳಲ್ಲಿ ನಾಟಕದ ಉದಯವಾಗಿ ಅದು ಐತಿಹಾಸಿಕ ಅಖ್ಯಾನಗಳ ಮೂಲಕ ಸಾಮಾಜಿಕ ಆಖ್ಯಾನಗಳಲ್ಲಿ ಪರಿಪೂರ್ಣತೆ ಪಡೆದಿರುತ್ತದೆ ಎಂಬ ಅಂಶ ಕಂಡು ಬರುತ್ತದೆ. ಆದರೆ ಸಾಮಾಜಿಕ ಘಟನಾಕ್ರಮಕ್ಕನುಗುಣವಾಗಿ ಕಾದಂಬರಿ ಸಾಹಿತ್ಯದ ಉದಯವಾಗುತ್ತದೆ. ಅಸ್ಸಾಮಿ ಕಾದಂಬರಿ ಸಾಹಿತ್ಯವು ಸಹ ಸಾಮಾಜಿಕ ಘಟನಾಕ್ರಮಕ್ಕನುಗುಣವಾಗಿ ಉದಯವಾಯಿತು. ಆದರೆ ದಿಕ್ಕನ್ನು ಬದಲಾಯಿಸಿಕೊಂಡು

ಇತಿಹಾಸದ ಕಡೆ ತಿರುಗಿತು. 'ಮಿರಿಜಯರಿ' ಮಾತ್ರ ಅಪವಾದವಾಗಿದೆ.

ಇಪ್ಪತ್ತನೇ ಶತಮಾನದ ಆರಂಭದಿಂದ ಮೂರನೆಯ ಮತ್ತು ನಾಲ್ಕನೆಯ ದಶಕದವರೆಗಿನ ಅವಧಿ ಅಸ್ಸಾಮಿ ಕಾದಂಬರಿ ಸಾಹಿತ್ಯದ ವಿಕಾಸ ಕಾಲ. ಈ ಅವಧಿಯಲ್ಲಿ ರಚಿತವಾದ ಕಾದಂಬರಿಗಳು ಕಾಲದ ಪರಿಧಿಯನ್ನು ದಾಟಬಲ್ಲ ಶಕ್ತಿಸಾಮರ್ಥ್ಯ ಪಡೆದಿವೆ. ಈ ಕಾಲದಲ್ಲಿ ಪ್ರಕಟವಾದ ಕಾದಂಬಗಿಗಳಿಗೆ ಕಥಾವಸ್ತುವನ್ನು ಪ್ರಾಯಶಃ ಸಮಾಜದ ಕುಲೀನ ವರ್ಗ ಅಥವಾ ಕ್ಷಿತಿಜ ವರ್ಗದಿಂದ ಆರಿಸಿಕೊಳ್ಳಲಾಗಿದೆ. ಕಥಾವಸ್ತುವಿನ ವಿಕಾಸ, ಪಾತ್ರ ನಿರೂಪಣೆ, ಅಂತರ್-ದ್ವಂದ್ವದ ವಿಶ್ಲೇಷಣಾತ್ಮಕ ವರ್ಣನೆ - ಇವುಗಳಲ್ಲಿ ಕಾದಂಬರಿ ಶಿಲ್ಪವಿಧಾನದ ಸಾರ್ಥಕ ಪ್ರಯೋಗವನ್ನು ಕಾಣಬಹುದು. ಅನೇಕ ಕಾದಂಬರಿಗಳಲ್ಲಿ ಯಾವುದೇ ವಿಧವಾದ ರಾಜನೀತಿಯ ಆದರ್ಶವನ್ನೂ ನಿರೂಪಿಸದೆ ಆದರ್ಶದ ಮೂಲಕ ಸತ್ಯವನ್ನು ಪ್ರತಿಪಾದಿಸಲಾಗಿದೆ. ಮನಸ್ಸಿನ ತಾತ್ತ್ವಿಕ ವಿಶ್ಲೇಷಣೆಯಿದ್ದರೂ ಯಾವ ಕಾದಂಬರಿಕಾರರೂ ಸಾಮಾಜಿಕ ಘಟನಾವಳಿಗಳ ಸುಳಿಗೆ ಸಿಕ್ಕಿ ನೊಂದ ಜೀವಿಗಳ ಮನದ ಅಂತರಾಳವನ್ನು ಹೊಕ್ಕು ಚಿತ್ರಿಸಲಿಲ್ಲ. ಸಂಕ್ಷೇಪವಾಗಿ ಹೇಳುವುದಾದರೆ ಈ ಯುಗದ ಕಾದಂಬರಿಗಳು ಘಟನೆಗಳ ವರ್ಣನೆಯಲ್ಲಿ ಯಶಸ್ವಿಯಾಗಿರುವಂತೆ ಮಾನವನ ಮನಸ್ಸಿನ ಸನಾತನ ಅಂತರ್-ದ್ವಂದ್ವವನ್ನು ವಿಶ್ಲೇಷಿಸುವುದರಲ್ಲಿ ಅಷ್ಟೊಂದು ಯಶಸ್ವಿಯಾಗಿಲ್ಲ.

ಎರಡನೆಯ ಮಹಾಯುದ್ಧ ಮತ್ತು 'ಭಾರತ ಬಿಟ್ಟು ತೊಲಗಿ' ಆಂದೋಲನ -ಇವು ಇಡೀ ಭಾರತದ ಸಾಮಾಜಿಕ ಮೌಲ್ಯಗಳಲ್ಲಿ ಬದಲಾವಣೆಗಳನ್ನುಂಟುಮಾಡಿದವು. ಯುದ್ಧಕ್ಷೇತ್ರದ ಹೊಸ್ತಿಲಿನಲ್ಲಿದ್ದ ಅಸ್ಸಾಂ ಸಹ ಆ ಬದಲಾವಣೆಗಳಿಂದ ಪ್ರಭಾವಿತವಾಗದೆ ಇರಲು ಸಾಧ್ಯವಾಗಲಿಲ್ಲ. ಈ ಪರಿವರ್ತನೆಯ ಕಾರಣ ಹಾಗೂ ಸ್ವರೂಪ -ಎರಡೂ ವ್ಯಾಪಕ ಮತ್ತು ಗಹನ. ಬದಲಾವಣೆ ಹೊಂದಿದ ಸಾಮಾಜಿಕ ಮೌಲ್ಯಗಳು ಅಸ್ಸಾಮಿ ಸಾಹಿತಿಗಳ ಅನುಭೂತಿ ಝೇಂಕರಿಸುವಂತೆ ಮಾಡಿವೆ. ಆಘಾತಗೊಂಡ ಅನುಭೂತಿಯು ಕಾದಂಬರಿ ಹಾಗೂ ಕಥೆಗಳ ಮಾಧ್ಯಮದಿಂದ ಅಭಿವ್ಯಕ್ತವಾಗಿ ಸಾಕಾರಗೊಂಡಿತು. ಆದರೆ ಯುದ್ಧದಿಂದ ಉದ್ಭವಿಸಿದ ಕಾರಣಗಳಿಂದಾಗಿ (1945 - 46)ರಲ್ಲಿ ನೂತನ ಅನುಭೂತಿ, ನೂತನ ಸಾಹಿತ್ಯ ಸೃಷ್ಟಿ ಬೆಳಕಿಗೆ ಬಂದುವು. ವಾಸ್ತವವಾಗಿ ಈ ಅವಧಿಯಿಂದಲೇ ಅಸ್ಸಾಮಿ ಸಾಹಿತ್ಯದ ಯುದ್ಧೋತ್ತರ ಕಾಲ ಆರಂಭವಾಯಿತು.

ಯುದ್ಧೋತ್ತರದ ಅಸ್ಸಾಮಿ ಸಾಹಿತ್ಯ ವಿಶೇಷವಾಗಿ ಕಾದಂಬರಿ ಹಾಗೂ ಕಥೆಗಳನ್ನೊಳಗೊಂಡಿದೆ. ವಿವಿಧ ಅನುಭವಗಳ ನಿರೂಪಣೆ, ನಿಂದೆಗೆ ಗುರಿಯಾದ ಹಾಗೂ ಉಪೇಕ್ಷಿತ ಪಾತ್ರಗಳ ಚಿತ್ರಣ, ತೀವ್ರಾನುಭೂತಿ ಮತ್ತು ಉದಗ್ರ ವಾಸನೆಯ ತೀವ್ರ ಅಭಿವ್ಯಕ್ತಿ, ರಾಜಕೀಯ ಅಭಿಪ್ರಾಯಗಳಿಗೆ ಅನುಕೂಲವಾಗುವಂತೆ ಚಿತ್ರಿಸಿ ಸಾಮಾಜಿಕ ಚೇತನದ ವಿಶ್ಲೇಷಣೆಯಿಂದ ಪುಷ್ಟಿ ಹೊಂದಿದ ಈ ಯುಗದ ಕಥಾಸಾಹಿತ್ಯ ಕೇವಲ ವಿಶಿಷ್ಟವಾಗಿರದೆ ವ್ಯಾಪಕವಾಗಿದೆ. ಆರಂಭದ ಸ್ವಚ್ಛಂದತಾವಾದಿಗಳ ಭಾವುಕತೆಯ ಸ್ಥಾನವನ್ನು ಯಥಾರ್ಥ ಅನುಭೂತಿ ಆವರಿಸಿದುದು ಕಂಡು ಬರುತ್ತದೆ.

ಸೈಯದ್ ಅಬ್ದುಲ್ ಮಲಿಕ್ ಅವರು ಒಬ್ಬ ಯಶಸ್ವಿ ಗದ್ಯಶಿಲ್ಪಿ. ಅವರು ಕಥೆಗಾರರಾಗಿಯೇ ಹೆಚ್ಚು ಹೆಸರುವಾಸಿಯಾಗಿದ್ದಾರೆ. ಎರಡನೆಯ ಮಹಾಯುದ್ಧದ ಆರಂಭದಿಂದಲೂ ಅವರು ಬರೆಯತೊಡಗಿದರು, ಇಂದಿಗೂ ಬರೆಯುತ್ತಲೇ ಇದ್ದಾರೆ.

ಯುಗಧರ್ಮಾನುಸಾರವಾಗಿ ಮಲ್ಲಿಕ್ ಅವರ ಕಥಾವಸ್ತುವಿನಲ್ಲಿ ಬದಲಾವಣೆ ಇರುವುದು ನಿಜ. ಆದರೆ ಸ್ವರೂಪದಲ್ಲಿ ಯಾವ ವಿಶೇಷ ಬದಲಾವಣೆಯೂ ಆಗಿಲ್ಲ. ಸಂಕ್ಷೇಪವಾಗಿ ಹೇಳುವುದಾದರೆ, ಕಾಲ್ಪನಿಕತೆಯಿಂದ ವಸ್ತುನಿಷ್ಠೆಯ ಕಡೆಗೆ ಮತ್ತು ಮಧ್ಯಮ ವರ್ಗದ ವಿದ್ಯಾವಂತರ ಕಡೆಯಿಂದ ಶ್ರೀಸಾಮಾನ್ಯರ ಕಡೆಗೆ ಗಮನ ಹರಿಸಿದುದೇ ಆ ಬದಲಾವಣೆ ಎಂದು ಹೇಳಬಹುದು.

ಮಲಿಕ್ ಅವರು ಕಥೆಗಾರರಾಗಿ ಸಾಹಿತ್ಯ ಜಗತ್ತನ್ನು ಪ್ರವೇಶಿಸಿದರೂ ಅವರ ಹತ್ತು-ಹನ್ನೊಂದು ಕಿರು ಹಾಗೂ ಬೃಹತ್ ಕಾದಂಬರಿಗಳಲ್ಲಿ 'ಸೂರಜ್ ಮುಖೀರ್ ಸ್ವಪ್ನ' (ಸೂರ್ಯಕಾಂತಿಯ ಕನಸು) ಒಂದು ಅತ್ಯಂತ ಶ್ರೇಷ್ಠ ಕೃತಿಯಾಗಿದೆ. ಮೊತ್ತಮೊದಲಿಗೆ ಈ ಕಾದಂಬರಿ ಅಸ್ಸಾಮಿ ಪ್ರಕಾಶನ ಪರಿಷತ್ತಿನ ಆರ್ಥಿಕ ನೆರವಿನಿಂದ ಪ್ರಕಟವಾಗಿತ್ತು. ನಂತರ ಇದಕ್ಕೆ ಸಾಹಿತ್ಯ ಅಕಾಡೆಮಿಯ ಪುರಸ್ಕಾರ ಲಭಿಸಿತು.

ಅಸ್ಸಾಮ್ ರಾಜ್ಯದ ಧನಶಿರಿ ನದಿಯ ದಡದಲ್ಲಿರುವ ಗ್ರಾಮವೊಂದರ ಜನಜೀವನವನ್ನು ಕೇಂದ್ರವಾಗಿಟ್ಟುಕೊಂಡು 'ಸೂರಜ್ ಮುಖೀರ್ ಸ್ವಪ್ನ' -ಕಾದಂಬರಿಯನ್ನು ರಚಿಸಲಾಗಿದೆ. ಆ ಹಳ್ಳಿಯಲ್ಲಿ ಹಿಂದೂ, ಮುಸ್ಲಿಂ, ನೇಪಾಲಿ ಮತ್ತು ಮಿಕಿರ್ ಜನಾಂಗದವರು ನೆಲಸಿದ್ದಾರೆ. ಅಲ್ಲಿ ಪ್ರಾರ್ಥನಾ ಮಂದಿರಗಳು ಮತ್ತು ಮಸೀದಿಗಳು ಇವೆ. ಧನಶಿರಿಯಲ್ಲಿ ಪ್ರವಾಹ ಬಂದರೆ; ಕಾಡಾನೆಗಳು ಕಾಡಿನಿಂದ ಹೊರಬಂದರೆ, ಯಾರ ಮನೆಗಾದರೂ ಬೆಂಕಿ ತಗುಲಿದರೆ, ವಾಂತಿಭೇದಿ - ಸಿಡುಬು ರೋಗ ತಗುಲಿದರೆ, ಅಲ್ಲಾ ಮತ್ತು ಈಶ್ವರ ಒಟ್ಟಿಗೆ ಆ ಹಳ್ಳಿಗೆ ಆಗಮಿಸುತ್ತಾರೆ. ಧನಶಿರಿಯ ಪ್ರವಾಹ ತಂದು ಹರಡಿದ ಮೆಕ್ಕಲು ಮಣ್ಣಿನಿಂದ ಫಲವತ್ತಾದ ಜಮೀನಿನಲ್ಲಿ ಡಾಲಿಮ್‌ನ ರೈತಾಪಿ ಜನರು ಬೇಸಾಯ ಮಾಡುತ್ತಾರೆ ಮತ್ತು ಕೆರೆಕೊಳಗಳಲ್ಲಿ ಮೀನು ಹಿಡಿಯುತ್ತಾರೆ.

ಬೇಸಾಯವನ್ನು ಅವಲಂಬಿಸಿರುವ ಸಮಾಜದ ಅಂತರಂಗದ ಚಿತ್ರ ಈ ಕಾದಂಬರಿಯಲ್ಲಿ ಒಡಮೂಡಿದೆ. ಹೊಸದಾಗಿ ಜಮೀನನ್ನು ಆಬಾದು ಮಾಡಿ, ಬೇಸಾಯ ಮಾಡಲೇಬೇಕೆಂದು ಹಟ ತೊಟ್ಟ ಗುಲಚನೇ ಈ ಕಾದಂಬರಿಯ ನಾಯಕ.

ಈ ಕಾದಂಬರಿಯಲ್ಲಿ ಎರಡು ಪಾತ್ರಗಳನ್ನುಳಿದು (ಅವುಗಳಲ್ಲಿ ಒಂದು ಗೌಣ) ಮಿಕ್ಕ ಪಾತ್ರಗಳೆಲ್ಲವೂ ಮುಸ್ಲಿಂ ಸಮಾಜಕ್ಕೆ ಸಂಬಂಧಿಸಿವೆ. ಅಂದರೆ ಇದರಲ್ಲಿ ಒಂದು ಬೇರೆ ವಿಧವಾದ ಸಮಾಜದ ಚಿತ್ರ ಅಭಿವ್ಯಕ್ತವಾಗಿದೆ ಎಂಬುದು ಈ ಮಾತಿನ ಅರ್ಥವಲ್ಲ. ಸಾಮಾಜಿಕ ಸಂಪ್ರದಾಯಗಳು, ಆಚಾರ- ವ್ಯವಹಾರಗಳು, ಉಡುಗೆತೊಡುಗೆ ಮುಂತಾದ ಎಲ್ಲ ವಿಷಯಗಳ ದೃಷ್ಟಿಯಿಂದಲೂ ಅಸ್ಸಾಮಿನ ಹಿಂದೂ ಮುಸಲ್ಮಾನರಲ್ಲಿ ಯಾವ ವ್ಯತ್ಯಾಸವೂ ಇಲ್ಲ. ಆದುದರಿಂದ ಓದುಬರಹ ಬಾರದ, ಎಲ್ಲೋ ಮೂಲೆಯ ಹಳ್ಳಿಯೊಂದರಲ್ಲಿ ವಾಸಿಸುವ, ಕಷ್ಟಕಾರ್ಪಣ್ಯಗಳಿಂದ ಕೂಡಿದ ಹೋರಾಟಮಯ ಜೀವನದ ಮಧ್ಯೆ ಬಾಳನ್ನು ಸಾಗಿಸುತ್ತಿದ್ದ ಮುದುಕ-ಮುದುಕಿ, ತರುಣ-ತರುಣಿಯರ ಚಿತ್ರಣ ಪ್ರಸ್ತುತ ಕಾದಂಬರಿಯ ಪಾತ್ರನಿರೂಪಣೆಯಲ್ಲಿ ಸುಂದರವಾಗಿ ಒಡಮೂಡಿದೆ. ಇದಲ್ಲದೆ ಗುಲಚ್, ಕೆಲಾಈ, ತಿಖಿರ್, ಕಪಾಹಿ, ಚೇನಿಮಾಇ, ತರಾ - ಮುಂತಾದ ಹೆಸರುಗಳೂ ಸಹ ಅಪ್ಪಟ ಅಸ್ಸಾಮಿ ಹೆಸರುಗಳೇ. ಕಾದಂಬರಿಯ ಕಥಾವಸ್ತು ಈ ರೀತಿ ಇದೆ: -ಡಾಲಿಮ್ ಹಳ್ಳಿಯ ಇಪ್ಪತ್ತಮೂರು ವರ್ಷದ ತರುಣ ಗುಲಚ್ ಎಂಬುವನು ತನ್ನ ಊರಿನ ಚೇನಿಮಾಇ ಎಂಬುವ

ಹುಡುಗಿಯನ್ನು ಜೊತೆ ಹಾಕಿಕೊಂಡು, ಒಂದು ದಿನ ರಾತ್ರೋರಾತ್ರಿ ಓಡಿ ಹೋಗುತ್ತಾನೆ ಅವರೀರ್ವರೂ ಆ ರಾತ್ರಿಯನ್ನು ನೇಪಾಲಿಯ ದನದ ಕೊಟ್ಟಿಗೆಯಲ್ಲಿ ಕಳೆಯುತ್ತಾರೆ. ಆದರೆ ಸಿಕ್ಕಿಬೀಳುತ್ತಾರೆ. ಗುಲಬ್‌ನ ತಂದೆ ಮಗನ ಈ ದುಷ್ಕಾರ್ಯವನ್ನು ನೋಡಿ ಅವನನ್ನು ಮನೆ ಬಿಟ್ಟು ಓಡಿಸಿದ. ಗುಲಬ್‌ನ ತಾಯಿ ಸಹ ಮಗನೊಡನೆ ಮನೆಬಿಟ್ಟು ಹೊರಟು ಬಂದಳು. ಬೇನಿಮಾಇ ತನ್ನ ತಂದೆ ಮನೆ ಸೇರಿದಳು. ಇತ್ತ ಗುಲಬ್ ಮತ್ತು ಆತನ ತಾಯಿ ಮನೆ ಮಾಡಿಕೊಂಡು ಪ್ರತ್ಯೇಕವಾಗಿ ಇಬ್ಬರೇ ಇರತೊಡಗಿದರು. ಗುಲಬ್ ನದಿಯ ಆ ಕಡೆಯ ಪಾಹಿಯಲ್ಲಿ ಬೇಸಾಯ ಮಾಡತೊಡಗಿದ. ಗುಲಬ್ ಆಗಾಗ್ಗೆ ಪಾಹಿಯಿಂದ ಮನೆಗೆ ಬಂದು ಹೋಗುತ್ತಿದ್ದ. ಒಮ್ಮೊಮ್ಮೆ ತರಾ ಮನೆಗೂ ಸಹ ಭೇಟಿ ನೀಡುತ್ತಿದ್ದ. ಹದಿನಾಲ್ಕು ವರ್ಷದ ತರಾ ತನ್ನ ಚಿಕ್ಕಮ್ಮನ ಜೊತೆಯಲ್ಲಿ ಆ ಹಳ್ಳಿಯ ಒಂದು ಕಡೆಯ ಮನೆಯಲ್ಲಿ ವಾಸವಾಗಿದ್ದಳು. ಕಪಾಹಿಯ ಯೌವನ ಎಂದಿಗೂ ಇಳಿಮುಖವಾಗಿದ್ದಾಗಿರಲಿಲ್ಲ. ಆಕೆಗೆ ಸುಮಾರು ಮೂವತ್ತು ವರ್ಷ ವಯಸ್ಸು. ಆದರೂ ಇನ್ನೂ ಹದಿನಾರರ ಹರೆಯದ ಹೆಣ್ಣಿನಂತೆ ಕಾಣುತ್ತಿದ್ದಳು. ಗುಲಬ್ ಮತ್ತು ತರಾ ಇವರ ಪೂರ್ವರಾಗ ಗಂಭೀರ ಪ್ರೇಮವಾಗಿ ಪರಿವರ್ತಿತವಾಯಿತು. ಸಮಯ ಕಾದು ಗುಲಬ್ ಒಂದು ದಿನ ತರಾಳನ್ನು ಪಾಹಿಗೆ ಕರೆದುಕೊಂಡು ಹೋಗಲು ಉಪಾಯ ಹೂಡಿದ. ಆದರೆ ತರಾಳಿಗೆ ಬದಲಾಗಿ ಕಪಾಹಿಯೇ ವೇಷ ಮರೆಸಿಕೊಂಡು ಆತನ ಜೊತೆಯಲ್ಲಿ ತೆರಳಿದಳು. ಮುಸುಕು ಹಾಕಿಕೊಂಡಿದ್ದ ಕಪಾಹಿಯ ಜೊತೆಯಲ್ಲಿ ಗುಲಬ್‌ನ ವಿವಾಹವನ್ನು ಮೌಲ್ವಿ ಶಾಸ್ತ್ರೀಯವಾಗಿ ನೆರವೇರಿಸಿದ. ಮೊದಲಿಗೆ ಗುಲಬ್ ಕಕ್ಕಾಬಿಕ್ಕಿಯಾದ. ಆನಂತರ ಕಟ್ಟುಪಾಡಿಗೆ ಶರಣಾದ. ಗುಲಬ್ ಮತ್ತು ಕಪಾಹಿ - ಹೊಂ ಸಂಸಾರ ಹೂಡಿದರು. ತರಾ ಸಹ ಅವರಲ್ಲಿಗೆ ತೆರಳಿ, ಆ ಸಂಸಾರದ ಯಾತ್ರಿಕಳಾದಳು. ಗುಲಬ್‌ನ ಕುಟುಂಬ ಧನಧಾನ್ಯಗಳಿಂದ ಸಮೃದ್ಧವಾಯಿತು. ಆತ ಸುಖಿಯಂತೆ ಕಂಡರೂ ಹೃದಯದಲ್ಲಿ ಒಂದು ಅಜ್ಞಾತ ವೇದನೆಯನ್ನು ಅನುಭವಿಸುತ್ತಿದ್ದ. ತರಾಳ ವೇದನೆಯೂ ಸಹ ಮೂಕ ಹಾಗೂ ಅವ್ಯಕ್ತವಾಗಿತ್ತು. ಕಪಾಹಿಯ ಗೈರುಹಾಜರಿಯಲ್ಲಿ ತರಾ ನದಿಯ ದಡದ ಮೆಳೆಗಳ ಮರೆಯಲ್ಲಿ ಗುಲಬ್‌ನ ಸಾನ್ನಿಧ್ಯ ಸುಖದ ಸವಿಯನ್ನು ಸವಿಯುತ್ತಿದ್ದಳು.

ಬೇನಿಮಾಇಯ ವಿವಾಹವು ಮಧ್ಯವಯಸ್ಕ ಹಾಗೂ ರೋಗಿಷ್ಟ ಕೆಲಾಇಯ ಜೊತೆಯಲ್ಲಿ ನೆರವೇರಿತು. ಅವನಿಗೆ ಚಿಕಿತ್ಸೆ ಮಾಡಿಸಲು ಗುಲಬ್ ಅವನನ್ನು ಗೋಲಾಘಾಟ್ ನಗರಕ್ಕೆ ಕರೆದೊಯ್ದ. ಕೆಲಾಇಯನ್ನು ಆಸ್ಪತ್ರೆಗೆ ಸೇರಿಸಿದ ಮೇಲೆ ಗುಲಬ್‌ನು ಒಂದು ರಾತ್ರಿ ಬೇನಿಮಾಇ ಜೊತೆಯಲ್ಲಿ 'ಮೆಸ್' ಒಂದರಲ್ಲಿ ತಂಗಿದ್ದ. ಆನಂತರ ಊರಿಗೆ ಹಿಂತಿರುಗಿದ. ಗುಲಬ್ ಮನೆ ತಲುಪಿದ ಕೂಡಲೇ ಅಲ್ಲಿ ಕೆಲಾಈಯ ತಮ್ಮ ತಿಖರ್ ಕಣ್ಣಿಗೆ ಬಿದ್ದ. ತರಾಳನ್ನು ತಿಖರನಿಗೆ ಕೊಟ್ಟು ಮದುವೆ ಮಾಡಲು ಕಪಾಹಿ ಒಳಸಂಚು ನಡೆಸುತ್ತಿದ್ದಳು. ಇದರ ಸುಳಿವನ್ನು ತಿಳಿದಿದ್ದ ಗುಲಬ್ ಸಹನೆ ಕಳೆದುಕೊಂಡ. ಉಳುಮೆ ಮಾಡುವಾಗ ಎತ್ತುಗಳಿಗೆ ಬಳಸುತ್ತಿದ್ದ ಬಾರುಗೋಲಿನಿಂದ ಒಂದು ದಿನ ಗುಲಬ್‌ನು ಕಪಾಹಿಗೆ ಸಿಕ್ಕಾಪಟ್ಟೆ ಹೊಡೆದು ಮನೆ ಬಿಟ್ಟು ಓಡಿಸಿದ. ಧನಶಿರಿಯ ಮಡಲಿನಲ್ಲಿ ಸಂಧ್ಯಾದೇವಿಯ ಸಾಮ್ರಾಜ್ಯವಿತ್ತು. ಧನಶಿರಿಯು ದಡವನ್ನು ಕೊಚ್ಚಿ ಹಾಕುತ್ತಿತ್ತು. ಬಿರುಗಾಳಿ ಬಾನು ಮತ್ತು ಬುವಿಯನ್ನು ಒಂದಾಗಿ ಮಾಡಿತ್ತು. ತರಾ ಗುಲಬ್‌ನ ಬಳಿಗೆ ಬಂದಳು. ಗುಲಬ್ ಇಷ್ಟು ಮಾತ್ರ ಹೇಳಿದ - "ಪ್ರವಾಹ ಬಂದಿದೆ. ಈ ವರ್ಷದ ಬೆಳೆ ಹಾಳಾಯಿತು. ನಿಮ್ಮ ಚಿಕ್ಕಮ್ಮ

ಸಹ ಹೊರಟು ಹೋದಳು. ಸರ್ವನಾಶವಾಯಿತು. ಹೋಗಲಿ ಬಿಡು. ನೀನಿದ್ದೀಯಲ್ಲಾ."

ಗುಲಚ್-ತರಾ-ಕಪಾಹಿ ಈ ಮೂವರು ಮುಮ್ಮೂಲೆಯ ಪ್ರೇಮ ಸಂಘಾತದ ಮೂಲಕ ಕಾದಂಬರಿಯ ಕಥಾವಸ್ತು ವಿಕಾಸಗೊಂಡಿದೆ. ಚೀನಿಮಾಞ ಈ ಕೇಂದ್ರ ಬಿಂದುವಿಗೆ ಹೊರತಾಗಿದ್ದಾಳೆ. ಆದರೆ ಅವಳದು ಪೋಷಕ ಪಾತ್ರ. ನಿಜಕ್ಕೂ ಚೀನಿಮಾಞಯೇ ಗುಲಚ್‌ನ ಪ್ರಥಮ ಪ್ರೇಯಸಿ. ಆಕೆಯೇ ಗುಲಚ್‌ನ ಹೃದಯದಲ್ಲಿ ತೀವ್ರವಾದ ಕಾಮಜ್ವಾಲೆಯನ್ನು ಹೊತ್ತಿಸಿದ್ದಳು. ಕಾಮಾಸಕ್ತ ಗುಲಚ್ ಯೌವನದ ಹೊಸ್ತಿಲಿನಲ್ಲಿದ್ದ ತರಾಳ ಬಳಿ ಬಂದ. ಇನ್ನೊಂದು ಕಡೆ ಪ್ರೌಢಾವಸ್ಥೆಯ ಕಪಾಹಿ. ಗುಲಚ್‌ನನ್ನು ಬಯಸಿದಳು. ಚಾರಿತ್ರ್ಯಹೀನ ಕಪಾಹಿ ವಯಸ್ಸಿನಲ್ಲಿ ತನಗಿಂತಲೂ ಕಿರಿಯವನಾದ ಗುಲಚ್‌ನಿಗೆ ತನ್ನ ದೇಹವನ್ನು ಅರ್ಪಿಸಲು ಸ್ವಲ್ಪವೂ ಸಂಕೋಚಪಡಲಿಲ್ಲ. (ಬಸೀರತ್‌ನ ಜೊತೆಯಲ್ಲಿ ಕಪಾಹಿ ಅನೈತಿಕ ಸಂಬಂಧವನ್ನು ಹೊಂದಿದ್ದಳೆಂಬ ಸಂಶಯದಿಂದ ಆಕೆಯ ಗಂಡ ಅವಳನ್ನು ಮನೆಯಿಂದ ಓಡಿಸಿದ್ದ.) ಆನಂತರ ಒಂದು ದಿನ ಕಪಾಹಿ ಉಪಾಯಾಂತರದಿಂದ ತರಾಳನ್ನು ವಂಚಿಸಿ, ತಾನೇ ಗುಲಚ್‌ನ ಜೀವನಸಂಗಾತಿಯಾದಳು. ಗುಲಚ್‌ನ ಮನಸ್ಸು ತರಾಳಿಗಾಗಿ ಹಾತೊರೆಯುತ್ತಿತ್ತು. ಆದರೆ ಚೀನಿಮಾಞ ಹೊತ್ತಿಸಿದ ಕಾಮಜ್ವಾಲೆ ಕಪಾಹಿಯನ್ನು ಬಯಸುತ್ತಿತ್ತು. ಆದುದರಿಂದ ಗುಲಚ್‌ನು ಕಪಾಹಿಯನ್ನು ಸಹಜವಾಗಿಯೇ ಬಯಸಿದ. ಆತನ ದೈಹಿಕ ಕಾಮತೃಪ್ತವಾಯಿತು. ಆದರೆ ಅಂತರಾಳದಲ್ಲಿ ತರಾಳ ಚಿತ್ರ ಜೀವಂತವಾಗಿತ್ತು. ತರಾಳನ್ನು ಬೇರೆಯವರಿಗೆ ಕೊಟ್ಟು ಮದುವೆ ಮಾಡುವ ಮಾತನ್ನು ಕೇಳಿದ ಕೂಡಲೇ ಆತನು ಹತಾಶನಾಗುತ್ತಿದ್ದ. ಗುಲಚ್‌ನ ಬಾಳಿನಲ್ಲಿ ಚೀನಿಮಾಞ ಮತ್ತೊಮ್ಮೆ ಕಾಮಜ್ವಾಲೆ ಹೊತ್ತಿಸಿದಳು. ಈ ಸಾರಿ ಗುಲಚ್‌ನು ಕಪಾಹಿಯನ್ನು ತೊರೆದು ಆಕೆಯ ಸ್ಥಾನದಲ್ಲಿ ತರಾಳಿಗೆ ಪಟ್ಟಕಟ್ಟಿದ. ಕಪಾಹಿ ವರ್ಷಾಂತ್ಯದ ಫಸಲಿನಂತಿದ್ದಳು. ಯೌವನದ ಮಹಾಪೂರವು ಗುಲಚ್‌ನ ಮನಸ್ಸಿನ ಏರಿಯನ್ನು ಕೊಚ್ಚಿಹಾಕಿತು. ಕಪಾಹಿ ಅದರಲ್ಲಿ ಕೊಚ್ಚಿಹೋದಳು.

ಕಥಾವಿಕಾಸದ ದೃಷ್ಟಿಯಿಂದ ಕಾದಂಬರಿಯಲ್ಲಿ ಯಾವ ವಿಧವಾದ ಅಸಂಗತಿಯೂ ಇಲ್ಲ. ಸ್ವಾಭಾವಿಕವಾಗಿಯೇ ಅದು ವಿಕಾಸ ಹೊಂದಿದೆ. ಕಪಾಹಿಯು ತರಾಳಿಗೆ ಒಮ್ಮೆ ಕೈಕೊಟ್ಟ ಮೇಲೆ ತರಾಳನ್ನು ಗುಲಚ್ ಮತ್ತು ಕಪಾಹಿಯ ಮಧ್ಯೆ ಮತ್ತೆ ಇರುವಂತೆ ಮಾಡಿದುದು ಸೂಕ್ತವಲ್ಲವೆಂದು ಯಾರಾದರೂ ಪ್ರಶ್ನಿಸಬಹುದು. ಇದಕ್ಕೆ ಹೀಗೆ ಉತ್ತರಿಸಲೂ ಬಹುದು: "ವೈಚಾರಿಕ ಸಾಹಿತ್ಯದ ಸತ್ಯಕ್ಕಿಂತ ರಸಸಾಹಿತ್ಯದ ಸತ್ಯ ತುಸು ಭಿನ್ನ. ವೈಚಾರಿಕ ಸಾಹಿತ್ಯದಲ್ಲಿ ವಾಸ್ತವಿಕ ಸಂಗತಿಯನ್ನು ಯಥಾವತ್ತಾಗಿ ಚಿತ್ರಿಸಿದರೆ ರಸಸಾಹಿತ್ಯದಲ್ಲಿ ಸಂಭಾವ್ಯತೆಯನ್ನು ಯಥಾವತ್ತಾಗಿ ನಿರೂಪಿಸಲಾಗುತ್ತದೆ." ಈ ಹೇಳಿಕೆಯ ಅರ್ಥ ಇಷ್ಟೆ. "ವಿಜ್ಞಾನ ಮತ್ತು ದರ್ಶನದಂತೆಯೇ ಸತ್ಯದೊಡನೆ ರಸಸಾಹಿತ್ಯದ ಗಾಢ ಸಂಬಂಧವಿದೆ. ಆದರೆ ರಸಸಾಹಿತ್ಯದಲ್ಲಿ ಮಾನವನನ್ನಾಗಿ ಕೇಂದ್ರವನ್ನಾಗಿಟ್ಟುಕೊಂಡು ಸತ್ಯವನ್ನು ಪ್ರತಿಪಾದಿಸಲಾಗುತ್ತದೆ. ಮನುಷ್ಯನ ಸುಖ-ದುಃಖ, ಆಶೆ-ನಿರಾಶೆ, ಪ್ರೇಮ-ದ್ವೇಷ, ಮುಂತಾದವುಗಳೇ ರಸಸಾಹಿತ್ಯದ ವರ್ಣ್ಯ ವಿಷಯ. ಆದರೆ ಯಾವ ಘಟನೆಯ ಆಧಾರದ ಮೇಲೆ ಅವುಗಳನ್ನು ವರ್ಣಿಸಲಾಗುತ್ತದೆಯೋ ಆ ಘಟನೆಯು ಯಥಾರ್ಥ ಘಟನೆ ಅಲ್ಲ. ಕಾಲ್ಪನಿಕ ಘಟನೆಯಾದರೂ ಓದುಗರಲ್ಲಿ ವಿಶ್ವಾಸ ಮೂಡಿಸಲು ಅದರಲ್ಲಿ ಯಥಾರ್ಥದ ಛಾಯೆ ಇರಲೇಬೇಕು. ಓದುಗ ಕಾದಂಬರಿಕಾರನ ಕಾಲ್ಪನಿಕ ರಥವನ್ನೇರಿ ವಿಹರಿಸಲು ಸಿದ್ಧನಾಗುತ್ತಾನೆ. ಆದರೆ ಕಾಲ್ಪನಿಕ ಕಥೆ ಸಂಭಾವ್ಯತೆಯ

ಎಲ್ಲೆಯನ್ನು ಉಲ್ಲಂಘಿಸಬಾರದು. ಈ ದೃಷ್ಟಿಯಿಂದ ವಿಚಾರ ಮಾಡಿದರೆ ಪ್ರಸ್ತುತ ಕಾದಂಬರಿಯ ಕಥಾವಸ್ತುವಿನ ವಿಕಾಸ ಹಾಗೂ ವಿನ್ಯಾಸದಲ್ಲಿ ಎಲ್ಲಿಯೂ ಯಾವುದೇ ವಿಧವಾದ ಅವಾಸ್ತವಿಕತೆ ಇಣುಕುವುದಿಲ್ಲ.

ಪಾತ್ರ ಚಿತ್ರಣದ ದೃಷ್ಟಿಯಿಂದ ಗುಲಬ್‌ನ ಪಾತ್ರದಲ್ಲಿ ಆಶೆ-ಆಕಾಂಕ್ಷೆಗಳನ್ನು ಕಾಣಬಹುದು. ಆದರೆ ಅವನಲ್ಲಿ ಸ್ಥಿರತೆಯಿಲ್ಲ. ಆತ ಪರಿಸ್ಥಿತಿಗೆ ಶರಣಾಗುತ್ತಾನೆ. ಚಂದ್ರನ ಪಾತ್ರ ನಿರೂಪಣೆಯಲ್ಲಿ ನಿಸ್ವಾರ್ಥ ಪರೋಪಕಾರ ಭಾವನೆ ಅಧಿಕವಾಗಿದೆ. ಈ ಕಾದಂಬರಿ ಕೇವಲ ಒಂದು ವಿಷಯದಲ್ಲಿ ಮಾತ್ರ ಓದುಗರನ್ನು ಅಸಮಂಜಸತೆಗೆ ಈಡು ಮಾಡುತ್ತದೆ- ಅದೇ ಈರ್ಷ್ಯೆ. ಹಿಂಸಾಪ್ರವೃತ್ತಿಯ ಅಭಾವ. ಚೇನಿಮಾಇ, ಕವಾಹಿ, ತರಾ - ಯಾರ ಮನಸ್ಸಿನಲ್ಲೂ ಪ್ರಣಯ ಈರ್ಷ್ಯೆ ಉದ್ಭವವಾಗಲಿಲ್ಲ.

—**ವಿಶ್ವನಾರಾಯಣ ಶಾಸ್ತ್ರಿ**

# ಒಂದು

ನದಿ ಹೇಳುತ್ತದೆ.

ಗತಕಾಲದ ಮಾತು.

ನದಿಯ ಇಕ್ಕೆಲದ ದಿಣ್ಣೆಗಳಲ್ಲಿ ಮಾತು ಮೇಳವಿಸಿರುತ್ತವೆ. ಇಕ್ಕೆಲದ ಹುಲ್ಲಿನಲ್ಲಿ ಬಹಳ ದಿನಗಳವರೆಗೂ ಮೇಳವಿಸಿಯೇ ಇರುತ್ತವೆ. ಗಾಳಿಯ ಅಲೆಯೊಂದು ಬಂದು ಹುಲ್ಲಿನಲ್ಲಿ ಮೇಳವಿಸಿರುವ ಹಳೆಯ ಮಾತುಗಳನ್ನು ಎಲ್ಲೋ ಕೊಂಡೊಯ್ಯುತ್ತದೆ.

ಆದಾಗ್ಯೂ ಮಾತಂತೂ ಎಂದಿಗೂ ಮುಕ್ತಾಯವಾಗುವುದಿಲ್ಲ.

'ಧನಶಿರಿ'ಗೆ ಬೆಟ್ಟಗುಡ್ಡಗಳ ಮಾತು ಗೊತ್ತು ; ಕಣಿವೆಯ ಮಾತು ಗೊತ್ತು ; ಹಸಿರಿನಿಂದ ಕಂಗೊಳಿಸುವ ಹಳ್ಳಿಯ ಮಾತು ಗೊತ್ತು; ಮಳೆಗಾಲದ ಮಾತು ಗೊತ್ತು; ಬೇಸಿಗೆ ಕಾಲದ ಮಾತೂ ಗೊತ್ತು.

ನದಿಯ ಹೃದಯಾಂತರಾಳದಲ್ಲಿ ಅನಂತ ಕಾಲದ ಮಾತು ಅಡಗಿವೆ. ದುಃಖ, ಆನಂದ, ನಗು, ಅಳು, ಹುಟ್ಟು-ಸಾವು ಇವುಗಳಿಗೆ ಸಂಬಂಧಿಸಿದ ಮಾತು. ಪ್ರೀತಿಗೆ ಸಂಬಂಧಿಸಿದ ಸಮಸ್ತ ಸಂಗತಿ ಧನಶಿರಿಗೆ ಗೊತ್ತು.

ಮಾತು ಹಳೆಯದಾಗುತ್ತದೆ. ಧನಶಿರಿ ಹೊಸದಾಗಿ ಪರಿಣಮಿಸುತ್ತದೆ. ಮಳೆಗಾಲದ ಪ್ರವಾಹ ಬೇಸಿಗೆಯ ವೇದನೆಯನ್ನು ನಿವಾರಿಸುತ್ತದೆ. ಮಾತು ಸಹ ಹೊಸದಾಗಿ ಪರಿಣಮಿಸುತ್ತದೆ.

ಧನಶಿರಿಯ ದಡದಲ್ಲಿ ನೂತನ ಕತೆಯ ಚಿಗುರು ಅಂಕುರಿಸುತ್ತದೆ.

ಧನಶಿರಿಯ ದಡದಲ್ಲಿ ದರಿದ್ರವೂ ಜರಾಜೀರ್ಣವೂ ಆದ 'ಡಾಲಿಮ್' ಗ್ರಾಮ ಇದೆ. ಡಾಲಿಮ್ ಗ್ರಾಮದ ಯುವಕ - ಯುವತಿಯರ ದೇಹದಲ್ಲಿ ದಾಳಿಂಬೆ ಹಣ್ಣಿನ ಬೀಜದಂತೆ ಕಂಗೊಳಿಸುವ ಅರುಣೋಜ್ವಲ ಯೌವನದ ಕಾಂತಿಯನ್ನು ಮೊತ್ತಮೊದಲಿಗೆ ನೋಡಿದ್ದವರು ಯಾರು? ಇದು ಧನಶಿರಿಗೆ ಗೊತ್ತು.

ಮತ್ತಾರಿಗೂ ಗೊತ್ತಿಲ್ಲ.

ನೂರಾರು ವರ್ಷಗಳಿಗಿಂತಲೂ ಹಿಂದಿನ ಹಳೇ ಗ್ರಾಮವೆಂಬುದಕ್ಕೆ ನದಿಯ ದಡದಲ್ಲಿರುವ ಹಳೆಯ ಆಲದ ಮರ, ಭಯಂಕರ ಶ್ಮಶಾನ, ಆ ಗ್ರಾಮದ ಮುದುಕರು ಹೇಳುವ ಪ್ರಾಚೀನ ಕಾಲದ ಜನಪದ ಕತೆಗಳು-ಇವೇ ಸಾಕ್ಷಿ. ನದಿಯ ಘಟ್ಟಗಳಲ್ಲಿ ಸಹಸ್ರಾರು ಯುವಕ -ಯುವತಿಯರ ಹೆಜ್ಜೆಯ ಅಳಿಸಿ ಹೋಗಿರುವ ಗುರುತುಗಳ ನೆನಪು ಉಳಿದಿದೆ. ಸಹಸ್ರಾರು, ಲಕ್ಷಾಂತರ................

ಕಾಲುಗಳು ಶಕ್ತಿಯುತವಾದ ಮೇಲೆ ಮಗು ನಿಲ್ಲಲಾರಂಭಿಸುತ್ತದೆ. ಮಣ್ಣಿನೊಡನೆ ಅದರ ದೇಹದ ಸಂಬಂಧ ಕಡಿಮೆಯಾಗ ತೊಡಗುತ್ತದೆ, ಆದರೆ ಮಣ್ಣು ಕಾಲಿನ ಸಂಬಂಧವನ್ನು ಎಂದಿಗೂ ಬಿಡುವುದಿಲ್ಲ. ಕಾಲಿನೊಡನೆ ಮಣ್ಣಿನ ಸಂಬಂಧ ಯುಗಾಂತರದ್ದು. ಅದು ತಪ್ಪಿ

ಹೋಗದ ಸಂಬಂಧ. ಮಣ್ಣು ಮತ್ತು ಅಂಗಾಲು - ಮಿತ್ರ.

ಧನಶಿರಿ ನಾಗಾ ಬೆಟ್ಟಗುಡ್ಡಗಳಿಂದ ಹರಿದು ಬಂದಿದೆ. ನಾಗಾ ಯುವತಿಯ ನೃತ್ಯಮಯಿ ನಡುವಿನ ಲಯದಂತೆ ಧನಶಿರಿಯ ದೇಹದಲ್ಲಿ ಲಯವಿದೆ. ತುಟಿಗಳಲ್ಲಿ ನಾಗಾ ಯುವತಿಯ ನಗೆ-ಮಧುರ, ಮನೋಹರ-ಕ್ರೂರ.

ಧನಶಿರಿ ನಗುತ್ತದೆ.

ಬ್ರಹ್ಮಪುತ್ರದ ಮಡಿಲಿನಲ್ಲಿ ಅದು ವಿಲೀನವಾಗಿದೆ. ಲುಇತ್ (ಬ್ರಹ್ಮಪುತ್ರ)ನ ಬಾಹುಪಾಶಗಳಲ್ಲಿ ಯಾರನ್ನು ಅರಸುತ್ತಿದೆಯೋ ಗೊತ್ತಿಲ್ಲ. ನಿಲ್ಲಲು ಕ್ಷಣಮಾತ್ರವೂ ಬಿಡುವಿಲ್ಲ.

ಒಂದು ಮಾತು ಹೇಳಿ ಹೋಗಬಾರದೇ..................

ಒಂದು ಮಾತು ಕೇಳಿ ಹೋಗಬಾರದೇ..................

............................ನಿಲ್ಲುವುದಿಲ್ಲ.

ನೃತ್ಯನಿಪುಣೆ ಧನಶಿರಿಯ ನಡುವಿನಲ್ಲಿ ದೇವತೆ ಮೈದುಂಬಿ ಬಂದಿದ್ದಾಳೆ. ದೇವತೆಯಿಂದ ಪ್ರಭಾವಿತವಾದ ನೃತ್ಯದ ಲಯ.

ಧನಶಿರಿ ಹರಿಯುತ್ತಿದೆ.-ದಕ್ಷಿಣದಿಂದ ಉತ್ತರದ ಕಡೆಗೆ-ನಾಗಾ ಬೆಟ್ಟದಿಂದ ಬ್ರಹ್ಮಪುತ್ರದ ಬಳಿಗೆ. ಬಹಳ ದಿನಗಳಿಂದಲೂ ಅದಕ್ಕೆ ಡಾಲಿಮ್ ಗ್ರಾಮ ಗೊತ್ತು.

ಪೂರ್ವಕ್ಕೆ ಧನಶಿರಿ, ಪಶ್ಚಿಮಕ್ಕೆ ಡಾಲಿಮ್. ಧನಶಿರಿಯ ಪಶ್ಚಮ ದಡದಲ್ಲಿ ಡಾಲಿಮ್ ಗ್ರಾಮವಿದೆ. ಎಪ್ಪತ್ತು ಕುಟುಂಬಗಳನ್ನೊಳಗೊಂಡ ಒಂದು ಚಿಕ್ಕ ಹಳೇ ಗ್ರಾಮ. ಹಿಂದೂ, ಮುಸಲ್ಮಾನ್, ನೇಪಾಲಿ, ಮಿಕಿರ್ ಮುಂತಾದ ವಿಭಿನ್ನ ಜನಾಂಗದವರು ವಾಸಿಸುವ ಒಂದು ಗ್ರಾಮ. ನದಿಯ ದಡದಲ್ಲೇ ನೇಪಾಲಿಯರ ಹದಿನೆಂಟು ಕುಟುಂಬಗಳಿವೆ. ಅಲ್ಲಿಯೇ ಅವರ ದನಕರುಗಳನ್ನು ಕೂಡಲು ಜಾಗವಿದೆ. ಮತ್ತು ಅವರ ವಾಸಕ್ಕೆ ಮನೆಮಠಗಳಿವೆ. ಸಾಸಿವೆ, ಜೋಳ ಮುಂತಾದ ಧಾನ್ಯಗಳನ್ನು ಬಿತ್ತುತ್ತಾರೆ. ಹಾಲು ಮಾರುತ್ತಾರೆ. ಮೆಣಸಿನ ಕಾಯಿ ಸೋರೆ ಕಾಯಿ ಮೊದಲಾದ ಬೆಳೆಗಳನ್ನು ಬೆಳೆಯುತ್ತಾರೆ.

ಅಲ್ಲಿಯೇ ಮುಸಲ್ಮಾನರ ಮೂವತ್ತೇಳು ಕುಟುಂಬಗಳಿವೆ. ಹೊಸ ಡಾಲಿಮ್ ಮತ್ತು ಹಳೆ ಡಾಲಿಮ್ ಎಂದು ಎರಡು ಬೇರೆ ಬೇರೆ ಮೊಹಲ್ಲಾಗಳಾಗಿದ್ದರೂ ಡಾಲಿಮ್ ಗ್ರಾಮ ಒಂದೇ.

ಬತ್ತ ಬೆಳೆಯುತ್ತಾರೆ. ಸಾಸಿವೆ, ಉದ್ದು, ಸಣಬು ಸಹ ಬೆಳೆಯುತ್ತಾರೆ. ನದಿಯ ಅತ್ತಕಡೆ ಪೂರ್ವಕ್ಕೆ ಋತುಗನುಗುಣವಾದ ಬೇಸಾಯ ಮಾಡುತ್ತಾರೆ; ವಿವಾಹದಲ್ಲಿ ಭಾರಿ ಔತಣ ಏರ್ಪಾಡಿಸಿ ಊಟ ಮಾಡುತ್ತಾರೆ. ಹೊಡದಾಟ-ಬಡಿದಾಟ ಮಾಡುತ್ತಾರೆ; ತೆಪ್ಪಗೂ ಇರುತ್ತಾರೆ.

ಅಲ್ಲಿ ಹಿಂದೂ ಕುಟುಂಬಗಳೇ ಹೆಚ್ಚಾಗಿವೆ - ಕಛಾರಿ ಜನಾಂಗ ಮತ್ತು ಸುತ್ ಜನಾಂಗದವರು ಇದ್ದಾರೆ. ಒಂದು ಬ್ರಾಹ್ಮಣ ಕುಟುಂಬವೂ ಇದೆ. ಮಿಕಿರರ ಕುಟುಂಬಗಳು ಎಂಟು ಇವೆ.

ಈಶ್ವರ, ಅಲ್ಲಾ, ಮೂರ್ತಿ, ವೃಕ್ಷ-ಎಲ್ಲವನ್ನೂ ಪೂಜಿಸುತ್ತಾರೆ. ಎರಡು ಮಸೀದಿಗಳಿವೆ, ಒಂದು ದೇವಾಲಯವಿದೆ.

ಮುಚ್ಚಂಜೆಯ ವೇಳೆಯಲ್ಲಿ ಈಶ್ವರ ಆ ಗ್ರಾಮದಲ್ಲಿ ಅವತರಿಸುತ್ತಾನೆ. ಹಿಂದೂ

ಕುಟುಂಬದ ಅಂಗಳದಲ್ಲಿ ಯಾರಾದರೊಬ್ಬ 'ಬರಗೀತೆ' (ಉದಾತ್ತ ಭಾವದಿಂದ ಕೂಡಿದ ಪ್ರಾಚೀನ ಭಕ್ತಿಗೀತೆ)ಯ ಒಂದು ಪಂಕ್ತಿಯನ್ನು ರಾಗದಿಂದ ಹಾಡುತ್ತಾನೆ.

-ಪಾವೆ ಪರಿಹರ್, ಕರಿಹೋಂ ಕಾತರಿ -

ಶುಕ್ರವಾರದ ದಿನ ಮಸೀದಿಗೆ 'ಅಲ್ಲಾ' ಆಗಮಿಸುತ್ತಾನೆ.

ನಮಾಜು ನಡೆಯುತ್ತದೆ -ಅಲ್ಲಾ - ಹು -ಅಕ್ಬರ್

ಧನಶಿರಿಯಲ್ಲಿ ತುಂಬು ಪ್ರವಾಹ ಹರಿದಾಗ, ಕಾಡಾನೆ ಹೊರಗೆ ಬಂದಾಗ, ಯಾರ ಮನೆಗಾದರೂ ಬೆಂಕಿ ತಗುಲಿದಾಗ, ಕಾಲರಾ-ಸಿಡುಬು ಕಾಣಿಸಿಕೊಂಡಾಗ ಅಲ್ಲಾ-ಈಶ್ವರ ಒಟ್ಟಿಗೆ ಆ ಗ್ರಾಮಕ್ಕೆ ದಯಮಾಡಿಸುತ್ತಾರೆ. ತುಳಸಿ ಗಿಡದ ಬಳಿ ದೀಪ ಉರಿಯುತ್ತದೆ-ಮಸೀದಿಯಲ್ಲಿ ಮೋಂಬತ್ತಿ ಉರಿಯುತ್ತದೆ-ವಟವೃಕ್ಷದ ಕೆಳಗೆ ಸಿಂದೂರವನ್ನೇ ತಲೆದಿಂಬಾಗಿ ಮಾಡಿಕೊಂಡು ಕಾಡು ಹೂವು ನಿದ್ರಿಸತೊಡಗುತ್ತದೆ.

ಇನ್ನುಳಿದ ವೇಳೆಯಲ್ಲಿ ಅಲ್ಲಾ-ಈಶ್ವರ ಈರ್ವರಿಗೂ ರಜೆ.

ಜನಸಂಖ್ಯೆ ಕಡಿಮೆ.

ಸಾಕಷ್ಟು ಫಲವತ್ತಾದ ಜಮೀನಿದೆ. ಡಾಲಿಮ್ ಗ್ರಾಮದ ಪಶ್ಚಿಮಕ್ಕೆ ಮತ್ತು ದಕ್ಷಿಣಕ್ಕೆ 'ನಾಮಘರ್' ಕಾಡಿನ ಶಾಖೋಪಶಾಖೆಯ ದಟ್ಟವಾದ ಕಾಡುಗಳಿವೆ. ಅಲ್ಲಿ ದೊಡ್ಡ ದೊಡ್ಡ ಮರಗಳೂ, ಹಾವುಗಳೂ, ಹುಲಿಗಳೂ ಇವೆ. ಗೇಂಡಾಮೃಗದ ಭಯಂಕರ ಗರ್ಜನೆ ಕೇಳಿಬರುತ್ತದೆ. ಹುಲಿರಾಯ ಆಗಿಂದಾಗ್ಗೆ ಬಂದು ದನದ ಕೊಟ್ಟಿಗೆಗಳಿಂದ ಹಸು-ಎಮ್ಮೆ ಎತ್ತಿಕೊಂಡು ಹೋಗುತ್ತದೆ. ಆನೆ ಬತ್ತದ ಫಸಲನ್ನು ನಾಶಪಡಿಸುತ್ತದೆ-ಮನೆಯನ್ನೂ ಮುರಿದು ಹಾಕುತ್ತದೆ.

ಡಾಲಿಮ್ ಗ್ರಾಮದಿಂದ ಹೊರಗೆ ಹೋಗಲು ಯಾವ ನಿರ್ದಿಷ್ಟವಾದ ರಸ್ತೆಯೂ ಇಲ್ಲ. ಗ್ರಾಮದ ನಟ್ಟನಡುವೆ ಪೂರ್ವ -ಪಶ್ಚಿಮ ಒಂದು ಹಳೆ ರಸ್ತೆ ಇದೆ. ಅದು ಆ ಗ್ರಾಮದವರೇ ನಿರ್ಮಿಸಿದ ರಸ್ತೆ. ಅದು ಸಹ ಮಧ್ಯೆ ಮಧ್ಯೆ ಹಾಳಾಗಿದೆ. ಆ ಗ್ರಾಮದವರು ಹೋಗಿ ಬರಲು ಯಾವ ರಸ್ತೆಯ ಆವಶ್ಯಕತೆಯೂ ಇಲ್ಲ. ಹಸು-ಎಮ್ಮೆಗಳು ಹೋಗಿಬರಲು ರಸ್ತೆ ಇದ್ದರೆ ಸಾಕು. ಯಾವ ಕಡೆಯಿಂದಲಾದರೂ ಧನಶಿರಿಯ ದಡ ತಲುಪಿದರೆ ಸಾಕು. ಮತ್ತಾವ ರಸ್ತೆಯ ಆವಶ್ಯಕತೆಯೂ ಇಲ್ಲ.

ಅಲ್ಲಿಂದ ಮೂವತ್ತೆರಡು ಮೈಲಿ ದೂರದಲ್ಲಿ ಗೋಲಾಘಾಟ್ ನಗರವಿದೆ. ವ್ಯಾಜ್ಯವಿನಾ ಯಾರೂ ಗೋಲಾಘಾಟ್‌ಗೆ ಹೋಗುವ ಆವಶ್ಯಕತೆಯೇನೂ ಇಲ್ಲ. ವ್ಯಾಜ್ಯ ಸಹ ಸದಾ ಇರುವುದಿಲ್ಲ.

ಡಾಲಿಮ್ ಘಟ್ಟದ ಕಡೆಯಿಂದ ಧನಶಿರಿಯನ್ನು ದಾಟಿದರೆ ಅರ್ಧ ಮೈಲಿಯವರೆಗೂ ರಸ್ತೆ ಸುತರಾಂ ನಿರ್ಜನ ಪ್ರದೇಶ. ಆನಂತರ ಆ ಕಡೆಯ ಒಂದು ಹಳ್ಳಿ ಸಿಗುತ್ತೆ. ಆ ಹಳ್ಳಿಯ ಮಧ್ಯದ ರಸ್ತೆಯ ಮೂಲಕ ಆರು ಮೈಲಿ ಮುಂದಕ್ಕೆ ಹೋದರೆ ಒಂದು ದೊಡ್ಡ ರಸ್ತೆ ಸಿಗುತ್ತದೆ. ಅದೇಗೋಲಾಘಾಟ್-ಡಿಮಾಪುರದ ರಸ್ತೆ. ಆ ರಸ್ತೆಯಲ್ಲಿ ಬಸ್ಸುಗಳು, ಕಾರುಗಳು ಮತ್ತು ಎತ್ತಿನ ಗಾಡಿಗಳು ಓಡಾಡುತ್ತವೆ. ಅಂಗಡಿಯಿಟ್ಟಿರುವ ರಹೀಮ್ ಮತ್ತು ಚಂದ್ರಕಾಂತ್-ಅವರಿಬ್ಬರೂ ಇದೇ ರಸ್ತೆಯಲ್ಲಿ ಬಸ್ಸಿನಲ್ಲಿ ಅಂಗಡಿ ಸಾಮಾನು ತರುತ್ತಾರೆ. ಒಂದು ಡಬ್ಬ ಸೀಮೆ ಎಣ್ಣೆ, ಹತ್ತು ಸೇರು ಉಪ್ಪು, ಒಂದು ಬಂಡಲು ಬೀಡಿ, ಒಂದೂಕಾಲು

ಸೇರು ಹೊಗೆಸೊಪ್ಪು ಮತ್ತು ಬಣ್ಣದ ಚೀಟಿಬಟ್ಟೆ ತರುತ್ತಾರೆ.

ಡಾಲಿಮ್ ಗ್ರಾಮದಲ್ಲಿ ಬಸ್ಸು, ಕಾರು ರೈಲುಗಾಡಿಗಳಿಲ್ಲ. ಅವುಗಳ ಓಡಾಟವೂ ಇಲ್ಲ. ಎರಡೋ ಅಥವಾ ಮೂರೋ ಎತ್ತಿನ ಗಾಡಿಗಳಿವೆ.

ಅವರ ನೆತ್ತಿಯ ಮೇಲೆ ವಿಮಾನಗಳು ಹಾರಾಡುತ್ತವೆ. ಅವರು ವಿಮಾನವನ್ನು ನೋಡಿದ್ದಾರೆ. ಆದರೆ ಬಹಳ ಮಂದಿ ರೈಲುಗಾಡಿ ನೋಡಿಲ್ಲ; ಬಸ್ಸು-ಕಾರು ನೋಡಿಲ್ಲ; ತಾರಸಿ ಮನೆ ಸಹ ನೋಡಿಲ್ಲ.

ಗೋಲಾಘಾಟ್‌ಗೆ ಹೋಗಿಬಂದ ಒಬ್ಬೊಬ್ಬರೂ ಒಂದೊಂದು ವಿಚಿತ್ರವಾದ ಕತೆ ಹೇಳುತ್ತಾರೆ. ಮಕ್ಕಳು-ಮರಿಗಳು ಮತ್ತು ಸ್ತ್ರೀಯರು ಕಿವಿಗೊಟ್ಟು ಕೇಳುತ್ತಾರೆ. ಎಂಥ ವಿಚಿತ್ರ ಮಾತು-ಅಪರಿಚಿತ. ಸ್ತ್ರೀಯರು ವಿಸ್ಮಿತರಾಗಿ ಒಬ್ಬರ ಮುಖವನ್ನೊಬ್ಬರು ನೋಡ ತೊಡಗುತ್ತಾರೆ. ತಾವೇ ಹೋಗಿ ನೋಡಿ ಬಂದರೆ? ಎಂದು ಯೋಚಿಸುತ್ತಾರೆ.

ಆದರೆ ಮರುಕ್ಷಣದಲ್ಲೇ ಅವರು ನಗರದ ಆಕರ್ಷಣೆಯನ್ನು ಮರೆಯುತ್ತಾರೆ. ಮಣ್ಣು ಆಹ್ವಾನಿಸುತ್ತದೆ ಪರಿಚಿತ - ಪ್ರೀತಿಯ ಕರೆ.

ಹಳೆಯ ಮತ್ತು ಹೊಸ ಡಾಲಿಮ್ ಗ್ರಾಮದ ಮಧ್ಯೆ ಒಂದು ಹಳೇ ಪಾಠಶಾಲೆ ಇದೆ. ಲೋಕಲ್ ಬೋರ್ಡಿನ ಕಾಲದಲ್ಲೇ ಅದರ ಸ್ಥಾಪನೆಯಾಗಿತ್ತು. ಕಟ್ಟಡವನ್ನು ರೈತರೇ ಕಟ್ಟಿದ್ದರು. ಮಂದಿರದ ಹಾಗೆ ದೊಡ್ಡ ದೊಡ್ಡ ಕಂಬಗಳಿಂದ ಕೂಡಿದ ವಿಶಾಲವಾದ ಕಟ್ಟಡ. ಮೊದಲಿಗೆ ಇಲ್ಲಿ ಮಫೀಜ್ ಪಂಡಿತ್ ಪಾಠ ಹೇಳಿಕೊಡುತ್ತಿದ್ದ. ಆತ ನಗರದಲ್ಲಿದ್ದು ಕೊಂಡು ಎರಡನೇ ತರಗತಿಯವರೆಗೆ ಇಂಗ್ಲೀಷ್ ಸಹ ಓದಿದ್ದ. ಆತ ಅದೇ ಗ್ರಾಮದವನು. ಮಫೀಜ್‌ನ ತರುವಾಯ ಈಗ ಜಯರಾಮ್ ಪಾಠ ಹೇಳಿಕೊಡುತ್ತಾನೆ. ಪಾಠಶಾಲೆಯ ಹಾಜರಿ ಪುಸ್ತಕದಲ್ಲಿ ಹದಿನೈದು ಅಥವಾ ಹದಿನಾರು ವಿದ್ಯಾರ್ಥಿಗಳ ಹೆಸರುಗಳಿವೆ. ಹನ್ನೆರಡು-ಹದಿಮೂರು ಚಾಪೆಗಳಿವೆ. ಆರೇಳು ಮಂದಿಗಿಂತ ಹೆಚ್ಚಾಗಿ ಹುಡುಗರು ಹಾಜರಾಗುವುದಿಲ್ಲ. ಜಯರಾಮ್ ಏನೂ ಸಿಟ್ಟುಮಾಡಿಕೊಳ್ಳುವುದಿಲ್ಲ. ಹೇಗೋ ಅಕ್ಷರದ ಪರಿಚಯವಾದರೆ ಸಾಕು. ಡಾಲಿಮ್ ಗ್ರಾಮದ ಹುಡುಗರು ವಕೀಲ-ಮುನ್ಸಿಫ್ ಆಗುತ್ತಾರೆಯೇ?

ಪಾಠಶಾಲೆಯ ಮೇಲ್ವಿಚಾರಣೆಗೆ ಸಹ ಇಲ್ಲಿಯವರೆಗೆ ಯಾರು ಬಂದಿಲ್ಲ. ಹ್ಯಾಟು ಕೋಟು ಧರಿಸಿಕೊಂಡು ಡೆಪ್ಯೂಟಿ ಇನ್‌ಸ್ಪೆಕ್ಟರ್ ಅಂತ ಯಾರೋ ಒಂದು ಸಾರಿ ಬಂದಿದ್ದರೆಂದು ಹೇಳುತ್ತಾರೆ. ಆಗ ಗ್ರಾಮಸ್ಥರು ಭಯದಿಂದ ತಮ್ಮ ತಮ್ಮ ಮನೆಗಳಲ್ಲೇ ಇದ್ದು ಬಿಟ್ಟರಂತೆ. ಮಫೀಜ್ ಪಂಡಿತ್ ಸಹ ಭಯದಿಂದ ನಡುಗುತ್ತಿದ್ದನಂತೆ. ಅನಂತರ ಇಲ್ಲಿಯತನಕ ಯಾರೂ ಬಂದಿಲ್ಲ-ಒಳ್ಳೆಯದೇ ಆಯಿತು.

ಜಯರಾಮ್ ನಾಲ್ಕಾರು ತಿಂಗಳಿಗೊಮ್ಮೆ ನಗರಕ್ಕೆ ಹೋಗುತ್ತಾನೆ. ಎಸ್.ಐ.ಡಿ.ಐ.ಗೆ ಒಂದೆರಡು ವಸ್ತುಗಳನ್ನು ಲಂಚವಾಗಿ ಕೊಟ್ಟು ಮೂರು ನಾಲ್ಕು ದಿವಸಗಳು ಅಲ್ಲೇ ಇದ್ದು ವೇತನ ಪಡೆದು ಬರುತ್ತಾನೆ. ಆ ಹಣದಲ್ಲಿ ಸ್ವಲ್ಪ ಹಣವನ್ನು ಗುಮಾಸ್ತೆ ಸಾಲವಾಗಿ ತೆಗೆದು ಕೊಳ್ಳುತ್ತಾನೆ. ಆದರೂ ಜಯರಾಮ್‌ಗೆ ಸಂತೋಷವೇ. ಆತನಿಗೆ ಸಂಬಳದ ಹಣ ಅಮಲ್ದಾರರಿಗೆ ಸಲ್ಲಿಸುವ ಕಂದಾಯದಂತೆ ಭಾಸವಾಗುತ್ತದೆ. ಸಂಬಳದ ಹಣ ಪಡೆದಂತಾಗುತ್ತದೆ; ಒಂದು ಸಾರಿ ನಗರವನ್ನೂ ನೋಡಿ ಬಂದಂತೆ ಆಗುತ್ತದೆ.

ಧನಶಿರಿಯ ದಡದಲ್ಲೇ 'ಫಾರೆಸ್ಟ್ ಬೀಟ್ ಹೌಸ್' ಇದೆ. ಅಲ್ಲಿ ಅರಣ್ಯಾಧಿಕಾರಿ

ಇರುತ್ತಾನೆ. ಆ ಕ್ಷೇತ್ರಕ್ಕೆ ಅವನೇ ಎಲ್ಲರಿಗಿಂತ ದೊಡ್ಡ ಅಧಿಕಾರಿ. ಖಾಕಿ ಬಣ್ಣದ ಅಂಗಿ ಧರಿಸುತ್ತಾನೆ. ಬೂಟು ಹಾಕಿರುತ್ತಾನೆ. ಕೈಯಲ್ಲಿ ಬಂದೂಕ ಹಿಡಿದು ಸುತ್ತಾಡುತ್ತಿರುತ್ತಾನೆ.

ಆ ಗ್ರಾಮದಲ್ಲಿ ನಾಲ್ಕು ಬಂದೂಕಗಳಿವೆ. ಬಾಪುಕನ್, ಜಯನೂರ್, ಬಹಾದುರ್ ಮತ್ತು ಪ್ರೇಮಕಾಂತ್- ಇವರ ಹತ್ತಿರ ಒಂದೊಂದು ಬಂದೂಕ ಇದೆ. ಜಯನೂರ್‌ನ ಬಂದೂಕ ಎಲ್ಲಕ್ಕಿಂತ ಚೆನ್ನಾಗಿದೆ. ಅದು ಎರಡು ನಳಿಕೆಗಳ ಬಂದೂಕ.

ಗ್ರಾಮದ ಯುವಕರು ಹಾಗೂ ಮುದುಕರು ಬಂದೂಕಕ್ಕಿಂತ ಕಡುಗತ್ತಿ, ಕೊಡಲಿ ಮತ್ತು ಭರ್ಜಿಗಳನ್ನೇ ಹೆಚ್ಚಾಗಿ ಉಪಯೋಗಿಸುತ್ತಾರೆ. ಅನೇಕ ಹುಲಿಗಳಿಗೆ ನೇಪಾಲಿ ಚೂರಿಯ ಸವಿ ದೊರೆತಿದೆ. ಆದಾಗ್ಯೂ ಹಳ್ಳಿಗಳಲ್ಲಿ ಬಂದೂಕವಿರುವುದು ಒಂದು ಗೌರವದ ಮಾತು.

ಒಮ್ಮೊಮ್ಮೆ ಎಲ್ಲಿಯಾದರೂ ಕೆಂಪು ಪೇಟಾ ಮತ್ತು ಖಾಕಿ ವಸ್ತ್ರ ಧರಿಸಿದ ಪೋಲೀಸಿನವರು ಬರುತ್ತಾರೆ-ಇಬ್ಬರು ಅಥವಾ ಮೂವರು. ಇಡೀ ಹಳ್ಳಿಯ ಜನರಿಗೆ ಪೋಲೀಸಿನವರನ್ನು ಕಂಡರೆ ಭಯ. ಒಂದು ವೇಳೆ ಅವರು ಹಿಡಿದುಕೊಂಡು ಹೋದರೆ ಹಳ್ಳಿಯವರು ಏನು ತಾನೇ ಮಾಡಿಯಾರು? ಹಳ್ಳಿಗೆ ಪೋಲೀಸಿನವರು ಬರುವುದು ಯಾರಿಗೂ ಇಷ್ಟವಿಲ್ಲ. ವಾದಿ-ಪ್ರತಿವಾದಿಗಳಿಗೂ ಇಷ್ಟವಿಲ್ಲ. ಎರಡು ಪಕ್ಷದವರೂ ಲಂಚ ಕೊಟ್ಟು ಆದಷ್ಟು ಬೇಗ ಅವರನ್ನು ಬೀಳ್ಕೊಡುತ್ತಾರೆ.

ಹಳ್ಳಿಗೆ ಪೋಲೀಸಿನವರು ಕಾಲಿಡುವುದು ಮತ್ತು ಕಾಡಿನಿಂದ ಹುಲಿರಾಯ ಹೊರಡುವುದು-ಎರಡು ಒಂದೆ. ಹುಲಿರಾಯನನ್ನು ಓಡಿಸಬಹುದು. ಆದರೆ ಪೋಲೀಸಿನವರನ್ನು!

ಹಳ್ಳಿಗೆ ಪೋಲೀಸಿನವರನ್ನು ಕರೆತಂದ ವ್ಯಕ್ತಿಗಳನ್ನು ಎಲ್ಲರೂ ನಿಂದಿಸುತ್ತಾರೆ. ಪೋಲೀಸಿನವರು ಹಳ್ಳಿಗೆ ಕಾಲಿಟ್ಟದ್ದೇ ಆದರೆ ಹಳ್ಳಿಯ ಮರ್ಯಾದೆ ಏನು ಉಳಿಯಿತು? ಹಳ್ಳಿಯವರು ತಮ್ಮ ತಮ್ಮ ವ್ಯವಹಾರಗಳನ್ನು ತಮ್ಮ ತಮ್ಮಲ್ಲಿಯೇ ಬಗೆಹರಿಸಿಕೊಳ್ಳಲಾರರೆ? ಎಷ್ಟೋ ತಲೆಮಾರು ಕಳೆದು ಹೋಗಿವೆ.

ಮತ್ತಾವ ಜಗಳವೂ ಇಲ್ಲ.

ಪೋಲೀಸಿನವರ ಬೂಟಿನ ಚಿಹ್ನೆಗಳು ಧನಶಿರಿಯ ವಕ್ಷಸ್ಥಳದಲ್ಲಿ ಉಳಿಯುವುದಿಲ್ಲ. ನದಿಯ ದಡದಲ್ಲಿರುವ ಬೂರುಗ ವೃಕ್ಷದ ಹೂವುಗಳು ತಮ್ಮ ಅಪಾರ ಸೌಂದರ್ಯದಿಂದ ಕಂಗೊಳಿಸುತ್ತವೆ. ಪೋಲೀಸಿನವರ ಕೆಂಪು ಪೇಟದ ವಿಷಯವನ್ನು ಎಲ್ಲರೂ ಮರೆತುಬಿಡುತ್ತಾರೆ.

ನಗರದಿಂದ ತುಂಬಾ ದೂರವಿಲ್ಲ-ಆದಾಗ್ಯೂ ಸಾಕಷ್ಟು ದೂರವಿದೆ. ಈ ಯುಗದ-ಆದಾಗ್ಯೂ ಬಹಳ ಹಿಂದಿನವ. ಅಡೆತಡೆಯಿಲ್ಲದ ಸೂರ್ಯನ ಪ್ರಕಾಶ ಸದಾ ಅವನನ್ನು ಪ್ರಕಾಶಗೊಳ್ಳುವಂತೆ ಮಾಡಿ ಹೋಗುತ್ತೆ-ಆದಾಗ್ಯೂ ಡಾಲಿಮ್ ಗ್ರಾಮವನ್ನು ದಟ್ಟವಾದ ಕಾಡಿನ ಆದಿಗತ್ತಲು ಆವರಿಸಿಯೇ ಇರುತ್ತದೆ.

ವರ್ಷ ಕಳೆದಂತೆ ಹೊಸ ವರ್ಷ ಬರುತ್ತದೆ. ಡಾಲಿಮ್ ಗ್ರಾಮದಲ್ಲಿ ಯಾವ ಬದಲಾವಣೆಯೂ ಇಲ್ಲ. ಆ ಗ್ರಾಮ ಒಂದು ವರ್ಷ ಹಳೆಯದಾಗುತ್ತದೆ. ಕಾಲಚಕ್ರದ ಗತಿಯಿಂದ ಯಥೇಷ್ಟ ದೂರದಲ್ಲೇ ಡಾಲಿಮ್ ಗ್ರಾಮ ನಿಷ್ಪಂದವಾಗಿದೆ

ಚುನಾವಣೆಯ ದಿವಸಗಳಲ್ಲೂ ಡಾಲಿಮ್ ಗ್ರಾಮದಲ್ಲಿ ರಾಜಕೀಯದ ಸುಳಿವಿಲ್ಲ.

ಯಾರೋ ಉಮೇದುವಾರನ ಏಜೆಂಟ್ ಬರುತ್ತಾನೆ. ಓದಲಾಗದ ಮುದ್ರಿತ ಪ್ರತಿಗಳನ್ನು ತರುತ್ತಾನೆ. ಗ್ರಾಮದ ಮೂರು-ನಾಲ್ಕು ಮಂದಿ ಚತುರ ಮುದುಕರು ಎಲ್ಲಾ ಉಮೇದುವಾರರಿಂದ ಹಣ ಲಪಟಾಯಿಸುತ್ತಾರೆ. ಓಟು ಮಾಡುವ ದಿನ ಸುತ್ತಾಡಿಕೊಂಡು ಬರಲು ಬೇರೆ ಹಳ್ಳಿಗೆ ಹೋಗುತ್ತಾರೆ. ಓಟಿನ ಪೆಟ್ಟಿಗೆ ಇಡೀ ದಿನ ಅವರ ನಿರೀಕ್ಷಣೆಯಲ್ಲಿರುತ್ತದೆ. ಸಾಯಂಕಾಲವಾದ ಮೇಲೆ ಖಾಲಿ ಪೆಟ್ಟಿಗೆಯನ್ನೇ ನಗರಕ್ಕೆ ಸಾಗಿಸಲಾಗುತ್ತದೆ. ಡಾಲಿಮ್ ಗ್ರಾಮದ ಓಟುಗಳಿಲ್ಲದೆಯೇ ಯಾರೋ ಉಮೇದುವಾರ ಜಯಗಳಿಸುತ್ತಾನೆ. ಗಣ್ಯವ್ಯಕ್ತಿ ಎನಿಸಿಕೊಳ್ಳುತ್ತಾನೆ. ಬೇರೆ ಯಾರೋ ಸೋಲುತ್ತಾರೆ.

ಸೋತರೆ ಏನಾಗುತ್ತೆ?-ಯಾರಿಗೂ ಗೊತ್ತಿಲ್ಲ.

ಪಶ್ಚಿಮಕ್ಕೆ ಕಾಡಿನ ಮಧ್ಯೆ ದೊಡ್ಡ ದೊಡ್ಡ ಸರೋವರಗಳಿವೆ. ಆ ಸರೋವರಗಳಲ್ಲಿ ದಪ್ಪ ದಪ್ಪ ಮೀನು ಮತ್ತು ಆಮೆಗಳಿವೆ. ಡಾಲಿಮ್ ಗ್ರಾಮದ ಯಾವ ನಿವಾಸಿಯೂ ಮಾಮೂಲಿ ಊಟ ಮಾಡುವ ಅಗತ್ಯವಿಲ್ಲ. ಗಾಳ ತೆಗೆದುಕೊಂಡು ಹೊರಟರೆ ಒಂದು ಮೂಟೆ ಮೀನು ಹಿಡಿಯಬಹುದು.

ಧನಶಿರಿಯೂ ಸಹ ತನ್ನ ಗರ್ಭದಲ್ಲಿ ಮೀನುಗಳನ್ನು ಬಚ್ಚಿಡುವುದಿಲ್ಲ.

## ಎರಡು

ಎಷ್ಟು ಹೊತ್ತಾಗಿದೆ ಎಂಬುದು ಗೊತ್ತಿಲ್ಲ. ಮೂರನೆಯ ಜಾವ ಕಳೆದಿರಬೇಕೆಂದು ಊಹಿಸಲಾಗುತ್ತಿತ್ತು. ಶರೀರ ಭಾರವಾದಂತೆ ಭಾಸವಾಗುತ್ತಿತ್ತು. ನಿನ್ನೆ ಬೆಳಿಗ್ಗೆಯಿಂದ ಮಳೆ ಬೀಳುತ್ತದೆ-ಭಾರಿ ಮಳೆ. ಡಾಲಿಮ್ ಗ್ರಾಮದಲ್ಲಿ ಮಳೆ ಬೀಳತೊಡಗಿದರೆ ಬೇಗ ಬಿಡುವುದಿಲ್ಲ. ಹಾದಿಬೀದಿಗಳೆಲ್ಲಾ ಕೊಳೆತು ನಾರುತ್ತವೆ. ಮನೆ-ಮಠಗಳೆಲ್ಲಾ ಕೊಳಕು. ದನಕರುಗಳಿಗೆ ಕಷ್ಟ. ಮಕ್ಕಳುಮರಿ ಮನೆಯಿಂದ ಹೊರಗೆ ಬರುವಂತಿಲ್ಲ. ಯುವಕ-ಯುವತಿಯರು ಹೊರಗಡೆ ಬರದಿದ್ದರೆ ಕುಟುಂಬದ ನಿರ್ವಹಣೆ ಸಾಧ್ಯವಿಲ್ಲ.

ಗುಲಬ್ ಒಂದು ಸಾರಿ ಪಶ್ಚಿಮ ದಿಕ್ಕಿನ ಕಡೆ ನೋಡಿದ. ಮೋಡ ಕವಿದಿತ್ತು. ಇಡೀ ವಾರ ಮಳೆ ಬೀಳುತ್ತಿದೆ. ಕೆಲವು ದಿನಗಳ ಹಿಂದೆಯೇ ಮನೆಯ ಛಾವಣಿಯನ್ನು ರಿಪೇರಿ ಮಾಡ ಬೇಕಾಗಿತ್ತು. ಮನೆ ತುಂಬ ನೀರಿನ ಮಡುವೇ ನಿಂತಿರಬೇಕು! ರಿಪೇರಿ ಎಂದೋ ಆಗಬೇಕಾಗಿತ್ತು. ಆದರೆ ಅವನಿಗೆ ಬಿಡುವೇ ಇಲ್ಲ. ಮನೆಯ ಹೊರಗಡೆ ಹೊಲದಲ್ಲೇ ಆತ ಹೆಚ್ಚು ಸಮಯ ಕಳೆಯಬೇಕಾಗುತ್ತೆ.

ಅದರಲ್ಲೂ ಎಲ್ಲರೂ ಅವನನ್ನು ಸ್ವಲ್ಪ ಬೇಜವಾಬ್ದಾರಿ ಮನುಷ್ಯ ಅಂತ ಹೇಳುತ್ತಾರೆ. ಎಲ್ಲಿಗಾದರೂ ಹೋದರೆ ಹಿಂದಿರುಗಿ ಬರುವ ಯೋಚನೆಯೇ ಇಲ್ಲ. ಎಲ್ಲಾದರೂ ಕುಳಿತರೆ ಕುಳಿತೇ ಇರುತ್ತಾನೆ. ಮೇಲಕ್ಕೆ ಏಳುವುದೇ ಇಲ್ಲ.

ಬಹುಶಃ ಇದು ಸುತರಾಂ ಸುಳ್ಳೇನೂ ಅಲ್ಲ!

ಆತನ ತಾಯಿಯಂತೂ ಇದೇ ವಿಷಯವಾಗಿ ಸದಾ ಆತನನ್ನು ಗದರಿಸುತ್ತಾಳೆ.

ತನ್ನ ತಾಯಿಯ ಬಗ್ಗೆ ಗುಲಬ್‌ನಿಗೆ ಹೆಚ್ಚು ಪ್ರೀತಿಯೂ ಇಲ್ಲ, ಚಿಂತೆಯೂ ಇಲ್ಲ. ಆಕೆ ಅಷ್ಟೇನೂ ಮುದುಕಿಯಲ್ಲ. ಬಹುಶಃ ವಯಸ್ಸು ಐವತ್ತಾಗಿರಬಹುದು. ಚೆನ್ನಾಗಿ ಊಟ-ತಿಂಡಿ ಸಿಕ್ಕಿದರೆ ಪ್ರಾಯಶಃ ಯುವತಿಯ ಹಾಗೆಯೇ ಇರುತ್ತಿದ್ದಳು. ಆದರೆ ಇಡೀ ಜೀವನ ದುಃಖದಲ್ಲೇ ಕಳೆಯಿತು.

ಸೋರುವ ಮನೆಯಲ್ಲಿ ಗುಲಬ್‌ನ ತಾಯಿ ಒಬ್ಬಳೇ ಇದ್ದಾಳೆ. ಗ್ರಾಮದ ನಟ್ಟನಡುವೆ ಅವಳ ಮನೆ ಇದೆ. ಯಾವ ವಿಧವಾದ ಭಯವೂ ಇಲ್ಲ. ಕೆಲವು ಸಾರಿ ಆಕೆಯ ಮಗಳು ಬಂದು ಮೂರು ನಾಲ್ಕು ರಾತ್ರಿ ಅಲ್ಲೇ ಇರುತ್ತಾಳೆ. ವಿಶೇಷವಾಗಿ ಕಳ್ಳಕಾಕರ ಭೀತಿ ಇಲ್ಲ. ಮನೆಯಲ್ಲಂತೂ ಸಾಮಾನುಗಳೇನೂ ಇಲ್ಲ. ಒಂದು ಹಳೆಯ ಪೆಟ್ಟಿಗೆಯಲ್ಲಿ ಕೇವಲ ಮೂರು ನಾಲ್ಕು ಮಾಮೂಲಿ ಸಾಮಾನುಗಳಿವೆ.

ನಾಲ್ಕು ಹಸುಗಳು, ಕೆಲವು ಆಡುಗಳು, ಕೆಲವು ಹುಂಜ ಮತ್ತು ಕೋಳಿಗಳೇ ಆಕೆಯ ಸಂಪತ್ತು. ನರಿ ಎಷ್ಟೋ ಹುಂಜ ಮತ್ತು ಕೋಳಿಗಳನ್ನು ಎತ್ತಿಕೊಂಡು ಪರಾರಿಯಾಗಿದೆ. ಎಷ್ಟು ಅಂತ ಯಾರಿಗೆ ಗೊತ್ತು? ಹೊತ್ತುಕೊಂಡು ಹೋದರೆ ಹೋಗಲಿ. ನಾಯಿ, ನರಿ-ಇವು ಗ್ರಾಮಸ್ಥರ ಕೋಳಿಗಳನ್ನು ತಿನ್ನದೆ ಬೇರೆ ಯಾರ ಕೋಳಿಗಳನ್ನು ತಿನ್ನಲು ಸಾಧ್ಯ?........... ಈ ವಿಷಯಗಳ ಬಗ್ಗೆ ಮನಸ್ಸಿನಲ್ಲೇ ಯೋಚಿಸುತ್ತ ಗುಲಬ್ ಮನೆಯ ಕಡೆ ಬರುತ್ತಿದ್ದ. ಹಳೆ ಜಾಪಿ (ಗ್ರಾಮಸ್ಥರ ಛತ್ರಿ) ಮಳೆಗೆ ತಡೆಯುತ್ತಿರಲಿಲ್ಲ. ರಸ್ತೆಯಲ್ಲಿ ಮಂಡಿ ತನಕ ಕೆಸರಿದೆ. ಕಾಲು ಜಾರುತ್ತೆ. ತಲೆಯವರೆಗೂ ಬದಿ ಹಾರಿದೆ. ಆದರೆ ಅವು ಹೊಸದೇನೂ ಅಲ್ಲ. ಬಿಸಿಲು, ಮಳೆ, ಕೆಸರು ಮುಂತಾದವುಗಳಿಗೆ ಹೆದರುವ ಜಾಯಮಾನ ಆತನದಲ್ಲ. ಇಂಥ ಪರಿಸರದಲ್ಲೇ ಆತ ಬೆಳೆದಿದ್ದ.

ಇಪ್ಪತ್ತಮೂರು ವರ್ಷದಿಂದಲೂ ಆತ ಡಾಲಿಮ್ ಗ್ರಾಮದ ಕೆಸರು, ನೀರು-ಇವುಗಳಿಗೆ ಚಿರಪರಿಚಿತನಾಗಿದ್ದಾನೆ. ಅದೆಲ್ಲಾ ಆತನಿಗೆ ಒಗ್ಗಿ ಹೋಗಿದೆ.

ಮನೆಯ ಹೊರಗಡೆ ಮಳೆಯಲ್ಲೇ ನೆನೆದು ಒದ್ದೆಯಾದರೆ ಪರವಾಗಿಲ್ಲ. ಆದರೆ ಮನೆಯ ಒಳಗಡೆಯೇ ಇದ್ದು ಒದ್ದೆಯಾದರೆ ಅದು ಮನಸ್ಸಿಗೆ ಬೇಸರ. ರಾತ್ರಿ ಹೊತ್ತು ಮಲಗಿದ್ದಾಗ ಕೆಲವು ಸಾರಿ ಮಳೆ ನೀರು ಆತನ ತಲೆದಿಂಬಿನ ಹತ್ತಿರ ಹರಿದು ಬಂದು ದಿಂಬೆಲ್ಲಾ ಒದ್ದೆಯಾಗುತ್ತೆ. ಆ ಸಮಯದಲ್ಲಿ ಆತನಿಗೆ ತುಂಬಾ ಸಿಟ್ಟು ಬರುತ್ತೆ. ಮರುದಿನವೇ ಆ ಸೋರುವುದನ್ನು ರಿಪೇರಿ ಮಾಡಲು ಪ್ರತಿಜ್ಞೆ ಕೈಗೊಳ್ಳುತ್ತಾನೆ. ಹಳ್ಳಿಯ ಮೂರ್ಖನೊಬ್ಬನನ್ನು ಬಯ್ಯುವಂತೆ ಮೋಡಗಳನ್ನು ಬಯ್ಯುತ್ತಾನೆ.

ಆತನ ತಾಯಿ ನಿದ್ರೆಯ ನೆವದಿಂದ ಕಣ್ಣು ಮುಚ್ಚಿಕೊಂಡು ಮಲಗಿರುತ್ತಾಳೆ. ಗುಲಬ್ ನಾಳೆ ಏನೂ ರಿಪೇರಿ ಮಾಡುವುದಿಲ್ಲವೆಂಬುದು ಆಕೆಗೆ ಗೊತ್ತು. ಮಳೆ ನೀರು ಸೋರಿ ತನ್ನ ದೇಹ ಒದ್ದೆಯಾದುದನ್ನು ಆತ ನಾಳೆ ಸುತರಾಂ ಮರೆಯುತ್ತಾನೆ. ಮನೆ ಸೋರುತ್ತಿದ್ದ ವಿಷಯವನ್ನು ಮಳೆಗಾಲ ಕಳೆದಮೇಲೆ ಆತ ಮರೆತೇ ಬಿಡುತ್ತಾನೆ.

ಗುಲಬ್‌ನಿಗೂ ಈ ಮಾತು ಗೊತ್ತು.

ಹುಲಿರಾಯ ಒಮ್ಮೊಮ್ಮೆ ದನದ ಕೊಟ್ಟಿಗೆಯಿಂದ ಹಸು-ಎತ್ತುಗಳನ್ನು ಎತ್ತಿಕೊಂಡು ಹೋಗುತ್ತದೆ. ಗುಲಬ್ ಹುಲಿಯ ಇಡೀ ವಂಶಜರನ್ನೇ ಬಯ್ಯುತ್ತಾನೆ. ನಾಳೆಯೇ ಜಯನೂರ್ ಹತ್ತಿರದಿಂದ ಬಂದೂಕ ತೆಗೆದುಕೊಂಡು ಬಂದು ಇಡೀ ಹುಲಿ ಜಾತಿಯನ್ನೇ

ನಾಶಪಡಿಸುತ್ತೇನೆಂದು ತತ್‌ಕ್ಷಣ ಗಟ್ಟಿಯಾಗಿ ಘೋಷಿಸುತ್ತಾನೆ.

ಆದರೆ ಒಂದು ದಿನವಾದರೂ ಆತ ಬಂದೂಕ ಹಿಡಿಯುವ ಗೋಜಿಗೆ ಹೋಗಿಲ್ಲ.

ತನ್ನ ಎತ್ತನ್ನು ಎತ್ತಿಕೊಂಡು ಹೋದ ಹುಲಿಯ ಬಗ್ಗೆ ಬಹುಶಃ ಬೆಳಗಾದ ಕೂಡಲೇ ಆತನಿಗೆ ಕನಿಕರ ಉಂಟಾಗುತ್ತಿತ್ತು. ತಾಯಿಗೆ ಸಮಾಧಾನ ಹೇಳುತ್ತಿದ್ದ- "ಹೋಗಲಿ ಬಿಡಮ್ಮಾ. ಒಂದೇ ಒಂದನ್ನು ಎತ್ತಿಕೊಂಡು ಹೋಗಿದೆ. ನಮ್ಮದನ್ನು ಎತ್ತಿಕೊಂಡು ಹೋಗದೆ ಬೇರೆ ಯಾರದನ್ನಾದರೂ ಎತ್ತಿಕೊಂಡು ಹೋಗುತ್ತದೆಯೆ? ಏನೇ ಆಗಲಿ ಅದಂತೂ ಹುಲಿ. ಹುಲಿ ಹುಲ್ಲು ತಿನ್ನೋಕ್ಕಾಗುತ್ತದೆಯೇ?"

ಆತನ ತಾಯಿ ತನ್ನಷ್ಟಕ್ಕೆ ತಾನೇ ಹೇಳಿಕೊಳ್ಳುತ್ತಾಳೆ-ಕೊಟ್ಟಿಗೆಯ ದನ-ಎತ್ತುಗಳನ್ನು ಈ ರೀತಿ ಕಾಡಿನ ಹುಲಿಗಳು ಬಂದು ತಿನ್ನೋದಕ್ಕೆ ಬಿಡೋದು ಆಕೆಗೆ ಅರ್ಥವಾಗುತ್ತಿಲ್ಲ.

ಗುಲಚ್ ಅನೇಕ ಹುಲಿಗಳನ್ನು ನೋಡಿದ್ದಾನೆ. ಸೌದೆ ತರಲು ಕಾಡಿಗೆ ಹೋದಾಗ ಅಲ್ಲಿ ಚಿರತೆ ಮತ್ತು ಕಿರುಬ ಸಹ ಕಣ್ಣಿಗೆ ಬೀಳುತ್ತದೆ. ಹುಲಿ ನೋಡುವುದಕ್ಕೆ ತುಂಬಾ ಸುಂದರವಾಗಿ ಕಾಣುತ್ತದೆ. ಅದರ ಮೈಮುಟ್ಟಿ ಹಾಗೂ ಸವರಿ ಪ್ರೀತಿಸಬೇಕೆನಿಸುತ್ತದೆ. ಚಿರತೆಯ ಶರೀರದ ಬಣ್ಣ ಕಣ್ಣಿಗೆ ಹಿಡಿಸುತ್ತದೆ. ಹುಲಿ ಚಿರತೆಗೆ ಕಿಂಚಿತ್ ಸಹ ಹೆದರುವುದಿಲ್ಲ. ಚಿರತೆ ಸಹ ಹುಲಿಗೆ ಹೆದರುವುದಿಲ್ಲ. ಹುಲಿ ಹಸು-ಎತ್ತುಗಳನ್ನು ತಿನ್ನುತ್ತದೆ. ಮನುಷ್ಯನನ್ನು ತಿನ್ನುವುದಿಲ್ಲ. ಹುಲಿಯ ಬಗೆಗೆ ಗುಲಚ್ ಮನಸ್ಸಿನಲ್ಲಿ ಸ್ನೇಹಭಾವ ಮೂಡುತ್ತದೆ.

ನದಿಯ ಆ ಕಡೆಯಿರುವ ಹೊಲದಿಂದ ಗುಲಚ್ ಬರುತ್ತಿದ್ದ. ಹೊಲದಲ್ಲಿ 'ಬಾಓ' ಧಾನ್ಯ ಮತ್ತು ಬಾಸಮತಿ ಬತ್ತದ ಬೆಳೆ ಸಹ ಇದೆ. ಬೇರೆಯವರೊಡನೆ ಹೋಗಿ ಆತ ಸಹ ನದಿಯ ಆ ಕಡೆಯಲ್ಲಿ ಸ್ವಲ್ಪ ಜಮೀನನ್ನು ಹೊಸದಾಗಿ ಸಾಗುವಳಿ ಮಾಡಿದ್ದಾನೆ. ಅದು ಆತನ ಸ್ವಂತ ಜಮೀನು. ಆ ಕಡೆ ಧನಶಿರಿಯ ದಡ ಸ್ವಲ್ಪ ಎತ್ತರವಾಗಿದೆ. ತುಂಬು ಪ್ರವಾಹ ಬರದಿದ್ದರೆ ಹೆದರಬೇಕಾದ ಕಾರಣವಿಲ್ಲ. ಒಂದು ವೇಳೆ ಪ್ರವಾಹ ಬಂದರೂ ಅದು ಜಮೀನನ್ನು ಫಲವತ್ತಾಗಿ ಮಾಡುತ್ತದೆ. ದುಃಖ ಪಡಬೇಕಾದಂಥ ಕಾರಣವೇನಿಲ್ಲ.

ನದಿಯನ್ನು ದಾಟಿದ ಮೇಲೆ ಗುಲಚ್ ಸ್ವಲ್ಪ ಹೊತ್ತು ನಿಂತುಕೊಂಡ. ತನ್ನ ಜಮೀನಿನ ಕಡೆ ಒಂದು ಸಾರಿ ಹಿಂದಿರುಗಿ ನೋಡಿದ. ಕಣ್ಣಿಗೆ ಕಾಣಿಸುತ್ತಿಲ್ಲ. ಬಹಳ ದೂರ ಬಂದಿದ್ದಾನೆ. ಜೊತೆಗೆ ಮಳೆ ಸಹ ಬೀಳುತ್ತಿದೆ. ಸೂರ್ಯ ಮುಳುಗುತ್ತಿದ್ದಾನೆ. ಮಳೆ ಬೀಳುತ್ತಿರುವಾಗ ಬಹಳ ದೂರದ ವಸ್ತು ಕಣ್ಣಿಗೆ ಕಾಣಿಸುವುದಿಲ್ಲ. ತನ್ನ ಹೊಲವನ್ನು ನೆನಸಿಕೊಂಡು ಆತನಿಗೆ ಸಂತೋಷವಾಯಿತು. ಬಹಳ ಫಲವತ್ತಾದ ಜಮೀನು.

ಅಕಸ್ಮಾತ್ತಾಗಿ ಆತನ ದೃಷ್ಟಿ ನದಿಯ ಮೇಲೆ ಬಿತ್ತು. ಆತ ನಿಂತುಕೊಂಡ. ಮಳೆಯ ನೀರಿನ ಬಿಳುಪಾದ ಹನಿಗಳು ನದಿಯ ನೀರಿನ ಮೇಲೆ ನಿರಂತರವಾಗಿ ಬೀಳುತ್ತಿವೆ. ನೋಡಲು ಮನಮೋಹಕವಾಗಿವೆ ! ನೀರಿನ ಮೆಲೆ ನೀರಿನ ಹನಿಗಳು ಬಿದ್ದರೆ ಗುಳ್ಳೆ ಜಿಗಿಯುತ್ತವೆ. ಅವುಗಳ ಬಣ್ಣ ಬಿಳುಪು ಹಾಗೂ ಅವು ಕೋಮಲವಾಗಿವೆ. ನದಿಯ ನೀರು ಸ್ವಚ್ಛವಾಗಿದೆ-ಅದರ ಬಣ್ಣ ಬಹಶಃ ನೀಲಿ. ಮಳೆಯ ನೀರಿನ ಬಿಳಿಯ ಹನಿಗಳು ಮೋಡದ ಗರ್ಭದಿಂದಲೇ ಉದಿಸಿ ಬಂದಿವೆ.

ಮಧುರ ಧ್ವನಿ ಕೇಳಿ ಬರುತ್ತಿದೆ. ಮರದ ಎಲೆಗಳ ಮೇಲೆ ನೀರು ಬೀಳುವುದರಿಂದ ಉಂಟಾಗುವ ಶಬ್ದಕ್ಕೂ ಇತ್ತ ನದಿಯ ನೀರಿನ ಮೇಲೆ ಬೀಳುವ ಮಳೆಯ ನೀರಿನ ಶಬ್ದಕ್ಕೂ

ಯಾವ ಹೊಂದಾಣಿಕೆಯೂ ಇಲ್ಲ. ಮಧುರ, ಕೋಮಲ ಧ್ವನಿ.

ಸ್ವಲ್ಪ ಹೊತ್ತು ದಡದ ಮೇಲೆ ನಿಂತು ಗುಲಚ್ ನೀರಿನ ಆಟವನ್ನು ನೋಡುತ್ತಿದ್ದ. ಪಟಪಟ ಅಂತ ಮಳೆ ಬೀಳುತ್ತಿದೆ. ನದಿಯ ವಕ್ಷಸ್ಥಳದಲ್ಲಿ ಅದರ ಮಧುರ ಪ್ರತಿಧ್ವನಿ ಕೇಳಿಬರುತ್ತದೆ. ಅದು ಆತನಿಗೆ ಆನಂದವನ್ನುಂಟು ಮಾಡಿತು. ಬೆಳ್ಳಿಯ ಬಣ್ಣದ ನೀರಿನ ಗುಳ್ಳೆಗಳು ಆತನಿಗೆ ಬಹಳ ಆತ್ಮೀಯವಾಗಿ ಕಂಡುಬಂದುವು.

ಸ್ವಲ್ಪ ಕತ್ತಲೆಯಾಗುತ್ತಿರುವುದನ್ನು ಕಂಡು ಗುಲಚ್ ಮನೆ ಕಡೆ ಹೊರಟ.

ನದಿಯ ನೀರಿನ ಮೇಲೆ ಮಳೆಯ ನೀರು ಬೀಳುವ ದೃಶ್ಯ ನೋಡಲು ಬಹಳ ಮನೋಹರವಾಗಿರುತ್ತೆ. ಯಾವುದೋ ಆನಂದದಿಂದಾಗಿಗುಲಚ್‌ನ ಮನಸ್ಸು ಪರಿಪೂರ್ಣತೆಯನ್ನು ಪಡೆಯಿತು.

ಮಣ್ಣಿನಿಂದ ಒಂದು ರೀತಿಯ ಹೊಸ ಕಂಪು ಬರುತ್ತಿತ್ತು. ರಸ್ತೆಯ ಇಕ್ಕೆಲದ ಮರಗಳ ಎಲೆಗಳಿಂದ ಚಿರಪರಿಚಿತ ಜೀವಂತ ಸುವಾಸನೆ ಸೂಸುತ್ತಿತ್ತು. ಹುಲ್ಲಿನಿಂದಲೂ ಚಿರಪರಿಚಿತ ಕಂಪು ಮೂಡಿಬರುತ್ತಿತ್ತು.

ಗುಲಚ್ ನಿಲ್ಲಲಿಲ್ಲ.

ಮಳೆಗಾಲದ ರಾತ್ರಿ. ಕತ್ತಲು ಹೆಚ್ಚಿದಂತೆಲ್ಲಾ ಭಯ. ದನಕರುಗಳನ್ನು ಹುಡುಕಿಕೊಂಡು ಬಂದ ಹುಲಿಗೆ ಅವನೇ ಸಿಕ್ಕಿಬಿದ್ದರೆ! ಆದಾಗ್ಯೂ ಆತನ ಕೈಯಲ್ಲಿ ಚಾಕು ಇದೆ. ಭಯ ಪಡಬೇಕಾದ ಕಾರಣವೇನೂ ಇಲ್ಲ. ಹಣ್ಣಾಗಿರುವ ಚಿನಿಯ ಬಾಳೆಹಣ್ಣಿನ ಎರಡು ಚಿಪ್ಪುಗಳು ಆತನ ಹೆಗಲ ಮೇಲಿವೆ.

ಆತ ಒಂದು ಬಾಳೆಹಣ್ಣು ಕಿತ್ತು ತಿಂದ. ಅಷ್ಟೇನೂ ರುಚಿಯಾಗಿರಲಿಲ್ಲ. ಅಂಥ ಸಿಹಿಯಾಗಿಯೂ ಇರಲಿಲ್ಲ. ಮತ್ತೊಂದು ಹಣ್ಣು ತಿಂದ.

ತನ್ನ ಮನೆಯ ಬಗ್ಗೆ ಆತನಿಗೆ ಆಸಕ್ತಿ ಅಷ್ಟೇನೂ ಇಲ್ಲ. ಆದರೆ ತನ್ನ ಮನೆಗೆ ಹೋಗದೆ ಹೋದರೆ ಮತ್ತೆಲ್ಲಿಗೆ ಹೋಗಲು ಸಾಧ್ಯ. ಅದು ಹರಕಲು ಮನೆಯಾಗಲಿ ಅಥವಾ ಮುರುಕಲು ಮನೆಯಾಗಲಿ-ಕೊನೆಗಂತೂ ಅದು ಆತನ ಮನೆ. ಆತನ ತಾಯಿಯೂ ಅಲ್ಲೇ ಇದ್ದಾಳೆ.

ಕೆಸರು ತುಂಬಿರುವ ರಸ್ತೆಯಲ್ಲಿ ಬಹಳ ಜಾಗರೂಕತೆಯಿಂದ ಹೆಜ್ಜೆಯಿಡುತ್ತಾ ನಿಧಾನ-ನಿಧಾನವಾಗಿ ಮುಂದೆ ಮುಂದೆ ಹೊರಟ. ಮನೆ ತಲುಪಲು ಇನ್ನೂ ಸಾಕಷ್ಟು ದೂರ ಇದೆ.-ಇನ್ನು ಮೈಲಿಯಂತೂ ಇದೆ. ಮಳೆ ಯೋಚನೆ ಬಿಟ್ಟು ಒಮ್ಮೊಮ್ಮೆ ಆತನ ಮನಸ್ಸಿನ ಗಮನ ಮತ್ತೆಲ್ಲಿಯೋ!

ಮಧ್ಯೆ ಮಧ್ಯೆ ಆತನಿಗೆ ಚೇನಿಮಾಇ ನೆನಪು ಬರುತ್ತದೆ. ಗದ್ದೆಯಲ್ಲಿ ಗುದ್ದಲಿ ಹಿಡಿದು ಕೆಲಸ ಮಾಡುತ್ತಿರುವಾಗ, ಅಂಗಳದಲ್ಲಿ ಕುಳಿತು ಮರಗೆಲಸ ಮಾಡುವಾಗ, ಒಂಟಿಯಾಗಿ ದಾರಿಯಲ್ಲಿ ಹೋಗುವಾಗ, ಕೆಲವು ಸಾರಿ ಇದ್ದಕ್ಕಿದ್ದಂತೆ ಆತನಿಗೆ ಚೇನಿಮಾಇ ನೆನಪು ಬರುತ್ತದೆ. ನೆನಪು ಬಂದ ಕೂಡಲೇ ಮನಸ್ಸು ಭಾರವಾಗುತ್ತದೆ.

ಚೇನಿಮಾಇ ಹಳಿಡಾಲಿಮ್ ಗ್ರಾಮದ ಹುಡುಗಿ. ನೋಡುವುದಕ್ಕೆ ಆಕೆ ಅಷ್ಟೇನೂ ಸ್ಫುರದ್ರೂಪಿಣಿಯಾಗಿರದಿದ್ದರೂ ತುಂಬಾ ಹೃಷ್ಟಪುಷ್ಟವಾದ ಆರೋಗ್ಯವಂತೆ. ಆಕೆಯ ತಂದೆ ಸ್ವತಂತ್ರ ಮನೋಧರ್ಮವುಳ್ಳವನು. ಪುತ್ರಿ ಸಹ ಸ್ವತಂತ್ರ ಪ್ರಕೃತಿಯವಳು.

ಯಾವುದಾದರೂ ಕೆಲಸ ಬಿದ್ದಾಗ ಗುಲಚ್ ಒಮ್ಮೊಮ್ಮೆ ಹಳಿಡಾಲಿಮ್ ಗ್ರಾಮಕ್ಕೆ

ಹೋಗುತ್ತಿದ್ದ. ಒಂದೆರಡು ಮನೆಗೆ ಹೋಗಿ ಕುಳಿತು ಎಲೆ ಅಡಿಕೆ ಹಾಕಿಕೊಂಡು ಬರುವ ರೂಢಿ. ಆ ನೆಪದಲ್ಲಿ ಆ ಹಳ್ಳಿಯ ಹುಡುಗಿಯರ ವಿಷಯ ಸಹ ತಿಳಿದುಕೊಳ್ಳುತ್ತಿದ್ದ.

ಚೇನಿಮಾಇಗೆ ಗುಲಚ್‌ನ ಪರಿಚಯ ಆಗಿತ್ತು. ಮಾತುಕತೆ ಆಡಿದ ಮೇಲೆ ಆತನಿಗೆ ಆ ಹುಡುಗಿ ಮೆಚ್ಚುಗೆ ಆದಳು. ಚೇನಿ ಸಹ ಗುಲಚ್ ಬಗ್ಗೆ ಸ್ನೇಹಾಸಕ್ತಳಾಗಿದ್ದಳು. ಆ ಸ್ನೇಹ ಗಾಢವಾಗತೊಡಗಿತು.

ಗುಲಚ್‌ನ ಆರ್ಥಿಕ ಸ್ಥಿತಿ ಆಗ ಚೆನ್ನಾಗಿರಲಿಲ್ಲ. ಬಹಿರಂಗವಾಗಿ ಚೇನಿಮಾಇಯನ್ನು ವಿವಾಹವಾಗಿ ಕರೆತರಲು ಆತನಿಗೆ ಯಾವ ಉಪಾಯವೂ ಹೊಳೆಯಲಿಲ್ಲ. ತನಗೆ ಚೇನಿಮಾಇಯನ್ನು ಕೊಟ್ಟು ವಿವಾಹ ನೆರವೇರಿಸುತ್ತಾರೆಂಬ ನಂಬಿಕೆಯೂ ಆತನಿಗೆ ಇರಲಿಲ್ಲ.

ಸಮಯ ಕಾದು ಎಂದಾದರೊಮ್ಮೆ ಚೇನಿಮಾಇಯನ್ನು ಕರೆದುಕೊಂಡು ಕದ್ದು ಓಡಿ ಹೋಗಲು ಗುಲಚ್ ಯೋಚನೆ ಹೂಡಿದ. ಚೇನಿ ಸಹ ಸಿದ್ಧವಾಗಿದ್ದಳು. ಹುಡುಗಿಯನ್ನು ಕದ್ದು ಕರೆದೊಯ್ಯುವುದು ಅಥವಾ ಬಲಾತ್ಕಾರವಾಗಿ ಕರೆದುಕೊಂಡು ಹೋಗುವುದು ಡಾಲಿಮ್ ಗ್ರಾಮದಲ್ಲಿ ಹೊಸ ಮಾತೇನೂ ಆಗಿರಲಿಲ್ಲ. ಹುಡುಗಿಯನ್ನು ಒಲಿಸಿಕೊಳ್ಳುವುದು ಮಾತ್ರ ಮುಖ್ಯವಾಗಿತ್ತು.

ಎರಡು ವರ್ಷಗಳಿಂತಲೂ ಹೆಚ್ಚಾಗಿತ್ತು. ಮೂರು ವರ್ಷವೇ ಆಗುತ್ತಾ ಬಂತು. ಅಂದೂ ಸಹ ಆತ ಇದೇ ರೀತಿಯ ಮಳೆಯಲ್ಲಿ ಚೇನಿಮಾಇ ಮನೆಗೆ ಬಂದಿದ್ದ. ಚೇನಿಮಾಇಯ ಮನೆಯ ಬಾಗಿಲಿನ ಬಳಿ ಕತ್ತಲೆಯಲ್ಲಿ ಅವಿತುಕೊಂಡಿರುವಾಗ ಆತನಿಗೆ ಗಾಬರಿಯಾಗತೊಡಗಿತು. ಒಂದು ವೇಳೆ ಯಾರಾದರೂ ಆತನನ್ನು ನೋಡಿದರೆ!

ನಿರಂತರವಾಗಿ ಮಳೆ ಬೀಳುತ್ತಿದ್ದ ಕಾರಣ ಚೇನಿಮಾಇಯ ತಂದೆತಾಯಿ ಸಾಯಂಕಾಲವಾದ ಕೂಡಲೇ ಮಲಗಿ ನಿದ್ರಿಸುತ್ತಿದ್ದರು. ಆಕೆ ಮಾತ್ರ ಅಡಿಗೆ ಮನೆಯಲ್ಲಿ ಪಾತ್ರೆಗಳನ್ನು ಎತ್ತಿಡುತ್ತಿದ್ದಳು. ಗುಲಚ್ ಗೋಡೆಯ ಕಿಂಡಿಯಿಂದ ಇಣಿಕಿ ನೋಡಿದ. ಒಳಗಡೆ ಚೇನಿಮಾಇ ಒಬ್ಬಳೇ ಇದ್ದಳು-ಮತ್ತಾರೂ ಇರಲಿಲ್ಲ. ಆತ ಕದ ತಟ್ಟಿದ. ಚೇನಿಮಾಇ ಹೊರಗಡೆ ಬಂದಳು.

ಅಲ್ಲಿಂದ ಇಬ್ಬರೂ ಪರಾರಿಯಾದರು.

ಇನ್ನೇನಾಗುತ್ತೆ? ಮಾರನೆಯ ದಿವಸವೇ ಇಡೀ ಹಳ್ಳಿಯಲ್ಲಿ ಗದ್ದಲವೋ ಗದ್ದಲ. ಇಂದ್ರ ನೇಪಾಲಿಯ ಗೋಶಾಲೆಯಲ್ಲಿ ಇಬ್ಬರೂ ಸಿಕ್ಕಿಬಿದ್ದರು. ಅವರ ಬಗ್ಗೆ ವಿಚಾರಣೆಯಾಯಿತು.

ಹಳ್ಳಿಯವರು ಹೇಳಿದರು- 'ಆದದ್ದಾಯಿತು. ಹುಡುಗ-ಹುಡುಗಿ ಒಬ್ಬರನ್ನೊಬ್ಬರು ಒಪ್ಪಿರುವಾಗ ಮದುವೆ ಮಾಡಿಬಿಡುವುದು ಲೇಸು.'

ಗುಲಚ್ ತಂದೆ ಕಿಡಿಕಿಡಿಯಾದ. ಕದ್ದು ಓಡಿ ಬಂದಿರುವ ಹುಡುಗಿಯನ್ನು ನನ್ನ ಮನೆಗೆ ಸೊಸೆಯಾಗಿ ಕರೆತರುವ ಸಾಹಸ ಯಾವ ಗಂಡಸಿಗಿದೆ?- ಬರಲಿ, ಕತ್ತರಿಸಿ ತುಂಡು ತುಂಡು ಮಾಡಿಬಿಡ್ತೀನಿ.

ಮುದುಕ ಚೂರಿ ತೋರಿಸಿದ.

"ನನ್ನ ಮಗಳನ್ನು ಕದ್ದು ಕರೆದುಕೊಂಡು ಓಡಿಹೋಗಲು ಎಷ್ಟು ಕೆಚ್ಚು! ನಾನು ಗಂಡಸಾದರೆ ನನ್ನ ಮಗಳ ಮೇಲೆ ಕೈ ಮಾಡುವವನಿಗೆ ಚೆನ್ನಾಗಿ ಬುದ್ಧಿ ಕಲಿಸ್ತೀನಿ."

ಚೇನಿಮಾಇ ದೊಡ್ಡಪ್ಪ ಸಖಿಯತ್ ಬಹಳ ಜೋರಾಗಿ ಗದರಿಸಿದ. ಆದ್ದರಿಂದ ಯಾರೂ

ಮತ್ತೇನೂ ಮಾತನಾಡಲು ಧೈರ್ಯ ಮಾಡಲಿಲ್ಲ. ಸಫಿಯತ್ ಬೇಗ ಒಪ್ಪಿಕೊಳ್ಳುವ ಮನುಷ್ಯ ಅಲ್ಲ.

ಮದುವೆ ನೆರವೇರಲಿಲ್ಲ. ಗುಲಚ್ ಏನೂ ಮಾಡಲಾಗಲಿಲ್ಲ.

ಚೇನಿಮಾಇ ಗೋಳಾಡುತ್ತಾ ತನ್ನ ತಂದೆಯ ಜೊತೆಯಲ್ಲಿ ಹೊರಟು ಹೋದಳು.

ಮರುದಿನವೇ ಗುಲಚ್‌ನನ್ನು ಆತನ ತಂದೆ ಮನೆ ಬಿಟ್ಟು ಓಡಿಸಿದ.- "ನನ್ನ ಮಗನಾಗಿ ನೀನು ನನ್ನ ಮಾನ ಹೋಗುವ ಕೆಲಸ ಮಾಡಿದೆ. ನನ್ನ ಮನೆಯಲ್ಲಿ ನಿನ್ನ ನೆರಳು ಕಂಡರೆ ಕತ್ತರಿಸಿ ತುಂಡುತುಂಡು ಮಾಡಿಬಿಡ್ತೀನಿ. ಹೋಗು-ಎಲ್ಲಿ ಸಾಯಬೇಕೋ ಸಾಯಿ. ನನ್ನ ಆಸ್ತಿಯಲ್ಲಿ ನಿನಗೆ ಎಳ್ಳಷ್ಟು ಸಿಗುವುದಿಲ್ಲ."

ಆತನ ತಾಯಿ ಮಗನ ಪಕ್ಷ ವಹಿಸಿ ಸ್ವಲ್ಪ ಮಾತಾಡಿದಳು. ತಾಯಿ-ಮಗ ಇಬ್ಬರನ್ನೂ ಗುಲಚ್‌ನ ತಂದೆ ಮನೆ ಬಿಟ್ಟು ಓಡಿಸಿದ.. ಮುದುಕನ ಹಿರಿಯ ಮಗ ಮತ್ತು ಸೊಸೆ ಅವನ ಜೊತೆಯಲ್ಲೇ ಇದ್ದರು. ಅವನ ಎರಡನೇ ಹೆಂಡತಿ ಸಹ ಅವನ ಮನೆಯಲ್ಲೇ ಇದ್ದಳು. ಗುಲಚ್ ಮತ್ತು ಆತನ ತಾಯಿ ಹೊರಟು ಹೋದುದರಿಂದ ಅವನಿಗೆ ಏನೂ ಹಾನಿಯಾಗಲಿಲ್ಲ. ಬೇರೆಯವರು ಬಿಸಾಡಿದ್ದ ಮನೆ ಭಾವಣಿ ಮತ್ತು ಸಾಮಾನು ಸರಂಜಾಮು ಜೋಡಿಸಿಕೊಂಡು ಸ್ವಲ್ಪ ಜಮೀನು ತೆಗೆದುಕೊಂಡು ಗುಲಚ್ ಒಂದು ಮನೆ ಕಟ್ಟಿಕೊಂಡ. ತನ್ನ ತಂದೆಗೆ ಒಮ್ಮೆ ಈ ರೀತಿ ಹೇಳಿದ- "ಸಾಯುವಾಗಲೂ ನನ್ನನ್ನು ಹುಡುಕಿಸಬ್ಯಾಡ. ನಾನು ಹೊರಟೆ. ಮತ್ತೊಮ್ಮೆ ಎಂದೂ ಇಲ್ಲಿಗೆ ಬರೋದಿಲ್ಲ."

ತಾಯಿ-ಮಗ ಬೇರೆ ಒಂದು ಕಡೆ ಇರತೊಡಗಿದರು.

ಇಂದಿಗೂ ಅವರು ಅದೇ ರೀತಿ ಇದ್ದಾರೆ.

ಮೂರು ವರ್ಷ ಆಗುತ್ತಾ ಬಂತು. ಗುಲಚ್‌ಗೆ ಆತನ ತಂದೆ ಎಂದಾದರೊಮ್ಮೆ ಎದುರಿಗೆ ಸಿಕ್ಕಿದರೂ ಒಬ್ಬರನ್ನೊಬ್ಬರು ಮಾತನಾಡಿಸುತ್ತಿರಲಿಲ್ಲ.

ಯಾರೋ ಕೆಲವರು ಆತನ ತಾಯಿಗೆ ಈ ರೀತಿ ಹೇಳಿದರು- "ಜಗಳ-ಕೂಗಾಟ ಯಾರ ಮನೆಯಲ್ಲಿ ನಡೆಯೋದಿಲ್ಲಾ? ಮನೆ ಬಿಟ್ಟು ಈ ಬೆಪ್ಪ ಹಾಗೂ ಮುಂಗೋಪಿ ಗುಲಚ್ ಜೊತೆಯಲ್ಲಿ ಹೇಗಿದ್ದೀಯೆ? ಅದು ನಿನ್ನ ಮನೆ. ಗುಲಚ್‌ನನ್ನು ಕರೆದುಕೊಂಡು ಮತ್ತೆ ಅಲ್ಲಿಗೆ ಹೋಗು."

ಗುಲಚ್‌ನ ತಾಯಿಗೆ ಸಿಟ್ಟು ಬಂದು.- "ಸವತಿ ಜೊತೆಯಲ್ಲಿರೋದಕ್ಕೆ ಮತ್ತೆ ಹೋಗೋದಿಲ್ಲ. ಪಟ್ಟದ ರಾಣಿ ಜೊತೆಯಲ್ಲೇ ಆತ ಇರಲಿ. ತನ್ನ ಮಗನನ್ನು ಮನೆ ಬಿಟ್ಟು ಓಡಿಸುವ ಮನುಷ್ಯನ ಜೊತೆಯಲ್ಲಿ ಯಾರೂ ಸಂಸಾರ ಮಾಡಿಕೊಂಡಿರೋದಿಲ್ಲ. ಮಾನ-ಮರ್ಯಾದೆ ಇಲ್ಲದೆ ಇರೋರು ಮಾತ್ರ ಇರಬೇಕು."

ತನ್ನ ಹೆಂಡತಿ ಮತ್ತು ಮಗನನ್ನು ಮನೆಗೆ ಕರೆತರಲು ಹಳ್ಳಿಯ ಕೆಲವರು ಗುಲಚ್‌ನ ತಂದೆಗೆ ಸಲಹೆ ನೀಡಿದರು. ಆದರೆ ಆ ಮುದುಕ ತನ್ನ ನಿರ್ಣಯವನ್ನು ಬದಲಾಯಿಸಲಿಲ್ಲ. "ನಾನು ಅವರನ್ನು ಕರೆಯೋಕೆ ಹೋಗುತ್ತೇನೆಯೇ? ಅವ್ವ-ಮಗ ಇಬ್ಬರೂ ನನ್ನ ಮಾನಮರ್ಯಾದೆ ಕಳೆದಿದ್ದಾರೆ. ಬರೋ ಇಷ್ಟ ಇದ್ದರೆ ಬರಲಿ. ತಿಪ್ಪೆಗುಂಡೀಲಿ ಜಾಗಕ್ಕೇನೂ ಕಮ್ಮಿಯಿಲ್ಲ."

ಈ ಕಡೆ ಗುಲಚ್ ಸಹ ಹಠವಾದಿ. ಬದುಕಿರುವವರೆಗೂ ಆತ ಎಂದೂ ತಂದೆ ಮನೆಗೆ

ಕಾಲಿಡುವುದಿಲ್ಲ-ಏನೇ ಆಗಲಿ.

ಆತನ ತಾಯಿ ತನ್ನ ಮನೆಯಿಂದ ಮತ್ತೆ ಮನೆಗೆ ಹೋದರೆ ಗುಲಬ್‌ನಿಗೆ ಒಳ್ಳೆಯದೇ. ಆಗ, ಆತ ಸಂಪೂರ್ಣವಾಗಿ ಸ್ವತಂತ್ರ. ಆಗ ಅವನಿಗೆ ಅಡ್ಡಿ ಮಾಡುವವರಾರೂ ಇರುವುದಿಲ್ಲ. ಆದರೆ ಆತ ತನ್ನ ತಾಯಿಯ ಜೊತೆಯಲ್ಲಿ ಈ ಮಾತು ಎಂದಿಗೂ ಪ್ರಸ್ತಾಪಿಸುವುದಿಲ್ಲ. ಆದರೆ ಈ ರೀತಿ ಹೇಳುತ್ತಾನೆ- "ಅಲ್ಲಿಗೆ ಹೋಗದೆ ಇರೋದರಿಂದ ಒಂದು ಪಕ್ಷ ನಿನಗೆ ಹೊಟ್ಟೆಗಿಲ್ಲದೆ ಸಾಯೋ ಸ್ಥಿತಿ ಬಂದರೂ ಹೋಗಬೇಡ. ನಿನ್ನ ಹಿರಿಯ ಮಗ ಹಾಗೂ ಸೊಸೆಗೇ ನೀನು ಬೇಡವಾಗಿರುವಾಗ ಅವರ ಚಿಂತೆ ನಿನಗೇಕೆ? ನಿನಗೇನು ಅಂಥ ದರದು."

ಡಾಲಿಮ್ ಗ್ರಾಮ ಆತನ ತಾಯಿಯ ತವರೂರು. ದುಡಿಯದೆ ಊಟ ಮಾಡುವ ಅಭ್ಯಾಸ ಆಕೆಗೆ ಇಲ್ಲ. ಐದು ವರ್ಷ ವಯಸ್ಸಿನಿಂಲೂ ಹೊಲಗದ್ದೆ ಕೆಲಸ, ಮನೆಗೆಲಸ ಮಾಡಿ ತನ್ನ ಬದುಕನ್ನು ಸಾಗಿಸುತ್ತಾ ಬಂದಿದ್ದಾಳೆ. ದುಡಿಯಲು ಆಕೆ ಎಂದೂ ಹಿಂಜರಿಯುವುದಿಲ್ಲ. ತನ್ನ ಆರೋಗ್ಯ ಸರಿಯಾಗಿದ್ದರೆ ಎಂದೂ ಆಕೆ ಭಿಕ್ಷೆ ಬೇಡುವವಳಲ್ಲ. ದುಡಿದೇ ತಿನ್ನತಕ್ಕವಳು.

ತಾಯಿ ತನ್ನ ಜೊತೆಯಲ್ಲಿರುವ ಕಾರಣ ಗುಲಬ್‌ನಿಗೆ ಹೆಚ್ಚಿಗೆ ಮನೆ ಚಿಂತೆ ಇಲ್ಲ. ತಾಯಿಯೇ ಆತನ ಹಸು-ಎತ್ತುಗಳು, ಕೋಳಿ-ಹುಂಜ ಅವುಗಳ ಉಸ್ತುವಾರಿ ನೋಡಿ ಕೊಳ್ಳುತ್ತಾಳೆ.

'ಪಾಹಿ'ಯಲ್ಲಿ ಬಹಳ ದಿವಸ ಇದ್ದುಬಿಟ್ಟರೆ ಗುಲಬ್‌ಗೆ ತನ್ನ ತಾಯಿಯದೇ ಚಿಂತೆ. ಬಹುಶಃ ಮನೆಯಲ್ಲಿ ಒಂದು ಚೂರು ಉಪ್ಪು ಇಲ್ಲ. ಮನೆಯಲ್ಲಿ ಅಕ್ಕಿ ಉಳಿದಿದೆಯೋ ಇಲ್ಲವೋ ಗೊತ್ತಿಲ್ಲ! ಕಳ್ಳಕಾಕರು ಸಹ ತೊಂದರೆ ಕೊಡಬಹುದು.

ಮನೆಕಡೆಯ ಚಿಂತೆ ಜಾಸ್ತಿಯಾದಾಗ ಗುಲಬ್ ಪಾಹಿಯಿಂದ ಹಿಂದಿರುಗುತ್ತಾನೆ. ಅಂತಹ ಸಂದರ್ಭದಲ್ಲಿ ಆತ ಚಳಿ, ಬಿಸಿಲು ಯಾವುದನ್ನೂ ಲೆಕ್ಕಿಸುವುದಿಲ್ಲ. ಆಗ ತಾಯಿಯ ಬಗ್ಗೆ ಆತನಿಗೆ ಸ್ನೇಹ ಮೂಡುತ್ತದೆ.

ಕತ್ತಲಾಗಿತ್ತು.

ಮಳೆ ನಿಂತಿಲ್ಲ. ಆಕಾಶದಲ್ಲಿ ಚಂದ್ರನಿದ್ದರೂ ಮೋಡಗಳು ಆತನ ಸುತ್ತಲೂ ಕವಿದುಕೊಂಡಿವೆ. ಅಂದಾಜಿನ ಮೇಲೆ ಗುಲಬ್ ಮುಂದೆ ಹೋಗತೊಡಗಿದ. ಆತನಿಗೆ ತನ್ನ ಶರೀರ ಬಹಳ ಭಾರವಾದಂತೆ ಭಾಸವಾಯಿತು. ಹಳ್ಳಿಯಲ್ಲಿ ಸೂರ್ಯಾಸ್ತವಾದ ಕೂಡಲೆ ಕತ್ತಲು ಕವಿಯುತ್ತೆ.

ಮನೆ ಬಹಳ ದೂರವಿಲ್ಲವೆಂದು ಆತ ಊಹಿಸಿದ. ತಿರುವು ದಾಟಿದ ಕೂಡಲೆ ಆತ ಮನೆ ತಲುಪುತ್ತಾನೆ. ಇದ್ದಕ್ಕಿದ್ದಂತೆ ಆತ ನಿಂತ. ಏನೋ ಯೋಚಿಸಿದ. ಅನಂತರ ಬಲಗಡೆಗೆ ತಿರುಗಿ ಹೊರಟು-ಮನೆ ಕಡೆ ಅಲ್ಲ- 'ತರಾ' ಮನೆ ಕಡೆ.

# ಮೂರು

ಮೂರು ರೂಮುಗಳಿರುವ ಒಣಹುಲ್ಲಿನ ತಗ್ಗಾದ ಒಂದು ಚಿಕ್ಕ ಗುಡಿಸಲು. ಅದರ ಅಂಗಳ

ಚಿಕ್ಕದು-ಆದರೆ ಚೊಕ್ಕಟವಾಗಿದೆ. ಅದನ್ನು ಚೆನ್ನಾಗಿ ಸ್ವಚ್ಛ ಮಾಡಲಾಗಿದೆ. ಎಲ್ಲೂ ನೀರು ನಿಲ್ಲುವಂತಿಲ್ಲ. ಮನೆಯ ಮುಂಭಾಗದ ಕಡೆ ದನದ ಕೊಟ್ಟಿಗೆ ಇದೆ. ಅಲ್ಲಿ ಹಾಲು ಕರೆಯುವ ಮೂರು ಹಸುಗಳು ಕಟ್ಟಿವೆ. ಬಾಗಿಲಿನ ಪಕ್ಕದಲ್ಲೇ ಕಪ್ಪು ನಾಯಿ ಮಲಗಿ ನಿದ್ರಿಸುತ್ತಿತ್ತು. ಮನೆಯೊಳಗೆ ಯಾರ ಸದ್ದೂ ಕೇಳಿಬರುತ್ತಿರಲಿಲ್ಲ. ಮನೆಯೊಳಗಡೆ ಹೊತ್ತಿಸಿದ್ದ ಸೀಮೆ ಎಣ್ಣೆ ದೀಪದ ಪ್ರಕಾಶ ಬಾಗಿಲಿನ ಕಿಂಡಿಯಲ್ಲಿ ಕಾಣಿಸುತ್ತಿತ್ತು.

ಛಾವಣಿಯಿಂದ ಮಳೆಯ ನೀರು ಟಪ್ ಟಪ್ ಎಂದು ಬೀಳುತ್ತಿತ್ತು.

ಗುಲಬ್ ಸ್ವಲ್ಪ ಹೊತ್ತಿನ ತನಕ ಅಂಗಳದಲ್ಲೇ ನಿಂತಿದ್ದ. ಒಳಗಡೆ ಯಾರಿದ್ದಾರೆಂಬುದನ್ನು ಊಹಿಸಿದ. ಅನಂತರ ಬಾಗಿಲನ್ನು ತಳ್ಳಿಕೊಂಡು ಒಳಗಡೆ ಹೋದ.

"ಯಾರು?" - ಒಳಗಡೆಯಿಂದ ಕೂಗಿ ಕೇಳಿದರು.

"ನಾನು-ಅಕ್ಕ ಇದ್ದಾಳೆಯೇ?"

"ಗುಲಬ್‌ನೋ? ಒಳ್ಳೆಯದು-ಬಂದೆ-ಕುಳಿತುಕೊ."

ಒಳಗಡೆಯಿಂದ ಬಂದಳು-ತರಾ ಅಲ್ಲ. ತರಾ ಚಿಕ್ಕಮ್ಮ 'ಕಪಾಹಿ.'

"ನೆಂದು-ಒದ್ದೆಯಾಗಿ ರಾತ್ರಿ ಇಷ್ಟು ಹೊತ್ತಿನಲ್ಲಿ ದಿಢೀರ್ ಅಂತ ಎಲ್ಲಿಂದ ಬಂದೆಯೋ?"

"ಪಾಹಿಯಿಂದ."-ಅಂತ ಗುಲಬ್ ಅಷ್ಟೇ ಹೇಳಿದ. ಅನಂತರ ಕುಳಿತುಕೊಂಡು ಒಂದು ಸಾರಿ ಕಪಾಹಿ ಕಡೆ ದೃಷ್ಟಿ ಹಾಯಿಸಿದ.

ತುಂಬಾ ಬೆಳ್ಳಗಿದ್ದುದರಿಂದ ಅವಳಿಗೆ ಕಪಾಹಿ ಎಂದು ಹೆಸರಿಟ್ಟಿದ್ದರು. ('ಹತ್ತಿಯ ಹಾಗೆ ಬಿಳುಪು. ಈಗಲೂ ಸಾಕಷ್ಟು ಬೆಳ್ಳಗಿದ್ದಾಳೆ') ಮದುವೆ ಆಗಿ ಸುಮಾರು ಹದಿನಾಲ್ಕು ಹದಿನೈದು ವರ್ಷ ಆಗಿದೆ. ಕಪಾಹಿಗೆ ಮದುವೆ ಆದಾಗ ಗುಲಬ್‌ಗೆ ಹನ್ನೊಂದು ವರ್ಷ ವಯಸ್ಸು. ಅಂದಿನಿಂದ ಆತ ಎಷ್ಟೋ ಸಾರಿ ಕಪಾಹಿಯನ್ನು ನೋಡಿದ್ದಾನೆ. ಪ್ರತಿಸಲವೂ ಆಕೆಯ ರೂಪ ಏಕ ರೀತಿಯಾಗಿರುವುದನ್ನು ಕಂಡಿದ್ದಾನೆ. ಅವಳಲ್ಲಿ ಕಾಂತಿ ಕಿಂಚಿತ್ ಸಹ ಕುಂದಿಲ್ಲ.

ಕಪಾಹಿಗೆ ಹದಿನಾಲ್ಕು ವರ್ಷ ವಯಸ್ಸಾಗಿದ್ದಾಗಲೇ ನಾಹರ್ ಜೊತೆಯಲ್ಲಿ ಆಕೆಯ ವಿವಾಹ ನೆರವೇರಿತು.

ಹಳೆಯ ಡಾಲಿಮ್ ಗ್ರಾಮದ ನಿವಾಸಿ ನಾಹರ್ ಮೊದಲಿಗೆ ಕಪಾಹಿಯ ಅಕ್ಕ ಜುತಿಯನ್ನು ಮದುವೆಯಾಗಿದ್ದ. ಆಕೆಗೆ ಒಂದು ಹೆಣ್ಣು ಮಗುವಾಗಿತ್ತು. ಅವಳೇ ತರಾ. ತರಾಗೆ ಐದು ತಿಂಗಳಾದ ಮೇಲೆ ಬಾಣಂತಿ ರೋಗದಿಂದ ಜುತಿ ಸ್ವರ್ಗಸ್ಥಳಾದಳು. ನಾಹರ್‌ನ ಅಕ್ಕ ವಿಧವೆ. ಆಕೆ ಸುಮಾರು ಆರು ತಿಂಗಳ ಕಾಲ ತರಾಳ ಪಾಲನೆ-ಪೋಷಣೆಯ ಭಾರವಹಿಸಿದಳು. ಅನಂತರ ನಾಹರ್‌ನ ಒಪ್ಪಿಗೆಯ ಮೇರೆಗೆ ಕಪಾಹಿಯ ಜೊತೆಯಲ್ಲಿ ಹಳ್ಳಿಯವರು ಆತನ ವಿವಾಹವನ್ನು ನೆರವೇರಿಸಿದರು. ತರಾಳ ಸ್ವಂತ ಚಿಕ್ಕಮ್ಮ ಕಪಾಹಿ. ಅವಳಿಗೆ ಯಾವ ತೊಂದರೆಯೂ ಇಲ್ಲ.

ಕಪಾಹಿ ಬಂದ ಮೇಲೆ ಆಕೆಯನ್ನು ತರಾ ತನ್ನ ತಾಯಿಯಂತೆ ಭಾವಿಸಿದಳು. ತರಾಳಿಗೆ ತನ್ನ ತಾಯಿಯನ್ನು ನೆನಸಿಕೊಳ್ಳುವ ಶಕ್ತಿ ಮತ್ತು ವಯಸ್ಸು ಇನ್ನೂ ಆಗಿರಲಿಲ್ಲ. ಅವಳಿಗೆ ಮಾತನಾಡುವ ವಯಸ್ಸು ಬಂದ ಮೇಲೆ ಕಪಾಹಿಯನ್ನು ಚಿಕ್ಕಮ್ಮ ಎಂಬುದಾಗಿ ಕೂಗಿ ಆಕೆ ಕಪಾಹಿಯನ್ನು ತಾಯಿಯಂತೆಯೇ ಭಾವಿಸತೊಡಗಿದಳು. ಕಪಾಹಿ ಸಹ ತರಾಳನ್ನು ತನ್ನ ಸ್ವಂತ ಮಗಳಂತೆ ಪಾಲನೆ-ಪೋಷಣೆ ಮಾಡಿ ಬೆಳೆಸಿದಳು. ಅವರಿಬ್ಬರೂ ತಾಯಿ-ಮಗಳಲ್ಲ ಅಂತ

ಅವರನ್ನು ನೋಡಿದವರಾದರೂ ಹೇಳುವಂತಿರಲಿಲ್ಲ. ತರಾಳಿಗೆ ತನ್ನ ಸ್ವಂತ ತಾಯಿ ಬೇರೆ ಇದ್ದಿರಬಹುದೆಂದು ಯೋಚಿಸುವ ಪರಿಸ್ಥಿತಿ ಒದಗಲಿಲ್ಲ.

ನಾಹರ್ ಸ್ವಲ್ಪ ಒರಟು ಸ್ವಭಾವದವನಾದರೆ, ಕಪಾಹಿ ಸ್ವಲ್ಪ ಚಂಚಲ ಸ್ವಭಾವದವಳು.

ಅಶ್ವೀಜ-ಕಾರ್ತಿಕ ಮಾಸದಲ್ಲಿ ಮೂರು ನಾಲ್ಕು ಮಂದಿ ವ್ಯಾಪಾರಿಗಳು ದೋಣಿಯಲ್ಲಿ ಸ್ವಲ್ಪ ಸಾಮಾನು ತುಂಬಿಕೊಂಡು ಧನಶಿರಿಯನ್ನು ದಾಟಿ ಡಾಲಿಮ್ ಗ್ರಾಮಕ್ಕೆ ಬರುತ್ತಾರೆ. ಹಿಂಗಾರು ಬೆಳೆಯ ಬಿತ್ತನೆಗಾಗಿ ಡಾಲಿಮ್ ಗ್ರಾಮದವರಿಂದ ದುಡ್ಡು ತೆಗೆದುಕೊಳ್ಳದೆ ಆಲೂಗೆಡ್ಡೆ, ಬೇಳೆ, ಸಾಸಿವೆ ಮತ್ತು ಇನ್ನಿತರ ಬೀಜಗಳನ್ನು ಕೊಟ್ಟು ಹೋಗುತ್ತಾರೆ. ಮಾಘ ಮತ್ತು ಫಾಲ್ಗುಣ ಮಾಸದಲ್ಲಿ ತಮ್ಮ ಪಾಲು ತೆಗೆದುಕೊಂಡು ಹೋಗಲು ಮತ್ತೆ ಬರುತ್ತಾರೆ. ದೋಣಿ ತುಂಬಾ ಬೇಳೆ, ಸಾಸಿವೆ ತುಂಬಿಕೊಂಡು ಹಿಂದಿರುಗುತ್ತಾರೆ. ಕೆಲವು ಸಾರಿ ತರುಣ ವ್ಯಾಪಾರಿಗಳು ಡಾಲಿಮ್ ಗ್ರಾಮದ ಯುವತಿಯರ ಮನಸ್ಸಿನಲ್ಲಿ ವಿಲಾಸಪ್ರಿಯತೆ ಮೂಡುವಂತೆ ಮಾಡಿ ಹೋಗುತ್ತಾರೆ. ಕಪಾಹಿಯ ಜೀವನದಲ್ಲಿ ಸ್ವಲ್ಪ ರಗಳೆಯಾಗಿತ್ತು. ನಾಹರ್ ಜೊತೆಯಲ್ಲಿ ಅವಳ ಸಂಬಂಧ ಶಾಶ್ವತವಾಗಿ ಕಿತ್ತೇ ಹೋಗಿತ್ತು.

ನಾಹರ್ ಕಪಾಹಿಯನ್ನು ಮನೆ ಬಿಟ್ಟು ಓಡಿಸಿದ. ಆದರೆ ಅವನು ಯಾರಿಗೂ ಏನೂ ತಿಳಿಸದೆ ಇದ್ದಕ್ಕಿದ್ದಂತೆ ಒಂದು ದಿನ ಮನೆಯನ್ನು ತೊರೆದು ಪತ್ತೆಯಿಲ್ಲದೆ ಹಾಗೆಯೇ ಪರಾರಿಯಾದ. ಹೋದವನು ಹೊರಟೇ ಹೋದ. ಎಲ್ಲಿಗೆ ಹೋದ? ಯಾರಿಗೂ ಗೊತ್ತಿಲ್ಲ. ಇದರಿಂದ ಹಳ್ಳಿಯವರಿಗೇನೂ ಆಶ್ಚರ್ಯವಾಗಲಿಲ್ಲ. ಏಕೆಂದರೆ ಆಗಿಂದಾಗ್ಗೆ ಮೂರು ನಾಲ್ಕು ಮಂದಿ ಈ ರೀತಿ ಪತ್ತೆ ಇಲ್ಲದ ಹಾಗೆ ಆಗುತ್ತಿದ್ದರು. ಹುಲಿ ತಿಂದು ಹಾಕಬಹುದು ಅಥವಾ ಅವರು ಎಲ್ಲಿಗೋ ಪರಾರಿಯಾಗಬಹುದು. ಮನುಷ್ಯನನ್ನು ಹಿಡಿದು ನಿಲ್ಲಿಸಲು ಯಾರಿಗೆ ತಾನೇ ಸಾಧ್ಯ?

ನಾಹರ್ ಹಿಂದಿರುಗಿ ಬರಬಹುದೆಂದು ಭಾವಿಸಿ ಕಪಾಹಿ ಕೆಲವು ದಿವಸಗಳವರೆಗೆ ಆತನ ಮನೆಯಲ್ಲಿ ವಾಸಿಸುತ್ತಿದ್ದಳು. ಕೊನೆಗೆ ನಾಹರ್ ಯಾವುದೋ ದೂರದ ಹಳ್ಳಿಯಲ್ಲಿದ್ದಾನೆ. ಆತ ಮತ್ತೆ ಇಲ್ಲಿಗೆ ಬರುವುದಿಲ್ಲವೆಂದು ಯೋಚಿಸಿದಳು. ಒಂದು ದಿನ ನಾಹರ್ ಅಕ್ಕ ವಿಧವೆಯೊಡನೆ ಜಗಳವಾಡಿಕೊಂಡು ತರಾಳನ್ನು ಕರೆದುಕೊಂಡು ಮನೆ ಬಿಟ್ಟು ಹೊರಟು ಬಂದಳು. ಇದನ್ನು ಯಾರೂ ಆಕ್ಷೇಪಣೆ ಮಾಡಲಿಲ್ಲ. ತರಾ ಜೊತೆಯಲ್ಲಿ ಕಪಾಹಿ ತನ್ನ ಚಿಕ್ಕಮ್ಮನ ಮನೆಯಲ್ಲಿ ಇರತೊಡಗಿದಳು.

ನಾಹರ್ ಹಳ್ಳಿ ಬಿಟ್ಟು ಏಕೆ ಹೊರಟು ಹೋದ ಎಂಬುದು ಮೊತ್ತಮೊದಲಿಗೆ ಆ ಹಳ್ಳಿಯವರಿಗೆ ಗೊತ್ತಾಗಲಿಲ್ಲ. ಅನಂತರ ಕೆಲವರು ಅರ್ಥ ಮಾಡಿಕೊಂಡರು. ಕಳೆದ ಅಶ್ವೀಜ ಮಾಸದಲ್ಲಿ ವ್ಯಾಪಾರಿ ಬಸೀರತ್ ದೋಣಿಯಲ್ಲಿ ಸ್ವಲ್ಪ ಸಾಮಾನು ತುಂಬಿಕೊಂಡು ಆ ಹಳ್ಳಿಗೆ ಬಂದಿದ್ದ. ತನ್ನ ದೋಣಿಯನ್ನು ಹಳೇ ಡಾಲಿಮ್ ಗ್ರಾಮದ ಘಟ್ಟದಲ್ಲಿ ಭದ್ರವಾಗಿ ಕಟ್ಟಿ ಹಳ್ಳಿಗೆ ಬಂದು ಜನರಿಗೆ ಬೇಳೆ, ಆಲೂಗೆಡ್ಡೆ ಮತ್ತು ಈರುಳ್ಳಿ ಮೊದಲಾದ ಬಿತ್ತನೆ ಬೀಜಗಳನ್ನು ಹಂಚುತ್ತಿದ್ದ. ಆಗ ಕಪಾಹಿ ಅವನ ಕೈಯಲ್ಲಿ ಹಣದ ಗಂಟನ್ನು ಕಂಡು ಆ ಕ್ಷಣವೇ ಅವನ ಕಡೆ ಆಕರ್ಷಿತಳಾದಳು. ಬಸೀರ್ ಕೆಲವು ದಿನಗಳವರೆಗೆ ಕಪಾಹಿಯ ಮನೆಯಲ್ಲಿ ಅತಿಥಿಯಾಗಿ ಇದ್ದುಕೊಂಡಿದ್ದ. ಬಸೀರ್ ತರುಣ-ಕಪಾಹಿ ಸಹ ಮನ ಸೋತಳು.

ಕೆಲವು ದಿನಗಳಾದ ಮೇಲೆ ಈ ವಿಷಯ ನಾಹರ್‌ನಿಗೆ ಗೊತ್ತಾಯಿತು. ಅವನು ಕಪಾಹಿಗೆ

ಚೆನ್ನಾಗಿ ಹೊಡೆದ. ಆದರೆ ಯಾವುದೋ ದುಃಖದಿಂದ ಒಂದು ದಿನ ತಾನಾಗಿಯೇ ಮನೆಯನ್ನು ತೊರೆದು ಅವನು ಪರಾರಿಯಾದ.

ಈಗ ತರಾ ಹದಿನಾಲ್ಕು ವರ್ಷದ ಯುವತಿ. ನೋಡುವುದಕ್ಕೆ ಕಪಾಹಿಯ ಹಾಗೆಯೇ ಕಾಣುತ್ತಾಳೆ. ಸ್ವಲ್ಪ ಹೆಚ್ಚು ಚಂಚಲ ಸ್ವಭಾವ. ಆದರೆ ಕಪಾಹಿ ಜೊತೆಯಲ್ಲಿ ಹೋಲಿಸಿದರೆ ಆಕೆಯದು ಶಾಂತ ಸ್ವಭಾವ. ಆದರೆ ಸೌಂದರ್ಯದ ದೃಷ್ಟಿಯಿಂದ ಇಬ್ಬರೂ ಒಂದೇ-ಬಣ್ಣ ಬಿಳುಪು, ಸುಂದರವಾಗಿದ್ದಾರೆ ಮತ್ತು ಆರೋಗ್ಯವಾಗಿದ್ದಾರೆ.

ಕಪಾಹಿಯ ಚಿಕ್ಕಮ್ಮ ಸ್ವರ್ಗಸ್ಥಳಾಗಿ ಮೂರು ವರ್ಷವಾಯಿತು. ಅನಂತರ ತರಾಳ ಏಕ ಮಾತ್ರ ಆಸರೆಯಲ್ಲಿ ಕಪಾಹಿ ಒಬ್ಬಳೇ ಕಾಲ ಕಳೆಯುತ್ತಿದ್ದಾಳೆ. ಯಾವುದೇ ಭಯ-ಶಂಕೆ ಇಲ್ಲ. ಆದರೆ ತರಾಳ ಬಗ್ಗೆ ಮಾತ್ರ ಭಯ. ತರಾ ಚೆಲುವೆ. ಆ ಹಳ್ಳಿಯಲ್ಲಿ ಅವಳಷ್ಟು ಚೆಲುವೆ ಬೇರೆ ಯಾವ ಹುಡುಗಿಯೂ ಇಲ್ಲ. ರೂಪು, ಬಣ್ಣ, ಅಂಗಸೌಷ್ಠವ-ಒಂದಕ್ಕಿಂತ ಒಂದು ಮಿಗಿಲು. ನೋಡಿದರೆ ನೋಡುತ್ತಲೇ ಇರಬೇಕೆನಿಸುತ್ತದೆ. ಬೇರೆಯವರ ಹೊಲ, ಮನೆಯಲ್ಲಿ ಕೆಲಸ ಮಾಡಿದರೂ ಆಕೆಯ ಮುಖದಲ್ಲಿ ಬೇಸರ ಕಂಡು ಬರುವುದಿಲ್ಲ. ದಿನ ಕಳೆದಂತೆಲ್ಲಾ ಆಕೆಯ ಸೌಂದರ್ಯ ಹೊಮ್ಮುತ್ತಿರುತ್ತದೆ.

ಕಪಾಹಿಗೆ ತರಾಳ ಬಗ್ಗೆ ಭಯ.

ಭಯ ಪಡದಿರಲು ಕಾರಣ ಇಲ್ಲದೇ ಇಲ್ಲ. ಕಪಾಹಿಯನ್ನು ಸಮಾಜ ಕೆಲವು ದಿನಗಳ ತನಕ ಬಹಿಷ್ಕರಿಸಿದ ಮೇಲೆ ಮತ್ತೆ ಆಕೆಯನ್ನು ಸೇರಿಸಿಕೊಂಡಿದೆ. ಆದಾಗ್ಯೂ ಕಪಾಹಿಯ ವಿಷಯ ಎಲ್ಲರಿಗೂ ಗೊತ್ತು. ಆದ್ದರಿಂದ ತರಾಳ ಬಗ್ಗೆ ಆಕರ್ಷಿತರಾಗಿ ಬರುವ ಯುವಕರು ಸಹ ಗ್ರಾಮದವರ ಬೈಗುಳದ ಭಯದಿಂದ ಇತ್ತೀಚೆಗೆ ಬರುವುದು ಕಡಿಮೆಯಾಗಿದೆ.

ಆಗಿಂದಾಗ್ಗೆ ಗುಲಬ್ ಮಾತ್ರ ಬರುತ್ತಾನೆ. ಅವನಿಗೆ ಇದೆಲ್ಲಾ ಎಲ್ಲಿ ಗೊತ್ತಾಗುತ್ತೆ.

ಬಾಂಧವ್ಯದ ದೃಷ್ಟಿಯಿಂದ ಗುಲಬ್‌ನಿಗೂ ಕಪಾಹಿಗೂ ಯಾವ ಸಂಬಂಧವೂ ಇಲ್ಲ. ಆದಾಗ್ಯೂ ಆಕೆ ವಯಸ್ಸಿನಲ್ಲಿ ಅವನಿಗಿಂತ ಹಿರಿಯವಳಾದುದರಿಂದ ಆತ ಅವಳನ್ನು ಅಕ್ಕ ಎಂದು ಕರೆಯುತ್ತಾನೆ. ಆದರೆ ತರಾ ಮಾತ್ರ ಕಪಾಹಿಯೊಡನೆ ಗುಲಬ್ ಕಲ್ಪಿಸಿರುವ ಬಾಂಧವ್ಯದ ಪ್ರಕಾರ ಆತನನ್ನು ಸಂಬೋಧಿಸುವುದಿಲ್ಲ. ಆತನನ್ನು ಅಣ್ಣಾ ಎಂದೇ ಕರೆಯುತ್ತಾಳೆ-ಗುಲಬ್ ಅಣ್ಣಾ. ಗುಲಬ್ ಸಹ ಸಿಟ್ಟಾಗುವುದಿಲ್ಲ.

ಅಣ್ಣಾ ಎಂದು ಕರೆದರೂ ಕಪಾಹಿ ಮಾತ್ರ ಗುಲಬ್‌ನೊಡನೆ ತರಾ ಹೆಚ್ಚು ಸಲಿಗೆಯಿಂದ ಇರಲು ಅವಕಾಶ ಕೊಡುವುದಿಲ್ಲ. ಗುಲಬ್ ತರುಣ, ತರಾ ಸಹ ತರುಣಿ. ಅದಲ್ಲದೆ ಇಪ್ಪತ್ತನಾಲ್ಕು ಗಂಟೆ ಮನೆಯಲ್ಲಿ ಕುಳಿತೇ ಇರುವುದು ಕಪಾಹಿಗೆ ಸರಿಬೀಳದು. ತರುಣರನ್ನು ನಂಬುವುದು ಹೇಗೆ?

ಬಾಳೆ ಹಣ್ಣಿನ ಚಿಪ್ಪಿನಲ್ಲಿ ಮೂರು ನಾಲ್ಕು ಹಣ್ಣುಗಳನ್ನು ತನ್ನ ತಾಯಿಗಾಗಿ ತೆಗೆದಿಟ್ಟುಕೊಂಡು ಉಳಿದ ಹಣ್ಣುಗಳನ್ನು ಗುಲಬ್ ಕಪಾಹಿಯ ಕೈಗೆ ಕೊಟ್ಟ.

"ತಗೋ, ಈ ಬಾಳೆಹಣ್ಣನ್ನು ಅಲ್ಲಿಡು. ಪಾಹಿ ತೋಟದ ಹಣ್ಣು." ಸ್ವಲ್ಪ ಹೊತ್ತು ಸುಮ್ಮನಿದ್ದು ಮತ್ತೆ ಹೇಳಿದ- "ಒಂದು ಬಟ್ಟಲು ಟೀ ಮಾಡಿಕೊಡ್ತೀಯಾ ಅಕ್ಕಾ? ಬಾಯಾರಿಕೆಯಾಗಿದೆ."

ಒಳಗಡೆಯಿಂದ ತರಾ ಬಂದಳು.

ಕಪಾಹಿ ಹೇಳಿದಳು- ''ಬಾಳೆಹಣ್ಣು ತೆಗೆದಿಡು ತರಾ. ಟೀ ಸೊಪ್ಪು ಇದೆಯೋ ಇಲ್ಲವೋ ನೋಡು. ನಿಮ್ಮಣ್ಣನಿಗೆ ಒಂದು ಲೋಟ ಟೀ ಮಾಡಿಕೊಡು. ಬಡಪಾಯಿ ಮಳೆಯಲ್ಲಿ ಒದ್ದೆಯಾಗಿ ಬಂದಿದ್ದಾನೆ.''

ಗುಲಬ್ ಒಂದು ಸಾರಿ ತರಾ ಕಡೆಗೆ ನೋಡಿ ಅನಂತರ ಕಪಾಹಿ ಕಡೆಗೆ ದೃಷ್ಟಿ ಹಾಯಿಸಿ ಹೇಳಿದ- ''ನೋಡ್ತಾ ನೋಡ್ತಾ ತರಾ ತುಂಬಾ ಬೆಳೆದೇ ಬಿಟ್ಟಿದ್ದಾಳೆ.''

ಕಪಾಹಿ ಏನೂ ಮಾತನಾಡಲಿಲ್ಲ.

ಸ್ವಲ್ಪ ಹೊತ್ತು ಇಬ್ಬರೂ ಮೌನವಾಗಿದ್ದರು.

ಅನಂತರ ಕಪಾಹಿ ಹೇಳಿದಳು- ''ಸುದ್ದಿ ಗೊತ್ತಾಗಿರಬಹುದು.''

''ಯಾರ ಸುದ್ದಿ?'' ಕಪಾಹಿ ಕಣ್ಣುಗಳ ಕಡೆ ಗುಲಬ್ ದೃಷ್ಟಿ ಹಾಯಿಸಿದ.-ನಿಜ. ಕಪಾಹಿ ಕಣ್ಣುಗಳು ಸುಂದರವಾಗಿವೆ.

''ಚೇನಿಮಾಇ ಮದುವೆ ಮಾತುಕತೆ ನಡೆಯುತ್ತಿದೆ ಎನ್ನುವ ಸುದ್ದಿ ಕಿವಿಗೆ ಬಿತ್ತು.''

ಈ ವಿಷಯ ತಿಳಿದ ಕೂಡಲೆ ಗುಲಬ್‌ನ ಮುಖ ಸ್ವಲ್ಪ ಕಳೆಗುಂದಿತು.

''ನಿಜವೇ. ಎಲ್ಲಿಗೆ?''-ಆತ ಸ್ವಲ್ಪ ನಿರ್ಲಿಪ್ತನಂತೆ ನಟಿಸಿದ.

''ಸಿಪರಿಯಾ ಹಳ್ಳಿಯ ಯಾರೋ ಮುದುಕ ಮೋಲೋಕಾನ ಮಗನ ಜೊತೆಯಲ್ಲಿ ಅಂತ ಸಮಾಚಾರ. ಆದರೆ ಗಂಡಿಗೆ ಅಸ್ತಮಾ ಅಥವಾ ಮೂರ್ಛೆರೋಗ ಇದೆ ಅನ್ನೋ ಸುದ್ದಿ ಕಿವಿಗೆ ಬಿತ್ತು. ಸರಿಯೇ ಸರಿ. ಕಳಂಕಿತಳಾಗಿರೋ ಹೆಣ್ಣಿಗೆ ಒಳ್ಳೆಯ ಹುಡುಗ ಎಲ್ಲಿ ಸಿಗ್ತಾನೆ?''

ಗುಲಬ್ ತಲೆ ತಗ್ಗಿಸಿದ. ಅವನೂ ಚೇನಿಮಾಇ ಒಬ್ಬರನ್ನೊಬ್ಬರು ಪ್ರೀತಿಸುತ್ತಿದ್ದರು. ಆಕೆ ಆತನ ಜೊತೆಯಲ್ಲಿ ಸಂತೋಷವಾಗಿಯೇ ಓಡಿ ಬಂದಿದ್ದಳು. ತಾವು ಓಡಿ ಹೋದ ರಾತ್ರಿ ಅವರಿಬ್ಬರೂ ಇಂದ್ರ ನೇಪಾಲಿಯ ದನದ ಕೊಟ್ಟಿಗೆಯಲ್ಲಿ ಒಟ್ಟಿಗೆ ಮಲಗಿದ್ದರು. ಆ ಕಾರಣದಿಂದಲೇ ಗುಲಬ್ ಮತ್ತು ಆತನ ತಾಯಿ ಬೇರೆ ಬಂದಿರಬೇಕಾದ ಪ್ರಸಂಗ ಒದಗಿತು. ಈಗ ಅದೇ ಚೇನಿಮಾಇಗೆ ಮದುವೆ ನಿಶ್ಚಿತವಾಗಿದೆ.

ಸ್ವಲ್ಪ ಹೊತ್ತಾದ ಮೇಲೆ ಗುಲಬ್ ಕೇಳಿದ- ''ಮದುವೆ ಯಾವಾಗ?''

''ಇನ್ನೆಂಥ ಮದುವೆ? ಒಂದು ದಿನ ಮೂರು-ನಾಲ್ಕು ಮಂದಿ ಬಂದು ಹುಡುಗಿಯನ್ನು ಕರೆದುಕೊಂಡು ಹೋಗಬಹುದು- ಅಷ್ಟೆ. ಬಹುಶಃ ಮಾರ್ಗಶಿರ ಮಾಸದಲ್ಲೇ ಆಗಬಹುದು.''

ಗುಲಬ್ ಮತ್ತೇನೂ ಮಾತನಾಡಲಿಲ್ಲ.

ತರಾ ಅವನಿಗಾಗಿ ಒಂದು ಲೋಟದಲ್ಲಿ ಟೀ ಮತ್ತು ಒಂದು ಸಣ್ಣ ಬಟ್ಟಲಿನಲ್ಲಿ ಸ್ವಲ್ಪ ಬೆಲ್ಲ ತೆಗೆದುಕೊಂಡು ಬಂದಳು.

ಅದು ಹೆಸರಿಗೆ ಮಾತ್ರ ಟೀ. ಸ್ವಲ್ಪ ಕಂದು ಬಣ್ಣ. ಹಾಲು ಹೆಚ್ಚಿಗೆ ಹಾಕ್ಕಿದ್ದಳು.

''ದುಪಟಿ-ಟವಲು ಏನಾದರೂ ಸ್ವಲ್ಪ ನೇಯುತ್ತಿದ್ದೀಯಾ ತರಾ?''- ಗುಲಬ್ ಕೇಳಿದ.

''ಹೌದು. ಇನ್ನೂ ಮಗ್ಗದ ಮೇಲೆ ನಡುಪಟ್ಟಿ ನೇಯುತ್ತಿದ್ದೇನೆ.''

''ಈ ಸಾರಿ 'ಬಾಓ' ಬತ್ತದ ಬೆಳೆ ಚೆನ್ನಾಗಿದೆ ಅಂತ ಸಮಾಚಾರ ತಿಳಿಯಿತು''- ತರಾ ಕೇಳಿದಳು.

''ಇಲ್ಲಿಯ ತನಕ ಆ ಬೆಳೆ ಬಹಳ ಚೆನ್ನಾಗಿದೆ. ಆರಂಬಗಾರರಿಗೆ ಈ ಸಾರಿ ಸ್ವಲ್ಪ ಲಾಭ ಕೈಸೇರುವ ಸಂಭವ ಇದೆ.''

"ಈ ಸಾರಿ ನೀನು ಪಾಹಿಯ ಕಡೆ ಸಾಕಷ್ಟು ಹೊಸ ಜಮೀನು ಸಾಗುವಳಿ ಮಾಡಿದ್ದೀಯೆ ಎನ್ನುವ ಸುದ್ದಿ ಕಿವಿಗೆ ಬಿತ್ತು"- ಕಪಾಹಿ ಕೇಳಿದಳು.

"ಸಾಕಷ್ಟು ಏನು. ಸುಮಾರು ಒಂದು ಎಕರೆ ಜಮೀನಿರಬಹುದು. ನದಿಯ ದಡದಲ್ಲಿರುವ ಜಮೀನಿಗೆ ಎಂಥ ಬೆಲೆ? ಆದರೆ ಆ ಕಡೆಯ ಜಮೀನು ಸ್ವಲ್ಪ ಬೋರೆ. ಹೇಗೋ ಸುಮಾರು ಮೂರು ಎಕರೆ ಜಮೀನು ಸಾಗುವಳಿ ಮಾಡಿಬಿಟ್ಟರೆ ಹೊಟ್ಟೆ-ಬಟ್ಟೆ ಚಿಂತೆ ಸ್ವಲ್ಪ ಕಡಮೆಯಾಗುತ್ತೆ. ಆದರೆ ಒಬ್ಬಂಟಿಗ. ಎಷ್ಟು ಅಂತ ಮಾಡಲಿ?"

"ಆ ಜಮೀನಿಗೂ ಕಂದಾಯ ಕೊಡಬೇಕು ಅಂತ ಕೇಳಿದೆ."

"ಸದ್ಯಕ್ಕೆ ಕೊಡುವ ಹಾಗಿಲ್ಲ. ಹೊಸದಾಗಿ ಮಾಡಿದ ಜಮೀನಿನಲ್ಲಿ ಬೆಳೆ ಬೆಳೆದರೆ ಕಂದಾಯ ಕೊಡಬೇಕಾಗುತ್ತೆ. ವಾರ್ಷಿಕ ಕಂದಾಯ ಕೊಟ್ಟು ಪೋಡು-ಪಟ್ಟೆ ಮಾಡಿಸಿ ಜಮೀನನ್ನು ಮೊದಲು ನನ್ನ ಹೆಸರಿಗೆ ಮಾಡಿಸಿಕೊಳ್ಳಬೇಕು"- ಗುಲಬ್ ಹೇಳಿದ. ಬಟ್ಟಲು ತೆಗೆದುಕೊಂಡು ತರಾ ಒಳಗಡೆ ಹೋದಳು.

ಕಪಾಹಿ ಆಶಾಪೂರ್ಣ ದೃಷ್ಟಿಯಿಂದ ಗುಲಬ್‌ನ ಕಡೆ ನೋಡಿ ಹೇಳಿದಳು- "ನಾನು ಸಹ ಎಲ್ಲಿಯ ತನಕ ಈ ರೀತಿ ಕಷ್ಟಪಡಲು ಸಾಧ್ಯ? ಇಬ್ಬರೂ ನೇಯ್ಗೆ ಕೆಲಸ ಮಾಡ್ತೀವಿ. ಬೇರೆಯವರ ಹೊಲದಲ್ಲಿ ದುಡಿತೀವಿ. ಆದರೆ ಈ ರೀತಿಯಾಗಿ ಇನ್ನೆಷ್ಟು ದಿವಸಗಳವರೆಗೆ ಮಾಡಲು ಸಾಧ್ಯ? ಎಲ್ಲಿಯಾದರೂ ಸ್ವಲ್ಪ ಜಮೀನು ಸಿಕ್ಕಿಬಿಟ್ಟರೆ?"

"ಜಮೀನು ಒಂದು ವೇಳೆ ಸಿಕ್ಕಿತು ಅಂತ ತಿಳಿದುಕೊ. ಜಮೀನು ತೆಗೆದುಕೊಂಡು ನೀನು ಏನು ಮಾಡ್ತೀಯೆ?"-ಗುಲಬ್ ಕೇಳಿದ.

"ಯಾರನ್ನಾದರೂ ಕಟ್ಟುನಿಟ್ಟಾಗಿ ಗೊತ್ತುಮಾಡಿ ಸಾಗುವಳಿ ಮಾಡಲು ಕೊಟ್ಟರೆ ವರ್ಷಕ್ಕೆ ಅಷ್ಟೊ-ಇಷ್ಟೊ ದವಸ-ಧಾನ್ಯ ಮನೆಗೆ ಬರುತ್ತೆ. ಸದಾ ಬೇರೆಯವರನ್ನೇ ಅವಲಂಬಿಸಿರುವುದು ಎಂಥ ಬಾಳು?"

ಗುಲಬ್ ಸಂಕ್ಷೇಪವಾಗಿ ಹೇಳಿದ- "ಹೂಂ. ಸರಿ."

ಕೆಲವು ದಿವಸಗಳಿಂದ ಗುಲಬ್‌ನ ಮನಸ್ಸಿನಲ್ಲಿ ಮಬ್ಬುಮಬ್ಬಾದ ಆಶೆ ರೂಪುಗೊಳ್ಳುತ್ತಿತ್ತು. ತರಾಳನ್ನು ಆತನಿಗೆ ಕೊಟ್ಟು ಮದುವೆ ಮಾಡಿದರೆ ಆತ ಕಪಾಹಿ ಮತ್ತು ತರಾ ಇಬ್ಬರನ್ನೂ ಪಾಹಿಗೆ ಕರೆದುಕೊಂಡು ಹೋಗುತ್ತಾನೆ. ಅಲ್ಲೇ ಒಂದು ಹೊಸ ಮನೆ ಕಟ್ಟುತ್ತಾನೆ. ತನ್ನ ತಾಯಿಯನ್ನೂ ಅಲ್ಲಿಗೇ ಕರೆದುಕೊಂಡು ಬರುತ್ತಾನೆ. ಅವರೆಲ್ಲರೂ ಆತನ ಹೊಲದಲ್ಲಿ ಕೆಲಸ ಮಾಡುತ್ತಾರೆ. ಮತ್ತು ತನ್ನ ಮನೆಯಲ್ಲೇ ಊಟ ಸಹ ಮಾಡುತ್ತಾರೆ. ಹೊಸ ಹೊಸ ಜಮೀನನ್ನು ಸಾಗುವಳಿ ಮಾಡಿ ಧನಿಕರಾಗುತ್ತಾರೆ. ಹಸುಗಳನ್ನು ನೇಪಾಲಿಯವರಿಗೆ ಕೊಟ್ಟು ಮನೆಯಲ್ಲಿರುವ ಕರುಗಳಿಂದಲೇ ಆತ ಬೇಸಾಯ ಶುರುಮಾಡಬಲ್ಲ. ತನ್ನ ನೇಗಿಲು, ತನ್ನ ಎತ್ತುಗಳು, ಬಿತ್ತನೆ ಕೆಲಸ, ನಾಟಿ ಕೆಲಸ ಮಾಡುವವರೂ ಮನೆಯವರೇ ಆದರೆ ಅದನ್ನು ನೆನಸಿಕೊಂಡ ಮಾತ್ರದಿಂದಲೇ ಎಷ್ಟು ಆನಂದ ಪಡೆಯಬಹುದು.

ತರಾ ಒಳಗಡೆಯಿಂದ ಬಂದವಳೇ ಹೇಳಿದಳು- "ಅಣ್ಣಾ, ಇಲ್ಲೇ ಊಟ ಮಾಡ್ಕೊಂಡು ಹೋಗು. ಮನೆಯಲ್ಲಿ ಮದುಕಿ ಮಲಗಿಕೊಂಡಿರಬಹುದು."

"ಇಲ್ಲ ಇಲ್ಲ. ನೀವು ಊಟ ಮಾಡಿ. ನಾನು ಮನೆಗೆ ಹೋಗಿ ಊಟ ಮಾಡ್ತೀನಿ. ತಾಯಿ

ಇಷ್ಟು ಬೇಗ ಮಲಗೋದಿಲ್ಲ. ಮಲಗಿದ್ದರೂ ಎಬ್ಬಿಸ್ತೀನಿ."

ಆದರೆ ಕಪಾಹಿ ಸಹ ಅಲ್ಲೇ ಊಟ ಮಾಡಲು ಹೇಳಿದಾಗ ಆತ ಹೊರಟಿದ್ದವನು ಒಳಗಡೆ ಬಂದ.

"ತರಾ-ಒಂದು ತಂಬಿಗೆ ನೀರು ಕೊಡ್ತೀಯಾ? ಇಡೀ ಶರೀರದ ಮೇಲೆ ಕೆಸರೇ-ಕೆಸರು."

"ಮಳೆ ಏನು ಕಡಿಮೆ ಬಿದ್ದಿದೆಯೇ?"-ತಂಬಿಗೆ ಕೈಗೆ ಕೊಡುತ್ತಾ ತರಾ ಹೇಳಿದಳು.

ಗುಲಬ್ ಮತ್ತು ಕಪಾಹಿ ಊಟಕ್ಕೆ ಕುಳಿತರು. ತರಾ ಬಡಿಸಿದಳು. ನಂಜಿಕೊಳ್ಳುವುದಕ್ಕೆ ಮೀನು ಇತ್ತು. ಗುಲಬ್‌ನಿಗೆ ಒಳ್ಳೆ ಸೊಗಸಾದ ಊಟ ಎನಿಸಿತು.

ಹೆಂಗಸರ ಕೈ ಅಡಿಗೆಯೇ ಅಡಿಗೆ

ಧನಸಿರಿಯ ಮೀನಂತೂ ತುಂಬಾ ರುಚಿ. ಡಾಲಿಮ್ ಗ್ರಾಮದ ಅಕ್ಕಿಯಲ್ಲಿ ಜಿಡ್ಡಿದೆ. ಹಳೆ ಅಕ್ಕಿ ಅನ್ನ ತುಂಬಾ ಸಿಹಿಯಾಗಿರುತ್ತೆ. "ಚೇನಿ ಮದುವೆ ಮಾತುಕತೆ ಆಗಿದೆಯಲ್ಲಾ ಆ ಹುಡುಗನ ಹೆಸರೇನು ಅಕ್ಕಾ?" ಗುಲಬ್ ಕೇಳಿದ.

"ಹೆಸರೇನು ಅಂತ ಗೊತ್ತಿಲ್ಲ. ತರಾ ನಿನಗೆ ಗೊತ್ತೆ?" ತರಾ ಹೇಳಿದಳು- "ಬಹುಶಃ ಸರುಮಾಇನಾ ಅಥವಾ ಕೆಲಾಇ ಇರಬಹುದು."

'ಸರುಮಾಇನಾ? ಸಿಪರಿಯಾ ಹಳ್ಳಿಯವನಲ್ಲವೇ?"

"ಹೌದು, ನಿನ್ನ 'ಪಾಹಿ' ಹೊಲದ ಕಡೆಯೇ ಇರಬಹುದು."- ಕಪಾಹಿ ಹೇಳಿದಳು. "ಅವನ ತಂದೆಯ ಹೆಸರು ಮೋಲೋಕಾ ಅಥವಾ ಅಂಥಹಾ ಏನೋ......................"

ಊಟ ಮಾಡಿದ ಮೇಲೆ ಗುಲಬ್ ಒಂದು ಬೀಡಾ ಬಾಯಿಗೆ ಹಾಕಿಕೊಂಡ. ಅನಂತರ ಸ್ವಲ್ಪ ಯೋಚಿಸಿ ಹೇಳಿದ- "ಅಕ್ಕಾ ನೀನೇನೂ ಯೋಚಿಸಬೇಡ. ನಾನು ಎಷ್ಟು ಜಮೀನು ಸಾಗುವಳಿ ಮಾಡಲು ಸಾಧ್ಯ ನೋಡ್ತಿನಿ. ಒಂದು ವೇಳೆ ಜಾಸ್ತಿ ಜಮೀನು ಸಾಗುವಳಿ ಮಾಡಿದ್ದೇ ಆದರೆ ತಾಯಿಯನ್ನೂ ಅಲ್ಲಿಗೆ ಕರೆದುಕೊಂಡು ಹೋಗ್ತೀನಿ. ಇಬ್ಬರಿಗೋಸ್ಕರ ಎರಡು ಕಡೆ ಸಂಸಾರ ನಡೆಸುವ ಅಗತ್ಯ ಏನು? ಅಷ್ಟೇ ಅಲ್ಲ, ನಿಮ್ಮನ್ನೂ ಅಲ್ಲಿಗೇ ಕರೆದುಕೊಂಡು ಹೋದರೂ ಹೋಗಬಹುದು. ನಾನು ಉಳುಮೆ ಮತ್ತು ಗುದ್ದಲಿ ಕೆಲಸ ಮಾಡ್ತೀನಿ. ನೀವು ಬಿತ್ತನೆ ಮತ್ತು ಕಟಾವು ಕೆಲಸ ಮಾಡ್ತೀರಿ.- ಇದು ಒಂದು ರೀತಿ ಚೆನ್ನಾಗಿಯೇ ಇರುತ್ತೆ."

ತರಾ ಕಪಾಹಿ. ಮುಖ ನೋಡಿದಳು. ಕಪಾಹಿ ಗುಲಬ್‌ನ ಮುಖ ನೋಡಿದಳು. ಆತನ ಮಾತಿನಲ್ಲಿ ಮತ್ತೊಂದು ವಿಷಯದ ಧ್ವನಿ ಉಂಟೇ ಅಥವಾ ಇಲ್ಲವೇ ಎನ್ನುವುದನ್ನು ತಿಳಿದುಕೊಳ್ಳಲು...........

ಅನಂತರ ಕಪಾಹಿ ಹೇಳಿದಳು- "ನಮ್ಮ ಬಗ್ಗೆ ಈಗಲೇ ಯೋಚಿಸಬೇಕಾದ ಅಗತ್ಯವಿಲ್ಲ. ಮೊದಲು ನೀನು ಹೋಗಿ ಅಲ್ಲಿ ನೆಲಸು. ನಾವು ಹೇಗೋ ಜೀವನ ಸಾಗಿಸುತ್ತಿದ್ದೇವೆ. ನಮ್ಮ ಹಳ್ಳಿಯವರನ್ನು ಬಿಟ್ಟು ಆತುರಾತುರವಾಗಿ ಬೇರೆ ಕಡೆ ಹೊರಟು ಹೋಗುವುದು ಸಹ ಅಷ್ಟು ಚೆನ್ನಾಗಿರುವುದಿಲ್ಲ."

ಗುಲಬ್ ಹೇಳಿ- "ಊರಿನವರ ಮುಖ ನೋಡ್ತಾ ಕುಳಿತುಕೊಂಡರೆ ಹೊಟ್ಟೆ ತುಂಬುತ್ತದೆಯೇ? ನಿಮ್ಮ ಬಗ್ಗೆ ಯಾರು ಅಷ್ಟು ಆಸಕ್ತಿ ವಹಿಸುತ್ತಾರೆ? ನದಿಯ ದಡದ ಜಮೀನಾದರೆ ಏನಾಯಿತು? ಅಲ್ಲಿ ಒಂದು ತೋಟ ಮಾಡಿ ಎರುವಿನ ಮೇಲೆಲ್ಲಾ ಅಡಕೆ ಗಿಡ ನೆಡ್ತೀನಿ. ಬಾಳೆಗಿಡ ನೆಟ್ಟಿದ್ದೇನೆ. ಅವು ಗೊನೆ ಬಿಟ್ಟು ಹಣ್ಣಿಗೆ ಬಂದಿವೆ. ಎರಡು ಪರಂಗಿ ಸಸಿ

ಸಹ ನೆಟ್ಟಿದ್ದೇನೆ. ಬೂರಗದ ಮರ ಹಾಗೂ ಇನ್ನು ಬೇರೆ ಕೆಲವು ಮರಗಳಿವೆ. ಬಹಳ ಫಲವತ್ತಾದ ಜಮೀನು. ಆ ಜಮೀನಿನಲ್ಲಿ ಏನಾದರೂ ನೆಟ್ಟರೆ ಕೆಲವೇ ದಿನಗಳಲ್ಲಿ ಅದು ಹುಲುಸಾಗಿ ಬೆಳೆಯುತ್ತೆ. ನಮ್ಮ ತೋಟದಲ್ಲಿ ಕೆಲವು ತರಕಾರಿ ಗಿಡ ಎಷ್ಟು ಚೆನ್ನಾಗಿವೆ ಎಂದರೆ ನೋಡ್ತಾ ಇದ್ದರೆ ನೋಡ್ತಾ ಇರಬೇಕು ಅನ್ನಿಸುತ್ತೆ.''

ತರಾ ಪಾತ್ರೆಗಳನ್ನು ತೆಗೆದುಕೊಂಡು ಒಳಗಡೆ ಹೋದಳು. ಕಪಾಹಿ ಪಿಸಿಮಾತಿನಲ್ಲಿ ಹೇಳಿದಳು- ''ಎಲ್ಲಾ ಕೆಲಸವನ್ನೂ ಸ್ವಲ್ಪ ಯೋಚನೆ ಮಾಡಿ ಎಚ್ಚರಿಕೆಯಿಂದ ಮಾಡ್ಬೇಕು. ನಾವಿಬ್ಬರೂ ಇದ್ದಕ್ಕಿದ್ದಂತೆ ನಿನ್ನ ಜೊತೆಯಲ್ಲಿ ಬಂದು ಇದ್ದರೆ ಹಳ್ಳಿಯವರು ಸುಮ್ಮನೆ ಬಿಡ್ತಾರೆಯೇ? ತರಾ ಚಿಕ್ಕ ಹುಡುಗಿ ಅಂತಲೇ ತಿಳಿದುಕೊ. ಆದರೆ ನಾನು ಬಂದು ನಿನ್ನ ಜೊತೆಯಲ್ಲಿ ಇದ್ದುಬಿಟ್ಟರೆ ಜನಗಳ ಕಣ್ಣಲ್ಲಿ ಕೆಂಡ ಕಾರೋದಿಲ್ಲವೇ? ಹಿಂದೆ ನನಗೆ ಕೊಟ್ಟಿರುವ ತೊಂದರೆ ಅದೇನೂ ಕಡಿಮೆ ಅಲ್ಲ.''

ಗುಲಬ್‌ನ ಮುಖ ನಾಚಿಕೆಯಿಂದ ಕೆಂಪೇರಿತು. ಕೊನೆಗಂತೂ ಹೇಳಿದ- ''ನಮ್ಮ ತಾಯಿ ಇರೋದಿಲ್ವೇ?''

''ಅವಳೇನು ಮಾಡಿಯಾಳು?ನಾವಿಬ್ಬರೂ ನಿನ್ನ ಜೊತೆಯಲ್ಲೇ ಇದ್ದುಬಿಟ್ಟರೆ ನಿನ್ನ ತಾಯಿ ಆಗ ನಿನ್ನ ಜೊತೆಯಲ್ಲಿರುವುದು ಕಡಿಮೆ. ನಿನಗೆ ಈ ವಿಷಯ ಅರ್ಥವಾಗುವುದಿಲ್ಲ.''

ಗುಲಬ್ ಸ್ವಲ್ಪ ಹೊತ್ತಿನವರೆಗೆ ಅರ್ಥವಾಗದಿರುವ ಮಾತಿನ ಬಗ್ಗೆ ಯೋಚಿಸುತ್ತಾ ಕುಳಿತ. ತರಾ ಮತ್ತು ಕಪಾಹಿ ಇಬ್ಬರನ್ನೂ ತನ್ನ ಜೊತೆಯಲ್ಲಿ ಇರಿಸಿಕೊಳ್ಳಲು ಒಂದು ಸಹಜ ಉಪಾಯ ಆತನಿಗೆ ಗೊತ್ತು. ಆ ವಿಷಯದ ಬಗ್ಗೆ ಕಪಾಹಿಯೊಡನೆ ಪ್ರಸ್ತಾಪಿಸಲು ಆತನಲ್ಲಿ ಯಾವ ಭಾಷಾಮಾಧ್ಯಮವೂ ಇರಲಿಲ್ಲ. ಕಪಾಹಿ ಆತನೊಡನೆ ತರಾ ಮದುವೆ ನೆರವೇರಿಸುತ್ತಾಳೆಯೇ? ಕಪಾಹಿ ದೃಷ್ಟಿಯಲ್ಲಿ ಇನ್ನೂ ಚಿಕ್ಕ ಹುಡುಗಿ. ಹದಿನಾಲ್ಕು ವರ್ಷದ ಯುವತಿಯಾಗಿರುವವಳೂ ಅವಳ ದೃಷ್ಟಿಯಲ್ಲಿ ಇನ್ನೂ ಚಿಕ್ಕ ಹುಡುಗಿಯೇ!

ತರಾ ಮಿತಭಾಷಿಣಿ. ಬಹುಶಃ ಸದಾ ಒಬ್ಬಳೇ ಇರುವ ಕಾರಣ ಆಕೆಗೆ ಮಾತನಾಡಲು ಅವಕಾಶವೇ ಸಿಗುವುದಿಲ್ಲ. ಕಪಾಹಿಯ ಜೊತೆಯಲ್ಲಿ ಎಷ್ಟು ತಾನೇ ಮಾತನಾಡಲು ಸಾಧ್ಯ?

ಒಬ್ಬಳೇ ಇರುವ ವೇಳೆಯಲ್ಲಿ ಆಕೆಯ ಮನಸ್ಸು ಭಾರವಾಗಿ ಪರಿಣಮಿಸುತ್ತದೆ. ಈಗ ಆಕೆ ತಿಳಿವಳಿಕಸ್ಥೆ. ತನ್ನ ಚಿಕ್ಕಮ್ಮನ ಚಾರಿತ್ರ್ಯ ಅಲ್ಪ-ಸ್ವಲ್ಪ ದೋಷಪೂರ್ಣವಾದುದೆಂಬ ವಿಷಯ ಆಕೆಗೆ ಅಕ್ಕಪಕ್ಕದವರಿಂದ ಗೊತ್ತಾಗಿದೆ. ಆದುದರಿಂದಲೇ ಅವರು ಹಳ್ಳಿಯ ಮಧ್ಯೆ ವಾಸಿಸುತ್ತಿದ್ದರೂ ಬೇರೆಯವರೊಡನೆ ಬೆರೆಯಲಾಗಲಿಲ್ಲ. ಕಪಾಹಿಯ ಅವಗುಣಗಳ ಕಾರಣದಿಂದಾಗಿಯೇ ತನಗೂ ಕೆಟ್ಟ ಹೆಸರು ಬರುತ್ತಿದೆ ಎಂಬುದನ್ನು ಆಕೆ ಅರಿತಿದ್ದಾಳೆ. ಆದರೆ ಆಕೆಯನ್ನು ನೋಡಿದವರಂತೂ ಆಕೆಯ ಜೊತೆಯಲ್ಲಿ ಸ್ನೇಹ ಬೆಳೆಸುತ್ತಾರೆ. ಆದಾಗ್ಯೂ ಬೇರೆ ಹುಡುಗಿಯರಂತೆ ತಾನು ಸ್ವಚ್ಛಂದಳಲ್ಲವೆಂದು ಆಕೆಗೆ ಗೊತ್ತು.

ಆಕೆ ಏನೂ ಹೆಚ್ಚಿಗೆ ತಲೆಗೆ ಹಚ್ಚಿಕೊಳ್ಳುವುದಿಲ್ಲ. ಜಾಣೆ. ಸುತ್ತಮುತ್ತಲಿನ ಚೇತನ ಜಗತ್ತು ಆನಂದೋತ್ಸವ ಆಚರಿಸುತ್ತದೆ. ಆ ಉತ್ಸವದಲ್ಲಿ ಭಾಗವಹಿಸಲು ಆಕೆಗೆ ಆಮಂತ್ರಣ ರೂಪದಲ್ಲಿ ಅಲಿಖಿತ ಕರೆಯೋಲೆ ಆ ಆನಂದಮಯ ವಾತಾವರಣ ಆಕೆಯ ಮನಸ್ಸಿನ ಮಾಲಿನ್ಯವನ್ನು ನೀಗುತ್ತದೆ. ಆಕೆ ತನ್ನಷ್ಟಕ್ಕೆ ತಾನೇ ನಗುತ್ತಾಳೆ. ಹಾಡುತ್ತಾಳೆ. ಆಕೆಯ ಮನಮಯೂರ ನರ್ತಿಸುತ್ತದೆ. ಆಕೆಯ ಮನಸ್ಸು ಎಲ್ಲೋ ದೂರ ಹಾರಿ ಹೋಗಲು

ಬಯಸುತ್ತದೆ.

ಅಂತರಿಕವಾಗಿ ಆಕೆ ಇಷ್ಟೊಂದು ಅಶಾಂತಳೂ, ಅಸ್ಥಿರಚಿತ್ತಳೂ ಆಗಿದ್ದರೂ ಬಹಿರಂಗವಾಗಿ ಶಾಂತ ಹಾಗೂ ಸ್ಥಿರಚಿತ್ತಳಂತೆ ಕಾಣುತ್ತಾಳೆ. ಆಕೆ ಸ್ಥಿರಚಿತ್ತಳಾಗಿ ಬಹುಶಃ ಬಾಳಿನ ಬೆಳಕಿಗಾಗಿ ತಪಸ್ಸನ್ನಾಚರಿಸುತ್ತಾ ಇದ್ದಾಳೆ. ಹಿತ್ತಲಿನ ಬೇಲಿಯ ಹಿಂದುಗಡೆ ತೇಗದ ಮರಗಳಿವೆ. ಆ ಕಡೆ ಬಹುದೂರದಲ್ಲಿ ಕಾಣಿಸುತ್ತಿದ್ದ ನಕ್ಷತ್ರಗಳಲ್ಲಿ ತನ್ನ ಕೆಲವು ಗೌಪ್ಯ ಕಥೆಗಳನ್ನು ಬಚ್ಚಿಡಲು ಬಯಸುತ್ತಾಳೆ.

ತರಾ ಮನಸ್ಸು ಈ ರೀತಿ ವಿಷಾದಪೂರ್ಣವಾಗಿದ್ದರೂ ಉದಾರವಾದದ್ದು. ಆಕೆಯ ಮನಸ್ಸಿನ ಹಂಬಲ ಸೂರ್ಯಕಾಂತಿ ಸುಮನದಂತಾಗಿದೆ. ಅದಕ್ಕೆ ಬಹುಶಃ ವಿಶಾಲ ನೀಲಾಕಾಶಬೇಕು. ಶರತ್‌ಚ್ಚಂದ್ರನಿಂದ ಉಕ್ಕಿಬಂದ ಅಮೃತ ಬೇಕು.

ಆಕೆಯ ಈ ಗೌಪ್ಯ ಸೂರ್ಯವಂದನೆ ಫಲಿಸುವುದೆಂತು? ಈ ಬಗ್ಗೆ ಆಕೆಗೆ ಚಿಂತೆಯಿಲ್ಲ. ಒಮ್ಮೊಮ್ಮೆ ಮಲಗಿಕೊಂಡೇ ಪ್ರೇಯಸಿಯಾಗುವ, ಪತ್ನಿಯಾಗುವ, ತಾಯಿಯಾಗುವ ಹಾಗೂ ಗೃಹಿಣಿಯಾಗುವ ಸುಮಧುರ ಕನಸು ಕಾಣುತ್ತಾಳೆ. ಆಕೆಯ ಮನಸ್ಸು ಯಾರದೋ ವಕ್ಷಸ್ಥಳದ ಉತ್ತಾಪ ಬಯಸುತ್ತದೆ. ಅತ್ಯಧಿಕ ಸ್ನೇಹಕ್ಕಾಗಿ ಹಾತೊರೆಯುತ್ತದೆ.

ಆದರೆ ಆಕೆಯ ಮನೆಯ ಮತ್ತು ಮನಸ್ಸಿನ ಅಂಗಳಕ್ಕೆ ಯಾರೂ ಪ್ರವೇಶಿಸಿಲ್ಲ. ಒಮ್ಮೊಮ್ಮೆ ಗುಲಚ್ ಬರುತ್ತಾನೆ. ಒಮ್ಮೊಮ್ಮೆ ಚಂದ್ರ. ಗುಲಚ್ ಜೊತೆಯಲ್ಲಿದ್ದಾಗ ಆಕೆಗೆ ಎಲ್ಲವೂ ಸುಲಭವೆಂದು ಭಾಸವಾಗುತ್ತದೆ. ಆತನ ಜೊತೆಯಲ್ಲಿ ಎಲ್ಲ ವಿಷಯವನ್ನೂ ಕುರಿತು ಮಾತನಾಡಬಹುದು. ಗುಲಚ್ ಹೊರಟು ಹೋದ ಮೇಲೆ, ಆತ ಜೊತೆಯಲ್ಲಿಲ್ಲದಾಗ ಆಕೆಯ ಮೌನಪ್ರಾರ್ಥನೆಯ ದಿಗಂತದ ಮೇಘಾವೃತ ಸೂರ್ಯದಂತೆ ಆತ ಭಾಸವಾಗುತ್ತಾನೆ. ಎಂದಾದರೊಮ್ಮೆ ಆಕೆ ತನ್ನ ಬಾಹುದ್ವಯಗಳಿಂದ ಆತನನ್ನು ಆಲಂಗಿಸಿಕೊಳ್ಳುವಳು. ಸೂರ್ಯನ ಸಂಪೂರ್ಣ ಉತ್ತಾಪವನ್ನು ತನ್ನ ಹೃದಯಾಂತರಾಳದಲ್ಲಿ ಗರ್ಭೀಕರಿಸಿಕೊಂಡು ತರಾ ಒಮ್ಮೆಲೆ ಕುಬೇರನ ಸಂಪತ್ತಿನ ಒಡತಿ ಆಗುವಳು.

ಆದರೆ ತನ್ನ ಮನಸ್ಸಿನ ಆಕಾಂಕ್ಷೆಯನ್ನು ಆಕೆ ಯಾರಿಗೂ ತಿಳಿಸುವುದಿಲ್ಲ. ತನಗೆ ತಾನೇ ಹೇಳಿಕೊಳ್ಳುವುದೂ ಇಲ್ಲ. ಕರ್ಬಲಾದ ಸಹಸ್ರಾರು ಮಂದಿ ಹುತಾತ್ಮರ ಎಂದೆಂದಿಗೂ ಹಿಂಗದ ತೃಷೆಯಿಂದ ಆಕೆ 'ಫರಹಾದ್' ನದಿಯ ಶುಷ್ಕ ಮರಳಿನ ಮೇಲೆ ನಿಂತಿರುತ್ತಾಳೆ.

ಚಂದ್ರನ ಮನಸ್ಸನ್ನು ಅರಿಯುವುದು ಕಷ್ಟ. ಆತ ಒಬ್ಬ ಅರೆಮರುಳ. ಯಾವಾಗ ಏನು ಮಾತನಾಡುತ್ತಾನೆ? ಯಾವಾಗ ಏನು ಮಾಡುತ್ತಾನೆ? ಹೇಳಲಾಗುವುದಿಲ್ಲ. ಆದರೆ ಆತ ಯಾರಿಗೂ ಅನ್ಯಾಯ ಮಾಡುವವನಲ್ಲ. ಧನಶಿರಿಯ ಪ್ರವಾಹ ಒಮ್ಮೊಮ್ಮೆ ಮನೆ-ಮಠಗಳನ್ನು ನಾಶಪಡಿಸುವುದಿಲ್ಲವೇ? ಆದರೆ ಪ್ರವಾಹದಲ್ಲಿ ಕೊಚ್ಚಿಹೋದ ಮಣ್ಣು ಮತ್ತೆ ಜಮಾಯಿಸುವುದಿಲ್ಲವೇ?

ಇಲ್ಲ, ಇಲ್ಲ. ಚಂದ್ರನೊಡನೆ ಯಾವುದನ್ನೂ ಹೇಳಲಾಗುವುದಿಲ್ಲ. ಬಿರುಗಾಳಿ ಬೀಸುವ ಮುನ್ನ ಅಂತರಂಗದ ವಿಷಯವನ್ನು ತಿಳಿಸುವುದರಿಂದ ಏನು ಪ್ರಯೋಜನ?

ತರಾ ಮೌನವಾಗಿರುತ್ತಾಳೆ. ಮೌನವಾಗಿಯೇ ಇದ್ದುಕೊಂಡು ತನ್ನ ಅಂತರಂಗದ ಹಾಡನ್ನು ಕೇಳಿಸಿಕೊಳ್ಳುತ್ತಾಳೆ. ಜೀವನದ ಗಂಭೀರ, ಕೋಮಲ ಚಂಚಲ ಹಾಡು.

ಬಾಲ್ಯದಲ್ಲಿ ತರಾ ಒಂದು ಮೈನಾ ಪಕ್ಷಿಯ ಮರಿಯನ್ನು ಸಾಕಿದ್ದಳು. ಅದರ ತಾಯಿಯಂತೆ

ಅದಕ್ಕೆ ಕಾಳು ತಿನ್ನಿಸುತ್ತಿದ್ದಳು, ಸ್ನಾನ ಮಾಡಿಸುತ್ತಿದ್ದಳು ಮತ್ತು ಮಾತಾಡುವುದನ್ನು ಕಲಿಸುತ್ತಿದ್ದಳು. ಒಮ್ಮೆ ಬೆಕ್ಕು ಅದನ್ನು ಗಾಯಗೊಳಿಸಿತು. ಆ ಹಕ್ಕಿಯ ಮರಿ ಹಾಗೆಯೇ ಸತ್ತುಹೋಯಿತು.

ತರಾ ತುಂಬಾ ಅತ್ತಳು. ಇಡೀ ದಿವಸ ಊಟ ಮಾಡಲಿಲ್ಲ. ಬೆಕ್ಕನ್ನು ಸಾಯಿಸಲು ಶಪಥ ಮಾಡಿದಳು. ಆದರೆ ಅದನ್ನು ಕೊಲ್ಲುವುದು ಹೇಗೆ? ಆ ಬಿಳಿಯ ಬೆಕ್ಕು ಸಹ ಅವಳಿಗೆ ತುಂಬಾ ಅಚ್ಚುಮೆಚ್ಚು. ಬೆಕ್ಕನ್ನು ಕಂಕುಳಲ್ಲಿರಿಸಿಕೊಂಡು ಸುತ್ತಾಡಿದ್ದಾಳೆ. ಅದರೊಡನೆ ಮಾತಾಡಿದ್ದಾಳೆ. ರಾತ್ರಿ ಹೊತ್ತು ಅದನ್ನು ಎದೆಗಪ್ಪಿಕೊಂಡು ನಿದ್ರಿಸಿದ್ದಾಳೆ. ಅದರ ದೆಸೆಯಿಂದ ಎಷ್ಟೋ ದಿವಸಗಳು ಕಪಾಹಿಯಿಂದ ಬೈಗಳು ಕೇಳಿದ್ದಾಳೆ. ಆಕೆಗಂತೂ ಬೆಕ್ಕಿನದೇ ಹುಚ್ಚು.

ಆ ಬೆಕ್ಕೇನೂ ಕಡಮೆ ಪೋಕರಿಯಲ್ಲ. ಅದನ್ನು ನೋಡದೆ ಆಕೆ ಒಂದು ಕ್ಷಣವೂ ಇರಲಾರಳು. 'ಮಿಯಾವ್, ಮಿಯಾವ್' ಎಂದು ಕೂಗುತ್ತಾ ಎಲ್ಲ ಕಡೆಯೂ ಹುಡುಕಾಡುತ್ತಿರುತ್ತದೆ. ತನ್ನ ಪಾಲಿನ ಅನ್ನ ಮತ್ತು ಮೀನನ್ನು ತಿಂದ ಮೇಲೆಯೂ ಬೇರೆಯವರ ಪಾಲಿನಲ್ಲಿ ಅಲ್ಪ ಸ್ವಲ್ಪ ತಿಂದಮೇಲೆ ಅದಕ್ಕೆ ಹೊಟ್ಟೆ ತುಂಬುತ್ತೆ.

ಆ ಬೆಕ್ಕು ಕಪಾಹಿಯ ಕಾಲುಗಳ ಮೇಲೆ ಬಿದ್ದು ಹೊರಳಾಡತೊಡಗಿದಾಗ ಆಕೆ ಬೇಸತ್ತು ನನ್ನನ್ನು ಸತಾಯಿಸಬೇಡ. ನಿನ್ನ ತಾಯಿಯ ಹತ್ತಿರ ಹೋಗು ಎಂದು ಹೇಳುತ್ತಿದ್ದಳು. ಒಂದೇ ಏಟಿಗೆ ಹೊಡೆದು ಸಾಯಿಸ್ತೀನಿ ಎಂದು ಗದರಿಸುತ್ತಿದ್ದಳು.

ತರಾ ಈ ಮಾತನ್ನು ಕೇಳಿಸಿಕೊಂಡು ತನ್ನಲ್ಲಿ ತಾನೇ ಸಿಟ್ಟಾಗುತ್ತಿದ್ದಳು.

ಈ ನಿರ್ಜನದ ಮನೆಯಲ್ಲಿ ವಯಸ್ಸಿಗೆ ಬಂದ ತರಾ ಒಬ್ಬಳೇ ಕಾಲ ಕಳೆಯುವುದು ಕಷ್ಟವೆಂಬುದು ಕಪಾಹಿಗೆ ಗೊತ್ತು. ಬೆಕ್ಕು ಮತ್ತು ಮೈನಾ ಹಕ್ಕಿಯ ಮರಿಯೊಡನೆ ಹೇಗೋ ಕಾಲ ಕಳೆಯಲೆಂಬುದೇ ಅವಳ ಆಶಯವಾಗಿತ್ತು.

ಕಪಾಹಿ ಮತ್ತು ಗುಲಬ್ ಅವರಿಬ್ಬರಲ್ಲಿ ಮಾತುಕತೆ ನಡೆಯುತ್ತಿದ್ದುದನ್ನು ನೋಡಿ ತರಾ ಆ ಬಿಳಿಯ ಬೆಕ್ಕನ್ನು ಕಂಕುಳಲ್ಲಿ ಎತ್ತಿಕೊಂಡು ಗೋಡೆಯ ಮತ್ತೊಂದು ತುದಿಯಲ್ಲಿ ಕುಳಿತು ಅವರ ಮಾತುಕತೆ ಕೇಳಿಸಿಕೊಳ್ಳತೊಡಗಿದಳು. ಆ ಮಾತುಕತೆಯಲ್ಲಿ ತಾನೂ ಪಾಲ್ಗೊಳ್ಳಲಾಗುವುದೇ?

ಗುಲಬ್ ಮತ್ತು ಕಪಾಹಿಯ ಮಾತುಕತೆ ಇನ್ನೇನು ಮುಗಿಯುವುದರೊಳಗಿತ್ತು. ಮಾತು, ಮೌನ, ಮತ್ತೆ ಮಾತು, ಮೌನ.

ರಾತ್ರಿಯ ಸಮಯ, ಬಹಳ ಹೊತ್ತಾಗಿತ್ತು. ಮಳೆ ಇನ್ನೂ ನಿಂತಿರಲಿಲ್ಲ. ವ್ಯರ್ಥವಾಗಿ ಸೀಮೆಎಣ್ಣೆ ದೀಪ ಉರಿಸುವುದು ಕಪಾಹಿಗೆ ಹಿಡಿಸಲಿಲ್ಲ. ಗುಲಬ್ ಮಾತನಾಡದೆ ಸುಮ್ಮನೆ ಕುಳಿತುಕೊಂಡದ್ದನ್ನು ಕಂಡು ಕಪಾಹಿ ಹೇಳಿದಳು- "ರಾತ್ರಿ ಸಮಯ. ಬಹಳ ಹೊತ್ತಾಗಿದೆ. ನೀನು ಈಗಲೇ ಹೊರಡು. ಈ ವಿಷಯದ ಬಗ್ಗೆ ಈಗಲೇ ಯೋಚಿಸುವ ಅಗತ್ಯವಿಲ್ಲ. ಯಾವ ಸಮಯಕ್ಕೆ ಏನಾಗಬೇಕೋ ಅದು ಆಗುತ್ತೆ. ಜಮೀನು ಆಬಾದು ಮಾಡಿದ್ದೀಯೆ. ಬಹಳ ಒಳ್ಳೆಯ ಕೆಲಸ ಮಾಡಿದೆ. ಎಷ್ಟು ಆಬಾದು ಮಾಡಲು ಸಾಧ್ಯವೋ ಅಷ್ಟನ್ನು ಮಾಡು.

"ಅಹುದು, ಸರಿ "- ತರಾ ಮತ್ತು ಕಪಾಹಿಯಿಂದ ಬೀಳ್ಕೊಂಡು ಆತ ಮಳೆಯಲ್ಲೇ ಮನೆ ಕಡೆ ಹೊರಟ. ದೀಪ ಹಿಡಿದುಕೊಂಡು ಕಪಾಹಿ ಬೀದಿ ಬಾಗಿಲಿನ ಬಳಿ ನಿಂತುಕೊಂಡಳು ಆ ಬೆಳಕಿನಲ್ಲಿ ಗುಲಬ್ ರಸ್ತೆಗೆ ಹೋಗುವ ತನಕ ದೀಪ ಹಿಡಿದು ಅಲ್ಲೇ ನಿಂತಳು. ಅನಂತರ

ಅವಳು ಕದ ಹಾಕಿಕೊಂಡು ಒಳಗೆ ಹೋದಳು.

ಮಲಗಿಕೊಳ್ಳಲು ಹೋದಾಗ ತರಾ ಹೇಳಿದಳು - "ಜಮೀನನ್ನು ಆಬಾದು ಮಾಡಿ ನಮಗೂ ಮೂರು-ನಾಲ್ಕು ಎಕರೆ ಕೊಟ್ಟರೆ ಏನು ನಷ್ಟವಾಗುತ್ತೆ?"

"ಆತ ಜಮೀನು ಆಬಾದು ಮಾಡಿದರೂ ನಮಗೆ ಪುಕ್ಕಟೆ ಯಾಕೆ ಕೊಡ್ತಾನೆ?" - ಕಪಾಹಿ ಹೇಳಿದಳು.

"ಪುಕ್ಕಟೆಯಾಗಿ ಯಾರು ಕೇಳುತ್ತಾರೆ? ಆತ ಜಮೀನು ಆಬಾದು ಮಾಡಿದರೆ ನಾವು ನಾಟಿ-ಕಟಾವು ಮಾಡ್ತೀವಿ. ಅರ್ಧ-ಅರ್ಧ ಪಾಲು ಸಿಗುತ್ತದೆ."

"ನಾಟಿ-ಕಟಾವಿನ ಮಾತೇ ಬೇರೆ. ಆತನ ಮನೆಯಲ್ಲಿ ಹೋಗಿ ಇರೋ ಮಾತೇ ಬೇರೆ. ನಿನಗೆ ಈ ವಿಷಯ ಅರ್ಥವಾಗುವುದಿಲ್ಲ. ಮಲಗಿಕೊ."

ತರಾ ಹೇಳಿದಳು - "ಯಾಕೆ ಚಿಕ್ಕಮ್ಮ, ನಾನು ನೆಯ್ದು ಬಟ್ಟೆ ಮಾರಿದ ಹಣದಲ್ಲಿ ಇನ್ನೆಷ್ಟು ಉಳಿದಿದೆ?"

"ಹದಿನೇಳು ರೂಪಾಯಿ ಆರಾಣೆ"

"ಅಂದಹಾಗೆ ಆ ದುಡ್ಡಿನಿಂದ ನಿನಗೆ ಏನಾದರೊಂದು ಒಡವೆ ಮಾಡಿಸಬೇಕು. ದುಡ್ಡಿರೋ ವಿಷಯ ಯಾರಿಗೂ ಹೇಳಬೇಡ. "

"ಯಾಕೆ, ಆ ದುಡ್ಡು ಕೊಟ್ಟು ಗುಲಬಣ್ಣನ ಹತ್ತಿರ ನದಿ ದಡದಲ್ಲಿರುವ ಜಮೀನಿನಲ್ಲಿ ಸ್ವಲ್ಪ ಭಾಗ ಕೊಂಡುಕೊಳ್ಳಲಾಗುವುದಿಲ್ಲವೇ?"

"ಸರಿ, ಈಗ ರಾತ್ರಿ ಸಾಕಷ್ಟು ಹೊತ್ತಾಗಿದೆ. ನಿದ್ದೆ ಮಾಡು " - ಎಂದು ಹೇಳುತ್ತಾ ಕಪಾಹಿಯು ತರಾಳ ಕೆನ್ನೆಯನ್ನು ತನ್ನ ಕೈಯಿಂದ ನೇವರಿಸತೊಡಗಿದಳು.

# ನಾಲ್ಕು

ಗುಲಬ್ ತನ್ನ ತಾಯಿ ಹೆಣೆದಿದ್ದ ತಡಿಕೆ ಕಟ್ಟುತ್ತಿದ್ದ. ಆತನ ತಾಯಿ ಕೊಟ್ಟಣದ ಯಾತದಲ್ಲಿ ಬತ್ತ ಕುಟ್ಟುತ್ತಿದ್ದಳು. ಮಳೆ ನಿಂತಿತ್ತು. ಬಿಸಿಲು ತೀವ್ರ ಪ್ರಖರವಾಗಿತ್ತು. ವಿಪರೀತ ಸೆಕೆ. ಎಲ್ಲರ ಮನಸ್ಸಿನಲ್ಲಿಯೂ ಪ್ರಸನ್ನತೆ ಸೂಸುತ್ತಿತ್ತು.

ಇಂದು ಗುಲಬ್‌ಗೆ ಅಪಾರ ಆನಂದ.

ಆತ ಬಂದು ಇಂದಿಗೆ ಮೂರು ದಿನಗಳಾಗಿವೆ. ನಾಳೆ ಆತ 'ಪಾಹಿ'ಗೆ ಹೋಗುವನು.

ಇಂದು ಬಿಸಿಲು ಬಹಳ ಚೆನ್ನಾಗಿ ಬಂದಿದೆ.

ಬಿಸಿಲು ಕಂಡ ಕೂಡಲೇ ಗುಲಬ್‌ನ ಮನಮಯೂರ ನರ್ತಿಸತೊಡಗುತ್ತದೆ. ಯೌವನದೊಡನೆ ಶ್ರಾವಣ ಮಾಸದ ಪ್ರಖರ ಬಿಸಿಲಿನ ಸಂಬಂಧವಿದೆ.

ದನಕರುಗಳನ್ನು ಬೇಜವಾಬ್ದಾರಿಯಿಂದ ಬಿಡಲಾಗುವದಿಲ್ಲ. ಅವು ಬೇರೆಯವರ ಹೊಲ ಗದ್ದೆಗಳಿಗೆ ನುಗ್ಗುತ್ತವೆ. ಅದರಿಂದ ಪರಸ್ಪರ ಬೈದಾಟ. ಬೈಯದೆ ಇರುತ್ತಾರೆಯೇ? ದನಕರುಗಳು ಮೇಯೋಕೆ ಯಾರಾದರೂ ಹೊಲಗದ್ದೆ ಬೆಳಸುತ್ತಾರೆಯೇ? ದನಕರುಗಳಲ್ಲೂ

ಪುಂಡತನ ಇಲ್ಲದೆ ಇಲ್ಲ. ತಮ್ಮ ಮಾಲೀಕನ ತೋಟದ ಹುಲ್ಲು ಅವುಗಳಿಗೆ ರುಚಿಸುವುದಿಲ್ಲ. ಬೇರೆಯವರ ತೋಟದ ಬೇಲಿ ಮುರಿದು ಅಲ್ಲಿನ ಹುಲ್ಲು. ಬೆಳಸು ತಿನ್ನದ ಹೊರತು ಅವುಗಳಿಗೆ ತೃಪ್ತಿಯಿಲ್ಲ. ಪಕ್ಕದ ಹೊಲಗದ್ದೆಯವರೊಡನೆ ಕಿತ್ತಾಟ ಮಾಡಿಸಿದಾಗ ಮಾತ್ರ ಅವುಗಳಿಗೆ ಷೆಮ್ಮದಿ.

ಎರಡು ಕರುಗಳಂತೂ ಬಹಳ ತುಂಟತನ ಮಾಡುತ್ತವೆ.

ಅವು ಬೇಲಿ-ಗೀಲಿ ಯಾವುದನ್ನೂ ಲೆಕ್ಕಿಸುವುದಿಲ್ಲ. ಒಂದು ಕಡೆಯಿಂದ ಎಲ್ಲವನ್ನೂ ಹಾಳು ಮಾಡುತ್ತಾ ಹೋಗುತ್ತವೆ.

ಕಟ್ಟಿ ಹಾಕಿದ ಆ ಎರಡು ಕರುಗಳ ಬೆನ್ನು ಸವರುತ್ತಾ ಆತನ ತಾಯಿ ಹೇಳಿದಳು - "ಇವೆರಡೂ ನನ್ನನ್ನು ಬಹಳ ಸತಾಯಿಸ್ತವೆ. ಸಾಧ್ಯವಾದರೆ ಇವುಗಳನ್ನು ಹಿಡ್ಕೊಂಡು ಹೋಗು. ನಾನು ಎಲ್ಲಿಯ ತನಕ ಇವುಗಳನ್ನು ಕಾಯಲಿ. ಹಗ್ಗ ಬಿಚ್ಚಿ ಬಿಡೋದೆ ತಡ. ನೇರವಾಗಿ ಬತ್ತದ ಗದ್ದೆಗೆ ಹೋಗುತ್ತವೆ. ಇಲ್ಲದಿದ್ದರೆ ಕಾಡಿನ ಕಡೆ ನಾಗಾಲೋಟ. ಇಡೀ ದಿನ ಇವುಗಳ ಹಿಂದೆ ಓಡಾಡೋದೆ ನನ್ನ ಕೆಲಸವಾಗಿದೆ"

ಬಹಳ ಚುರುಕಾದ ಆ ಎರಡು ಕರುಗಳ ಕಡೆಗೆ ಗುಲಚ್ ಪ್ರೀತಿಯಿಂದ ನೋಡತೊಡಗಿದ. ಮುಂದಿನ ವರ್ಷ ಇವುಗಳನ್ನು ಬೇಸಾಯದ ಕೆಲಸಕಾರ್ಯಗಳಿಗೆ ಬಳಸಿಕೊಳ್ಳಬಹುದು. ಇವಕ್ಕೆ ಎರಡೂವರೆ ವರ್ಷ ಆಗಿದೆ. ಎರಡೂ ಬಹಳ ಕಟ್ಟುಮಸ್ತಾಗಿವೆ ಅಂದುಕೊಂಡ.

ಊದಾ ಬಣ್ಣದ ಕರುವಿನ ಕಪಾಲವನ್ನು ತುರುಚುತ್ತಾ ಆತನ ತಾಯಿ ಹೇಳಿದಳು - "ಇದೇ. ಇದು ನನ್ನನ್ನು ಬಹಳ ಸತಾಯಿಸ್ತದೆ. ಎಷ್ಟು ಕರೆದರೂ ಬರೋದಿಲ್ಲಾ."

ಅನಂತರ ಕೆಂಬಣ್ಣದ ಕರುವಿನ ತಲೆಯನ್ನು ಸವರುತ್ತಾ ಹೇಳಿದಳು - "ಇದು ಬಹಳ ಒಳ್ಳೆಯದು. ಕರೆದಾಗ ಬರುತ್ತೆ. ನನಗೆ ಅಚ್ಚುಮೆಚ್ಚಾಗಿದೆ."

ನಿತ್ಯವೂ ಮೈದಡವಿ ಪ್ರೀತಿಸುತ್ತಿದ್ದ ಕಾರಣ ಅವು ಮಕ್ಕಳಂತೆ ಒಗ್ಗಿ ಹೋಗಿದ್ದವು. ಗುಲಚ್‌ನ ತಾಯಿಗೆ ಕೊಂಚವೂ ಹೆದರುತ್ತಿರಲಿಲ್ಲ.

ಮಕ್ಕಳುಮರಿಯಿಲ್ಲದ ಆ ಮನೆಯಲ್ಲಿ ತನ್ನ ತಾಯಿಯ ಒಡನಾಡಿಗಳು ಆ ದನಕರುಗಳೇ ಎಂಬುದು ಗುಲಚ್‌ನಿಗೆ ಗೊತ್ತು. ಅವುಗಳನ್ನು ಪಾಹಿಗೆ ಹಿಡಿದುಕೊಂಡು ಹೋದರೆ ಆತನ ತಾಯಿ ಒಬ್ಬಂಟಿಗಳಾಗುತ್ತಾಳೆ. ತಾಯಿಗೆ ತೊಂದರೆಕೊಡಲು ಆತನಿಗೆ ಇಷ್ಟವಿಲ್ಲ.

ಆತನಲ್ಲಿ ಆಸ್ತಿ-ಹಣ ಸ್ವಲ್ಪವೂ ಇಲ್ಲ. ಎಲ್ಲಿಂದ ಬರಬೇಕು. ತಂದೆಯ ಸಂಪತ್ತಿನಲ್ಲಿ ಆತನಿಗೆ ಎಳ್ಳಷ್ಟು ಸಿಗಲಿಲ್ಲ. ಆತ ಕೇಳಲೂ ಇಲ್ಲ. ಕೊಟ್ಟರೆ ಆತ ತೆಗೆದುಕೊಳ್ಳುವುದಿಲ್ಲ ಎನ್ನುವಂತಿಲ್ಲ. "ಅಪ್ಪನ ಮಗನೇ ಆದರೆ ಎಂದಾದರೊಮ್ಮೆ ಪಾಲು ತೆಗೆದುಕೊಳ್ಳುತ್ತೇನೆ. ಎಲ್ಲಿಯ ತನಕ ಈ ರೀತಿ ವಂಚಿಸಲು ಸಾಧ್ಯ ನೋಡೇ ಬಿಡ್ತೀನಿ "- ಇದು ಗುಲಚ್‌ನ ಶಪಥ.

ದನಕರು, ಆಡು, ಕುರಿಯೇ ಆತನ ಸಂಪತ್ತು.

"ನೀನು ಇವೊತ್ತೇ ಹೋಗ್ತೀಯಾ?" - ಎಂದು ತಾಯಿ ಕೇಳಿದಳು.

"ಅಹುದು."

"ನಾಳೆ ಹೋದರೆ ಆಗೋದಿಲ್ವೇ?"

ಗುಲಚ್ ತಲೆಯೆತ್ತಿ ನೋಡಿದ.

"ಯಾಕೆ?"

"ನಿಮ್ಮ ತಂದೆಗೆ ವಿಪರೀತ ಜ್ವರ ಎಂದು ತಿಳಿಯಿತು " ಸ್ವಲ್ಪ ಅಂಜಿಕೆಯಿಂದಲೇ ಆತನ ತಾಯಿ ಹೇಳಿದಳು.

ಗುಲಬ್ ಕುಳಿತಿದ್ದವನು ತಟ್ಟನೆ ಎದ್ದು ನಿಂತ.

"ಜ್ವರ? ಸಾಯಲಿ ಬಿಡು! ನನ್ನ ಕೈಯಲ್ಲಿ ಏನು ತಾನೇ ಆಗುತ್ತೆ?"

"ಒಂದು ಸಾರಿ ಹೋಗಿ ನೋಡಿ ಬರಬಾರದೇ?"

"ನೀನೇ ಹೋಗು. ನೀನು ಇನ್ನೂ ಅವರಿವರನ್ನು ನೋಡಬೇಕಾಗಿದೆ. ಆ ಮನೆಗೆ ಮತ್ತೊಮ್ಮೆ ಕಾಲಿಡುತ್ತೇನೆಯೇ? ನಾನು ಮನುಷ್ಯ, ನಾಯಿ ಅಲ್ಲ."

ಆತನ ತಾಯಿ ತೆಪ್ಪಗಾದಳು. ತರುಣ ಗುಲಬ್‌ಗೆ ಆಕೆ ಹೆದರುತ್ತಾಳೆ. ಇಂದು ಆಕೆಗೆ ಅವನೇ ಆಶ್ರಯದಾತ.

ಆತನ ತಾಯಿ ಮರುಮಾತಾಡಲಿಲ್ಲ.

ಅಪ್ಪನಂಥ ಮಗ -ಆತನ ಹತ್ತಿರ ಒಂದೇ ಮಾತು.

ಮಧ್ಯಾಹ್ನದ ಊಟವಾದ ಮೇಲೆ ಗುಲಬ್ ದನಕರುಗಳನ್ನು ಮೇಯಿಸಲು ಅವುಗಳನ್ನು ಅಟ್ಟಿಕೊಂಡು ಪಶ್ಚಿಮ ದಿಕ್ಕಿನ ಕಾಡಿನ ಕಡೆ ಹೊರಟು ಹೋದ. ಸದಾ ಕಟ್ಟಿಹಾಕುತ್ತಿದ್ದುದರಿಂದ ಅವು ಬಡಕಲಾಗುತ್ತಿದ್ದುವು.

ಬಿಳಿಯ ಕಡಸು ಬಹುಶಃ ತೆನೆಯಾಗಿದೆ. ಮಾರ್ಗಶಿರ-ಪುಷ್ಯ ಮಾಸದಲ್ಲಿ ಕರು ಹಾಕಬಹುದು. ಸರಿ, ಹಾಲು ಮತ್ತು ಹೊಸಬತ್ತದ ಅನ್ನ - ಈ ಬಗ್ಗೆ ಯೋಚಿಸುತ್ತಾ ಗುಲಬ್‌ಗೆ ಬಹಳ ಸಂತೋಷವಾಯಿತು. ತನ್ನ ಸ್ವಂತ ಜಮೀನೇನೂ ಅವನಿಗೆ ಜಾಸ್ತಿಯಿಲ್ಲ. ಆದರೂ ಹಳ್ಳಿಗನಾಗಿ ಹೊಸ ಫಸಲಿನ ಸವಿಯನ್ನು ಸವಿಯದಿರಲು ಹೇಗೆ ಸಾಧ್ಯ?

ಹೊಸ ಫಸಲು, ಹೊಸ ಹಾಲು - ಮತ್ತು ಹೊಸ ಹುಡುಗಿ?

ಹುಲ್ಲಿಗೆ ಅಭಾವವಿಲ್ಲ. ಎಲ್ಲ ದನಕರುಗಳೂ ಸಂತೋಷವಾಗಿ ಮೇಯುತ್ತಿವೆ. ಅವುಗಳಿಗೆ ನಿತ್ಯವೂ ಹೊಟ್ಟೆತುಂಬ ಮೇವು ಸಿಕ್ಕಿದರೆ ಏತಕ್ಕೆ ಸತಾಯಿಸುತ್ತವೆ. ನಿತ್ಯ ಅರೆ ಹೊಟ್ಟೆಯಾದರೆ ಮನುಷ್ಯ ಸಹ ಮನಸ್ಸಿನ ಸಮತೋಲನ ಕಳೆದುಕೊಳ್ಳುತ್ತಾನೆ.

ಯಾವ ದನಕರುಗಳೂ ಬಗ್ಗಿಸದ ತಲೆ ಎತ್ತದೆ ಮೇಯುತ್ತಿದ್ದವು.

ಬಿಸಿಲು ಸಾಕಷ್ಟು ಪ್ರಖರವಾಗಿತ್ತು. ಮಳೆ ನಿಂತ ಅನಂತರದ ಬಿಸಿಲು.

ವಟವೃಕ್ಷದ ಬುಡದಲ್ಲಿ ಕುಳಿತುಕೊಂಡು ಗುಲಬ್ ಒಮ್ಮೆ ಆಕಾಶದ ಕಡೆ ನೋಡಿದ. ಅನೇಕ ಕೊಂಬೆಗಳಿಂದ ಕೂಡಿದ ವಟವೃಕ್ಷ. ಅದರ ದಟ್ಟವಾದ ಎಲೆಗಳು ಆಕಾಶ ಕಾಣದಂತೆ ಹರಡಿವೆ. ಅವುಗಳ ಮಧ್ಯದಿಂದ ಕೆಲವೆಡೆ ಬಿಸಿಲು ಬೀಳುತ್ತಿದೆ. ತಂಪಾದ ನೆರಳು. ಆ ಬಿಸಿಲು ಸಹ ಹಿತವಾಗಿತ್ತು.

ಈ ವಟವೃಕ್ಷವನ್ನು ಗುಲಬ್ ತನ್ನ ಬಾಲ್ಯದಿಂದಲೂ ನೋಡಿದ್ದಾನೆ. ಇದರ ನೆರಳಿನಲ್ಲಿ ಕುಳಿತು ತನ್ನ ಐದನೇ ವಯಸ್ಸಿನಿಂದಲೂ ದನಕರುಗಳನ್ನು ಮೇಯಿಸುತ್ತಿದ್ದಾನೆ. ಆದರೆ ವಟವೃಕ್ಷ ಮೊದಲಿನಂತೆಯೇ ಇದೆ. ಮೊದಲಿಗಿಂತ ಅದರ ಬುಡದ ಗಾತ್ರ ಸ್ವಲ್ಪ ದೊಡ್ಡದಾಗಿದೆ. ಅದರ ಕೊಂಬೆಗಳು ಮೊದಲಿನಂತೆಯೇ ಇವೆ.

ಕೆಂಪು ಬಣ್ಣ ಹೋಲುವ ಈ ವಟವೃಕ್ಷದ ಸುಂದರವಾದ ಚಿಗುರೆಲೆಗಳನ್ನು ಕಂಡರೆ ಆತನಿಗೆ ತುಂಬಾ ಸಂತೋಷ. ಚೂಪಾದ ಹಾಗೂ ಸೊಗಸಾದ ಚಿಗುರು ಕಂಗೊಳಿಸುತ್ತಿತ್ತು.

ಅಕ್ಕಪಕ್ಕದಲ್ಲೇ ಅದೇ ಜಾತಿಯ ಕೆಲವು ಮರಗಳಿದ್ದುವು. 'ನಾಹರ್' ಜಾತಿಯ ಗಿಡ ಸಹ ಇವೆ. ಅವು ಬಹಳ ಸುಂದರವಾಗಿವೆ ಮತ್ತು ಸೊಂಪಾಗಿವೆ.

ವಟವೃಕ್ಷದ ಒತ್ತಾದ ಎಲೆಗಳ ಮಧ್ಯದಿಂದ ಕಾಣುವ ಆಕಾಶದ ಅಲ್ಪ ಸ್ವಲ್ಪ ಭಾಗ ಆತನಿಗೆ ತುಂಬಾ ಪ್ರಿಯವಾಗಿತ್ತು. ವಟವೃಕ್ಷದ ದಪ್ಪನೆಯ ಬುಡವನ್ನು ಒರಗಿ ಅಂಗತ್ತಲಾಗಿ ಮಲಗಿಕೊಂಡು ಆಕಾಶದ ಕಡೆ ನೋಡುತ್ತಿದ್ದ. ಸಾಯಂಕಾಲವಾದರೂ ಬಿಸಿಲಿನ ತೀಕ್ಷ್ಣತೆ ಇನ್ನೂ ಕಡಮೆಯಾಗಿರಲಿಲ್ಲ.

ಆತ ಅಲ್ಲಿ ಒಬ್ಬನೇ ಇದ್ದರೂ ಆತನಿಗೆ ಒಬ್ಬಂಟಿಗನೆಂದು ಅನ್ನಿಸಲಿಲ್ಲ. ತನ್ನಷ್ಟಕ್ಕೆ ತಾನೇ ಏನೋ ಹೇಳಿಕೊಂಡ. ಈ ಮಾತುಗಳಿಗೆ ನಿರ್ದಿಷ್ಟ ಅರ್ಥವಿಲ್ಲ.

ಆತನ ದನಕರುಗಳು ಬಹಳ ಖುಷಿಯಿಂದ ಮೇಯುತ್ತಿದ್ದವು.

ಕಾಡಿನೊಳಗೆ ಯಾವುದೋ ಹಕ್ಕಿ ದೀರ್ಘಸ್ವರದಿಂದ ಕೂಗುತ್ತಿತ್ತು. ಆ ಧ್ವನಿ ಆತನಿಗೆ ಚಿರಪರಿಚಿತ. ಗುಲಬ್‌ಗೂ ಹಕ್ಕಿಯನ್ನು ಕರೆಯಲು ಮನಸ್ಸಾಯಿತು. ಆ ಹಕ್ಕಿಯನ್ನು ಪತ್ತೆ ಹಚ್ಚಲು ಒಂದು ಬಾರಿ ಸುಮ್ಮನೆ ಕಣ್ಣು ಹಾಯಿಸಿದ. ಅದು ಎಲ್ಲೋ ದೂರದಲ್ಲಿತ್ತು. ಕಣ್ಣಿಗೆ ಕಾಣಿಸಲಿಲ್ಲ.

ಅಕಸ್ಮಾತ್ತಾಗಿ ಆತನ ದೃಷ್ಟಿ ನಾಹರ್ ಮರದ ಕೊಂಬೆಯ ಮೇಲೆ ಬಿತ್ತು.

ಅದು ಜೇನುಗೂಡಲ್ಲವೇ?

ಅಲ್ಲದೆ ಮತ್ತೇನು?

ಮನಸ್ಸಿಗೆ ಬಹಳ ಸಂತೋಷವಾಯಿತು.

ಬಹಳ ಎತ್ತರದಲ್ಲಿ 'ನಾಹರ್' ಮರದ ಕೊಂಬೆಯ ಮೇಲೆ ಭಾರಿ ಜೇನುಗೂಡಿದೆ. ಅದು ಸುಮಾರು ಎರಡು ಮೊಳ ಉದ್ದವಿದೆ. ನೇತಾಡುತ್ತಿದೆ.

ಬಹುಶಃ ಯಾರೂ ಅದನ್ನು ನೋಡಿಲ್ಲ. ನೋಡಿದ್ದರೆ ಅದು ಇಷ್ಟು ದಿನಗಳ ತನಕ ಇರುತ್ತಿರಲಿಲ್ಲ. ಭಾರಿ ಜೇನುಗೂಡು. ಅದನ್ನು ಸರಿಯಾಗಿ ಕಿತ್ತರೆ ಸುಮಾರು ಆರು ಅಥವಾ ಎಂಟು ಸೇರು ಜೇನುತುಪ್ಪ ಸಿಗಬಹುದು.

ಹುಣ್ಣಿಮೆ ಬರಲು ಇನ್ನೆಷ್ಟು ದಿನಬೇಕು? ನಿನ್ನೆ ರಾತ್ರಿ ಬಹಳ ಕತ್ತಲಾಗಿತ್ತು.

ಆತ ಬಹಳ ಹೊತ್ತಿನವರೆಗೂ ಒಂದೇ ಸಮನೆ ಜೇನುಗೂಡಿನ ಕಡೆ ನೋಡುತ್ತಿದ್ದ.

ಇದನ್ನು ಒಬ್ಬನೇ ಕೀಳಲು ಸಾಧ್ಯವಿಲ್ಲ. ಮರ ಹತ್ತುವುದರಲ್ಲಿ ಜೇನುಗೂಡು ಕೀಳುವುದರಲ್ಲಿ ನೇಪಾಲಿ ಮೊಹಲ್ಲಾದ ಭೀಮ ನಿಜಕ್ಕೂ ಗಟ್ಟಿಗ. ಅವನಿಗೆ ಯಾವ ಭಯವೂ ಇಲ್ಲ. ಎಷ್ಟೋ ಎತ್ತರವಾದ ಮರಗಳನ್ನು ಹತ್ತಿ ಕೊಂಬೆಗಳನ್ನು ಕಡಿಯುತ್ತಾನೆ. ಭೀಮನನ್ನೇ ಜೊತೆಯಲ್ಲಿ ಕರೆತರಬೇಕಾಗುತ್ತೆಂದು ಯೋಚಿಸಿದ.

ಅವರಿಬ್ಬರಿಂದಲೇ ಕೆಲಸ ಆಗುತ್ತೆ. ಗುಲಬ್ ಕೆಳಗಡೆ ಇರುತ್ತಾನೆ. ಭೀಮ ಮರದ ಮೇಲೆ ಹತ್ತಿ ಜೇನುಗೂಡು ಕೀಳುತ್ತಾನೆ. ಈ ಮಧ್ಯೆ ಬೇರೆಯವರಿಗೆ ಈ ವಿಷಯ ಗೊತ್ತಾಗದೆ ಹೋದರೆ ನಿಜಕ್ಕೂ ಅದೃಷ್ಟ.

ಈ ದಿನ ಸಾಯಂಕಾಲವೇ ಭೀಮನನ್ನು ಭೇಟಿ ಮಾಡಿ ಬಂದೋಬಸ್ತು ಮಾಡಬೇಕು. ಅವನು ಬಂಗಿ ಸೇದೋ ಆಸಾಮಿ. ಎಲ್ಲಿದ್ದಾನೋ? ಏನು ಮಾಡುತ್ತಿದ್ದಾನೋ? ಯಾರಿಗೆ ಗೊತ್ತು?

ಗುಲಬ್ ದನಕರುಗಳನ್ನು ಒಂದೆಡೆ ಕೂಡಿಹಾಕಿದ. ಸೂರ್ಯಾಸ್ತದ ಸಮಯ. ಬಿಸಿಲು ಕಡಿಮೆ. ಹಿತಕರವಾಗಿದೆ. ಈ ದಿನ ಸಾಯಂಕಾಲವೇ ಭೀಮನನ್ನು ಭೇಟಿ ಮಾಡಿ ಬಂದೋಬಸ್ತು ಮಾಡಬೇಕಾಗಿದೆ.

ಗುಲಬ್‌ನ ದೃಷ್ಟಿ ಆಕಸ್ಮಾತ್ತಾಗಿ ಪಶ್ಚಿಮ ದಿಕ್ಕಿನ ಕಡೆಗೆ ಬಿತ್ತು. ಆ ದಿಕ್ಕಿನ ಕಾಡಿನ ಒಂದು ಭಾಗದಲ್ಲಿ ಬಯಲು ಪ್ರದೇಶವಿದ್ದುದರಿಂದ ಸೂರ್ಯಾಸ್ತದ ಹೊಂಬಣ್ಣ ಗೋಚರಿಸಿತು. ಯಾವುದೋ ಅದೃಶ್ಯ ಹಸ್ತ, ಚಿನ್ನ ಕರುಗುತ್ತಿದ್ದಾಗಲೇ ಅದರೊಡನೆ ಗುಲಾಲನ್ನು ಬೆರೆಸಿ ಅದನ್ನೇ ಎಲ್ಲ ಮರಗಿಡಗಳ ಮೇಲೆ ಸಿಂಪಡಿಸಿದ ಹಾಗೆ ಭಾಸವಾಗುತ್ತಿತ್ತು. ಮಳೆಯಿಂದ ತೋಯ್ದು ಹಸಿರು ಎಲೆಗಳು ಹೊಳಪಾಗಿ ಕೆಂಪಗೆ ಕಾಣುತ್ತಿದ್ದವು. ಆಕಾಶದಲ್ಲಿ ಸಂಚರಿಸುತ್ತಿದ್ದ ಸಹಸ್ರಾರು ಮೋಡಗಳು ಬಣ್ಣಬಣ್ಣದಿಂದ ಕೂಡಿ ಕಂಗೊಳಿಸುತ್ತಿದ್ದವು.

ದನಕರುಗಳ ಕಣ್ಣುಗಳು ಸಹ ಹೊಳಪಾಗಿ ಕಾಣುತ್ತಿದ್ದವು.

ಗುಲಬ್ ಸ್ತಬ್ಧನಾದ. ಆನಂದಪರವಶನಾಗಿ ಎಲ್ಲವನ್ನೂ ಮರೆತ. ಕಾಡಿನಲ್ಲಿ ಎಲ್ಲೋ ಕಾಡು ಹೂ ಅರಳುತ್ತಿತ್ತು. ದೂರದಿಂದ ಬಂದ ಸುವಾಸನೆ ಆತನ ಮೂಗಿಗೆ ತಟ್ಟಿತು. ಆದರೆ ಏವೆಯಿಕ್ಕದೆ ಆತ ಒಂದೇ ಸಮನೆ ಆಕಾಶದ ಕಡೆ ನೋಡುತ್ತಾ ನಿಂತ. ಸಾಯಂಕಾಲದ ವರ್ಣಪೂರ ಆತನ ಶೈಶವ, ಯೌವನ ಹಾಗೂ ಅತೀತ ಮತ್ತು ಭವಿಷ್ಯವನ್ನು ಮೇಳವಿಸಿತು. ಆತ ಆನಂದತುದಿಲನಾದ. ಸೌಂದರ್ಯದ ಬಗ್ಗೆ ಆತನಿಗಿದ್ದ ಒಲವು ಆತನ ಎಲ್ಲ ದಾರಿದ್ರ್ಯವನ್ನೂ ಹೋಗಲಾಡಿಸಿತು.

ಹಳೆಯ ಹುಲ್ಲು ಕಡ್ಡಿ ಸಹ ಚೈತನ್ಯಮಯಿ; ಆಕಾಶವೂ ಚೈತನ್ಯಮಯಿ. ಗುಲಬ್ ತನ್ನನ್ನು ಅದರ ಒಂದು ಅಭಿನ್ನ ಅಂಗವೆಂದು ಭಾವಿಸಿದ. ಇದೇ ಆಕಾಶ ಹಾಗೂ ಇದೇ ಹುಲ್ಲುಕಡ್ಡಿಯ ಸಂಪರ್ಕದಲ್ಲಿ ಬೆಳೆದಿದ್ದಾನೆ. ಆತನ ರಕ್ತದಲ್ಲಿ ಈ ಪ್ರಕೃತಿಯ ಬಗ್ಗೆ ಗಾಢ ವಿಶ್ವಾಸದ ಸ್ಪಂದನವಿದೆ.

ಎಲ್ಲವೂ ಆತ್ಮೀಯ. ಎಲ್ಲವೂ ಚಿರಪರಿಚಿತ.

ಗುಲಬ್ ಆನಂದಭರಿತನಾಗಿ ದನಕರುಗಳನ್ನು ಅಟ್ಟಿಕೊಂಡು ಮನೆಕಡೆ ಹೊರಟ. ವಸ್ತಿ ಭೂಮಿಯ ಮೇಲೆ ಬೇಗ ಬೇಗ  ನಡೆಯತೊಡಗಿದ.

ಕೈಯಲ್ಲಿದ್ದ ಚಾವಟಿಯಿಂದ ರಸ್ತೆಯ ಇಕ್ಕೆಲದ ಗಿಡಗಳ ಮೇಲೆ ಬಡಿಯುತ್ತಾ ಹೊರಟ. ಆತನ ಮನಸ್ಸಿನಲ್ಲಿ ಒಂದು ರೀತಿ ಹುಮ್ಮಸ್ಸು ಮೂಡಿತು. ಹೊಂಬಣ್ಣದ ಆಕಾಶ ಅವನ ಹೃದಯವನ್ನು ಸೂರೆಗೊಂಡಿತ್ತು.

ಆ ಕಡೆಯಿಂದ ಕಾರ್ತಿಕ್ ಬಂದ.

ಪರಸ್ಪರ ಭೇಟಿಯಾಯಿತು.

"ಪಾಹಿಯಿಂದ ಯಾವಾಗ ಬಂದೆ ಗುಲಬ್?"

ಆದರೆ ಕಾರ್ತಿಕನ ಪ್ರಶ್ನೆಗೆ ಉತ್ತರ ನೀಡುವ ಅಗತ್ಯವಿರಲಿಲ್ಲ.

"ಹೇ, ಕಾರ್ತಿಕ್"

"ಏನು?"

"ನೀನು ಮರ ಹತ್ತಬಲ್ಲೆಯಾ? ಬಹಳ ಎತ್ತರವಾದ ಮರ."

"ನನ್ನ ಕೈಯಲ್ಲಿ ಹತ್ತಲಾಗುವುದಿಲ್ಲ."

"ಹಾಗಾದರೆ ನೀನು ಹೋಗು."

ಕಾರ್ತಿಕ್ ಹೊರಟು ಹೋದ.

ಸ್ವಲ್ಪ ದೂರ ಹೋದ ಮೇಲೆ ಗುಲಬ್‌ಗೆ ವಜೀರ್ ಸಿಕ್ಕಿದ. ಆತ ಆ ಕಡೆಯಿಂದಲೇ ಬಂದಿದ್ದ. ಹೆಗಲಮೇಲೆ ನೇಗಿಲು ಮಾಡಲು ತಂದಿದ್ದ ಮರದ ತುಂಡಿತ್ತು.

"ನೇಗಿಲು?"

"ಅಹುದು, ಅದಕ್ಕಾಗಿಯೇ ಭದ್ರೇಶ್ವರ ತನ್ನ ಮನೆ ಬಳಿ ಇದ್ದ ಮರವನ್ನು ಕಡಿಸಿದ. ಈ ತುಂಡಿಗೆ ಎರಡಾಣೆ."

ಗುಲಬ್ ಒಮ್ಮೆ ಆ ನೇಗಿಲು ತುಂಡನ್ನು ನಿಗವಿಟ್ಟು ನೋಡಿದ. ಅನಂತರ ಹೇಳಿದ. "ಲೋ. ಹುಣ್ಣಿಮೆ ಯಾವಾಗ?"

"ಹುಣ್ಣಿಮೆ! ಬಹುಶಃ ಇನ್ನು ಆರೇಳು ದಿನಗಳು ಕಳೆಯಬೇಕು. ಇತ್ತೀಚಿನ ದಿನಗಳಲ್ಲಿ ವಿಪರೀತ ಮಳೆ ಬೀಳುತ್ತಿರುವುದರಿಂದ ಬೆಳದಿಂಗಳು ಇರೋದೆ ಗೊತ್ತಾಗುವುದಿಲ್ಲ."

"ಸರಿ, ಹೋಗು."

ಸ್ವಲ್ಪ ದೂರ ಹೋದ ಮೇಲೆ ವಜೀರ್ ಗುಲಬ್‌ನ ಕಡೆ ತಿರುಗಿ ನೋಡಿ ಕೂಗಿ ಹೇಳಿದ. - "ನೀನು ಬೇಕಾದಷ್ಟು ಜಮೀನನ್ನು ಆಬಾದು ಮಾಡಿದ್ದೀಯೆ ಎಂಬ ಸುದ್ದಿ ಕಿವಿಗೆ ಬಿತ್ತು."

"ಯಾರು ಹೇಳಿದರು? ಮೂರು ನಾಲ್ಕು ಎಕರೆ ಆಬಾದು ಮಾಡುತ್ತಿದ್ದೇನೆ."

ವಜೀರ್ ಹೊರಟು ಹೋದ.

ಅನಂತರ ಅವನಿಗೆ ಚಂದ್ರ ಸಿಕ್ಕಿದ.

ಹೊಸ ಡಾಲಿಮ್, ಹಳೆಯ ಡಾಲಿಮ್ ಮತ್ತು ಸಿಪರಿಯಾ ಹಳ್ಳಿಯ ಎಲ್ಲ ಜನರಿಗೂ ಚಂದ್ರ ಪರಿಚಿತ. ಅವನ ಅಜ್ಜ ಆ ಹಳ್ಳಿಯ ಗೌಡ. ಆತನ ಹೆಸರು ಜಿಲುರಾಮ್. ಬಹಳ ಮಂದಿ ಚಂದ್ರನನ್ನು ಗೌಡನ ಮೊಮ್ಮಗ ಎಂದೇ ಕರೆಯುತ್ತಿದ್ದರು.

ಚಂದ್ರನ ತಂದೆ ಸ್ವಲ್ಪ ದುಂದುಗಾರ. ಗೌಡನ ಆಸ್ತಿ-ಪಾಸ್ತಿಯನ್ನು ಹೆಚ್ಚು ದಿನಗಳವರೆಗೆ ರಕ್ಷಣೆ ಮಾಡಲಿಲ್ಲ. ದಿನೇದಿನೇ ಆತನ ಸ್ಥಿತಿ ಹದಗೆಡುತ್ತಾ ಬಂತು. ಆದರೂ ಆತ ಪ್ರಾಥಮಿಕ ಶಾಲೆಯ ಓದು ಪೂರೈಸಿದ ಮೇಲೆ ಚಂದ್ರನನ್ನು ನಗರದಲ್ಲಿ ತನ್ನ ತಂದೆಗೆ ಪರಿಚಿತನಾಗಿದ್ದ ಒಬ್ಬ ವಕೀಲರ ಮನೆಯಲ್ಲಿರಿಸಿ ಓದಿಸತೊಡಗಿದ. ಮನೆಯ ಕೆಲಸಕಾರ್ಯಗಳನ್ನು ಮಾಡಿಕೊಂಡು ಚಂದ್ರ ಮಾಧ್ಯಮಿಕ ಶಾಲೆಯಲ್ಲಿ ಓದತೊಡಗಿದ. ವಿದ್ಯಾಭ್ಯಾಸದಲ್ಲಿ ಚಂದ್ರ ಹಿಂದುಳಿದಿರಲಿಲ್ಲ. ಆತ ಆರನೆಯ ತರಗತಿಗೆ ಕಾಲಿಟ್ಟ ಕೂಡಲೇ ಕರುಳು ಬೇನೆಯಿಂದ ಆತನ ತಂದೆ ಅಕಾಲ ಮೃತ್ಯುವಿಗೀಡಾದರು.

ಚಂದ್ರನಿಗೆ ವ್ಯಾಸಂಗ ಮುಂದುವರಿಸಲಾಗಲಿಲ್ಲ. ಹಳ್ಳಿಗೆ ಹಿಂದಿರುಗಿ ಬೇಸಾಯ ಮಾಡತೊಡಗಿದ.

ಆತನ ವ್ಯಾಸಂಗ ಅಷ್ಟಕ್ಕೇ ನಿಂತು ಹೋದರೂ 'ಡಾಲಮ್' ಹಳ್ಳಿಯ ಜನತೆಯ ದೃಷ್ಟಿಯಲ್ಲಿ ಆತ ವಿದ್ಯಾವಂತ, ಗಣ್ಯವ್ಯಕ್ತಿ. ಹಳ್ಳಿಯ ಜನರು ಅವನಿಂದ ಸಲಹೆ ಪಡೆಯುತ್ತಾರೆ. ವಿಚಾರ ವಿನಿಮಯ ಮಾಡುತ್ತಾರೆ. ಆತನ ಉಪದೇಶ ಕೇಳಬಯಸುತ್ತಾರೆ. ಆತ ಸ್ವತಃ ಸಾಹಸಿ ಮತ್ತು ಉದಾರಿ. ಯಾರಿಗೂ ಹೆದರುತ್ತಿರಲಿಲ್ಲ. ತನ್ನವರು ಮತ್ತು ಪರರು ಎಂಬ ಭೇದಭಾವ ಆತನಿಗಿಲ್ಲ. ಆ ಹಳ್ಳಿಯನ್ನು ತನ್ನ ಮನೆಯಂತೆ ಭಾವಿಸಿದ್ದಾನೆ.

ಆತ ಯಾರ ಪಕ್ಷಪಾತ ವಹಿಸುವ ವ್ಯಕ್ತಿ ಅಲ್ಲ. ಆತನಿಗೆ ಯಾವ ಪಕ್ಷ ಸೂಕ್ತ ಮತ್ತು ನ್ಯಾಯಸಂಗತ ಅನ್ನಿಸುತ್ತದೋ ಆ ಪಕ್ಷದ ಪರವಾಗಿ ತನ್ನ ಅಭಿಪ್ರಾಯ ನೀಡುತ್ತಾನೆ. ಆದ್ದರಿಂದ ಹಳ್ಳಿಯ ಬಹಳ ಮಂದಿ ಆತನಿಗೆ ಹೆದರುತ್ತಾರೆ. ಆದರೆ ಅವನಿಗೆ ಯಾರೂ ಶತ್ರುಗಳಿಲ್ಲ. ಆತ ಇಲ್ಲಿಯವರೆವಿಗೂ ಯಾರಿಗೂ ಅಪಕಾರ ಮಾಡಿಲ್ಲ.

ಈಗ ಚಂದ್ರ ಯುವಕ. ಆತ ಕಟ್ಟುಮಸ್ತಾಗಿದ್ದಾನೆ. ಆರೋಗ್ಯವಂತ. ಸ್ವತಃ ಬೇಸಾಯ ಮಾಡುತ್ತಾನೆ. ಆತನ ತಾಯಿ ಹಾಗೂ ತಂಗಿ ನಾಟಿ, ಕಟಾವು ಮಾಡುತ್ತಾರೆ. ಆತ ಉಳುಮೆ ಮತ್ತು ಬಂಡಿ ಹೊಡೆಯುವ ಕೆಲಸ ಸಹ ಮಾಡುತ್ತಾನೆ. ಹಳ್ಳಿಯ ಜನರು ಉಳುಮೆ ಮತ್ತು ಬಂಡಿ ಹೊಡೆಯುವ ಕೆಲಸಕ್ಕನುಸಾರವಾಗಿ ಅವನಿಗೆ ನೆರವು ನೀಡುತ್ತಾರೆ. ಆತ ಸಹ ತನ್ನ ಶಕ್ತಿ-ಸಾಮರ್ಥ್ಯಗಳಿಗನುಗುಣವಾಗಿ ಹಳ್ಳಿಯವರಿಗೆ ಏನಾದರೂ ಸಹಾಯ ಮಾಡುತ್ತಾನೆ. ಸಲಹೆ ಹಾಗೂ ತನ್ನ ಅಭಿಪ್ರಾಯ ನೀಡುತ್ತಾನೆ. ತನ್ನ ಕೈಯಿಂದ ಹಣ ಸಹ ಖರ್ಚುಮಾಡುತ್ತಾನೆ. ಹಳ್ಳಿಯಲ್ಲಿ ಆತನ ಪ್ರಭಾವ ಕಡಮೆಯಾಗಲು ಹೇಗೆ ಸಾಧ್ಯ? ಹಳ್ಳಿಯವರೆಲ್ಲರೂ ಆತನಿಗೆ ಅಂಜುತ್ತಾರೆ. ಆತ ಆಗಿಂದಾಗ್ಗೆ ಪಟ್ಟಣಕ್ಕೆ ಹೋಗುತ್ತಿರುತ್ತಾನೆ. ಕೆಲವು ಸಾರಿ ಸಾಹೇಬರ ಎದುರಿನಲ್ಲೂ ಮಾತನಾಡುತ್ತಾನೆ. ಆತ ಆ ಹಳ್ಳಿಗೆ ಆಸರೆ. ಆತ ಎಂದೂ ಜಗಳವಾಡುವುದಿಲ್ಲವೆನ್ನುವಂತಿಲ್ಲ. ವಾಚಾಳಿ. ಆತ ಇಂಗ್ಲಿಷ್ ಹೆಚ್ಚಿಗೆ ಓದದಿದ್ದರೂ ಇಂಗ್ಲಿಷ್ ಮಾತಾಡುತ್ತಾನೆ. ಇಂಗ್ಲಿಷ್ ಬಾರದ ಆ ಹಳ್ಳಿಯ ಮಕ್ಕಳುಮರಿ ಬೆರಗಾಗುತ್ತಾರೆ. ಚಪ್ಪಲಿ ಹಾಕಿಕೊಳ್ಳದಿದ್ದರೂ ಪ್ಯಾಂಟ್ ಧರಿಸುತ್ತಾನೆ. ಅಗ್ಗದ ಬೆಲೆಯ ಒರಟು ಬಟ್ಟೆ ಹಾಗೂ ಬಣ್ಣಬಣ್ಣದ, ಚಿತ್ರವಿಚಿತ್ರ ಹವಾಈ ಷರ್ಟ್ ಧರಿಸುತ್ತಾನೆ. ತನ್ನ ಸಂಗಡಿಗರನ್ನು ಭೇಟಿ ಮಾಡಿದಾಗ ಇಂಗ್ಲಿಷ್ ಮತ್ತು ಅಸ್ಸಾಮಿಯಾ ಶಬ್ದಗಳನ್ನು ಅರ್ಧಂಬರ್ಧ ಬೆರಸಿ ಮಾತಿನ ಮೋಡಿಯಲ್ಲಿ ತನ್ನ ಕಲಿತನ ತೋರಿಸುತ್ತಾನೆ. ಆತನ ವಯಸ್ಸು ಸುಮಾರು ಇಪ್ಪತ್ತು ವರ್ಷವಿರಬಹುದು. ಆ ಹಳ್ಳಿಯ ಬಹಳ ಮಂದಿ ಹುಡುಗಿಯರನ್ನು ಗದರಿಸಿ ತಾನೂ ಬೈಗುಳ ತಿಂದಿದ್ದಾನೆ. ಇನ್ನೂ ಆತನಿಗೆ ಮದುವೆಯಾಗಿಲ್ಲ.

ಚಂದ್ರ ಬಹಳ ಚಾಕಚಕ್ಯತೆಯಿಂದ ಹಣ ಸಂಪಾದನೆ ಮಾಡುತ್ತಾನೆ. ಹಣದ ಅಗತ್ಯವಿದ್ದವರಿಗೆ ಮೂರು ನಾಲ್ಕು ರೂಪಾಯಿ ಸಾಲ ಕೊಡಬಲ್ಲ ಸಾಮರ್ಥ್ಯ ಸಹ ಆತನಿಗಿದೆ.

ಯಾವ ಕೋರಿಕೆಯೂ ಇಲ್ಲದೆ ಉಪದೇಶ ನೀಡುವುದು ಆತನ ಉದಾರತೆಯಲ್ಲಿರುವ ವಿಶೇಷ ಗುಣ. ಆತ ಎಲ್ಲರಿಗೂ ಎಲ್ಲ ರೀತಿಯ ಉತ್ತಮ ಉಪದೇಶ ನೀಡಬಲ್ಲ, ನೀಡುತ್ತಾನೆ. ಹಣವಿಲ್ಲದಿದ್ದರೂ ಆತನದು ಉದಾರ ಮನಸ್ಸು.

ಆತನ ಉಪದೇಶದಿಂದ ಕೆಲವರಿಗೆ ಲಾಭ ಆಗುತ್ತೆ. ಕೆಲವರಿಗಿಲ್ಲ.

ಇದಲ್ಲದೆ ಆತನಲ್ಲಿ ಸದಾ ಮೂರು ವಸ್ತುಗಳು ಇರುತ್ತವೆ. ಬೀಡಿ, ಆರಾಣೆಯ ಒಂದು ಲೇಖನಿ ಮತ್ತು ಒಂದು ಬಾಚಣಿಗೆ. ಅಸ್ಸಾಮಿಯಾ ಮತ್ತು ಇಂಗ್ಲಿಷಿನಲ್ಲಿ ಬಹಳ ಚೆನ್ನಾಗಿ ರುಜು ಮಾಡುತ್ತಾನೆ.

ಮನೆ ಕಡೆ ಹೋಗುತ್ತಿದ್ದ ದನಕರು ತಮ್ಮ ಪಾಡಿಗೆ ತಾವು ರಸ್ತೆಯಲ್ಲಿ ಹೋಗುತ್ತಿದ್ದವು. ಚಂದ್ರ ಸಿಕ್ಕಿದ ಕೂಡಲೇ ಗುಲಬ್ ನಿಂತ.

"ಚಂದ್ರ, ಎಲ್ಲಿಗೆ ಹೊರಟೆ?"

"ಸೋಮಸ್ ಬರಪಾಣಿಯ ಮನೆಯಿಂದ ಬರುತ್ತಿದ್ದೇನೆ."

"ಸಾಯಂಕಾಲವಾಗುತ್ತಿದೆ. ಒಂದು ಬೀಡಿಯಿದ್ದರೆ ಕೊಡು."

"ಹೊವಟ್ (ವ್ಹಾಟ್)! ಅದೆಷ್ಟು ಸೇದುತ್ತೀಯೋ? ಬೆಂಕಿಕಡ್ಡಿ ಇದೆಯೇ?

"ನೀನು ಬೀಡಿ ಕೊಟ್ಟರೆ ಆ ಮನೆಗೆ ಹೋಗಿ ಹೊತ್ತಿಸಿಕೊಂಡು ಬರುತ್ತೇನೆ."

ಚಂದ್ರ ಗುಲಬ್‌ನಿಗೆ ಒಂದು ಬೀಡಿ ಕೊಟ್ಟ.

"ಎಲ್ಲಿಗೆ ಹೋಗಿದ್ದೆ?"

"ದನಕರು ಮೇಯಿಸಲು ಹೋಗಿದ್ದೆ. ಬೀಡಿ ಹೊತ್ತಿಸಿಕೊಂಡು ಬರ್‍ತೀನಿ. ನಿಂತಿರು."

ಗುಲಬ್ ಸಮೀಪದ ಮನೆಗೆ ಹೋಗಿ ಬೀಡಿ ಹೊತ್ತಿಸಿಕೊಂಡು ಬಂದ.

ಈ ಮಧ್ಯೆ ಜೇಬಿನಿಂದ ಬಾಚಣಿಗೆ ತೆಗೆದು ಚಂದ್ರ ತಲೆ ಬಾಚಿಕೊಳ್ಳತೊಡಗಿದ.

ಆತ ಸಹ ಗುಲಬ್‌ನ ಬೀಡಿಯಿಂದ ತನ್ನ ಬೀಡಿ ಹೊತ್ತಿಸಿಕೊಂಡ.

"ನಿನಗೆ ನ್ಯೂಜ್ (ಸಮಾಚಾರ) ತಿಳಿಯಿತೋ ಇಲ್ಲವೋ?"

ಗುಲಬ್ ಚಂದ್ರನ ಕಡೆ ತಲೆಯೆತ್ತಿ ನೋಡಿದ.

"ಏನು ಸಮಾಚಾರ?"

"ಚೇನಿಮಾಣಿ ಮದುವೆ ಸುದ್ದಿ ತಾನೆ? ಸಿಪರಿಯಾ ಹಳ್ಳಿಯ ಒಬ್ಬ ಕ್ಯಾಂಡಿಡೇಟ್ (ಗಂಡು) ಸಿಕ್ಕಿದ್ದಾನೆ. ಆ ಬಡ್ಡಿಮಗನ ಧೈರ್ಯ ನೋಡಿದೆಯಾ!"

ಚಂದ್ರನ ಮಾತು ಸರಿಯಾಗಿ ಅರ್ಥವಾಗದಿದ್ದುದರಿಂದ ಗುಲಬ್ ಕೇಳಿದ- "ನಿನಗೆ ಈ ಸುದ್ದಿ ಎಲ್ಲಿಂದ ತಿಳಿಯಿತು?"

"ಐ ನೋ ಎವೆರಿಥಿಂಗ್. ಏನು ಅಂತ ತಿಳಿದಿದ್ದೀಯೆ? ನೀನು ಹೇಳಿದ್ದೇ ಆದರೆ ಅವನಿಗೆ ನಾನು ಸರಿ ಮಾಡಬಲ್ಲೆ. ಒಂದು ಸಾರಿ ಅವಳನ್ನು ಕರೆದುಕೊಂಡು ಬಂದಿದ್ದರಿಂದ ಏನಾಗ ಬೇಕಾಗಿತ್ತೊ ಅದಾಯಿತು."

"ನೀನು ಒಂದು ಕತ್ತೆ. ನಾನಾಗಿದ್ದರೆ ಅವಳನ್ನು ಬಿಡೋದು ಅಂದರೆ ಏನು? ಹೊವಟ್ (ವ್ಹಾಟ್) ಎವರ್ ರಿಜಲ್ಟ್, ನಾನು ಎಲ್ಲರಿಗೂ ಸರಿಮಾಡ್ತಿದ್ದೆ. ನಿಮ್ಮಪ್ಪ ಸಹ ಬಹಳ ನೀಚ

ತನ್ನ ತಂದೆಯ ಬಗ್ಗೆ ಚಂದ್ರನ ಟೀಕೆ ಗುಲಬ್‌ನಿಗೆ ಸರಿಬೀಳಲಿಲ್ಲ. ಆತ ಸುಮ್ಮನಾದ.

"ನೀನು ಇನ್ನೊಂದು ಮ್ಯಾರೇಜ್ ಮಾಡಿಕೊಳ್ಳುವುದಿಲ್ಲವೇ?" - ಚಂದ್ರ ಕೇಳಿದ.

"ಈಗ ಹೇಗೆ ಸಾಧ್ಯ? ಮನೆಮಠ, ಆಸ್ತಿಪಾಸ್ತಿ ಏನೂ ಇಲ್ಲ."

"ಮನೆಮಠಕ್ಕೆ ಹೊಡಿ ಗೋಲಿ. ಬ್ಯೂಟಿಫುಲ್ ಹುಡುಗಿಯೊಬ್ಬಳನ್ನು ಹುಡುಕು. ನನ್ನ ಮುಂದೆ ಪಾಯಿಂಟ್-ಔಟ್ ಮಾಡು. ಮುಂದಕ್ಕೆ ನಾನು ಎಲ್ಲಾ ನೋಡಿಕೊಳ್ತೀನಿ. ಯು ಸೀ."

ಅಕ್ಕಪಕ್ಕ ನೋಡಿ ಗುಲಬ್ ಹೇಳಿದ - "ತರಾ ಬಗ್ಗೆ ನಿನ್ನ ಅಭಿಪ್ರಾಯ ಏನು?"

"ತರಾ? ಯಾರಾವಳು? ಸೂದರತ್ತೆ ಕಪಾಹಿಯ ಹುಡುಗಿ?"

"ಬ್ಯೂಟಿಫುಲ್. ಇಲ್ಲಿತನಕ ಯಾಕೆ ಈ ವಿಷಯ ನೀನು ಎತ್ತಲಿಲ್ಲ? ತರಾ ಚಿಕ್ಕಮ್ಮನೇ ಈ ವಯಸ್ಸಿನಲ್ಲೂ ಬ್ಯೂಟಿಫುಲ್ ಆಗಿದ್ದಾಳೆ. ಸುತರಾಂ ಯಂಗ್ ಗರ್ಲ್‌ನಂತೆ ಇದ್ದಾಳೆ."

ವಿನಮ್ರ ಸ್ವರದಲ್ಲಿ ಗುಲಬ್ ಹೇಳಿದ - "ಚಂದ್ರ, ಈ ಮಾತನ್ನು ಯಾರಿಗೂ ಹೇಳಬೇಡ. ನಿನ್ನೊಡನೆ ಮಾತ್ರ ಹೇಳಿದ್ದೇನೆ. ನಾನು ಮನಸ್ಸಿನಲ್ಲೇ ಯೋಚಿಸುತ್ತಿದ್ದೇನೆ. ಮೊದಲೇ ಸ್ವಲ್ಪ ಬಂದೋಬಸ್ತು ಮಾಡದಿದ್ದರೆ......."

"ಗೋಲಿ ಹೊಡಿ. ಎವೆರಿಥಿಂಗ್ ಆಗಲು ಸಾಧ್ಯ. ಐ ಹ್ಯಾಮ್ ಹೆಲ್ಪ್ ಯು. ತಗೊ.

ಇನ್ನೊಂದು ಬೀಡಿ ಸೇದು. ನಾನು ಬರ್‍ತೀನಿ. ನೊ ಟೈಮ್. ನಾನು ಎಲ್ಲ ವ್ಯವಸ್ಥೆ ಮಾಡ್ತೀನಿ."

ಬಹಳ ಸಂತೋಷದಿಂದ ಚಂದ್ರ ಹೊರಟು ಹೋದ. ಗುಲಬ್ ಸಹ ಹೊರಟ. ಆತನ ಮನಸ್ಸಿನಲ್ಲಿಯೂ ಸಹ ಆನಂದ ಮೂಡಿತು. ಕೈಯಲ್ಲಿ ಬೀಡಿ ಹಿಡಿದುಕೊಂಡೇ ಆತ ಮನೆ ತಲುಪಿದ. ಒಂದು ಬೀಡಿ ಸೇದಿದನಂತರ ಮತ್ತೊಂದು ಬೀಡಿ ಸಿಕ್ಕಿತೆಂದು ಸೇದುವುದು ಉಚಿತವಲ್ಲವೆಂದು ಭಾವಿಸಿ ಆ ಬೀಡಿಯನ್ನು ರಾತ್ರಿ ಊಟವಾದ ಮೇಲೆ ಸೇದಲು ಇಟ್ಟುಕೊಂಡ.

ಮೋಡ ಚದುರಿತು. ಬೆಳದಿಂಗಳು ಹರಡಿತು. ಇನ್ನು ಒಂದೆರಡು ದಿನಗಳಲ್ಲಿ ಹುಣ್ಣಿಮೆ ಆಗುತ್ತೆ. ಎರಡು ದಿವಸಗಳು ತಡವಾಗಿ ಆತ ಪಾಹಿಗೆ ಹೋದರೂ ನಷ್ಟವೇನೂ ಇಲ್ಲ. ಜೇನುಗೂಡು ಬಿಟ್ಟು ಹೋಗಲು ಮನಸ್ಸಿಲ್ಲ.

ರಾತ್ರಿ ಊಟವಾದ ಮೇಲೆ ಅಷ್ಟು ಹೊತ್ತಿನಲ್ಲೇ ಗುಲಬ್ ಭೀಮನ ಮನೆಗೆ ಹೋದ. ಭೀಮ ಲೆಕ್ಕಾಚಾರ ಹಾಕಿ ಹೇಳಿದ - "ಹುಣ್ಣಿಮೆ ಆಗಲು ಇನ್ನೂ ಮೂರು ದಿನ ಬೇಕು. ಆದರೆ ನಾಳಿದ್ದು ಕಿತ್ತರೂ ಜೇನುತುಪ್ಪ ಸಿಕ್ಕುತ್ತೆ. ಅದು ಎಲ್ಲಿ ಕಟ್ಟಿದೆ?"

"ನೀನೇ ಬಂದು ನೋಡು. ಬಹಳ ಭಾರಿ ಜೇನುಗೂಡು. ಸರಿ, ನಾಳಿದ್ದೇ ನಾವು ಹೋಗೋಣ."

ಭೀಮನ ಜೊತೆಯಲ್ಲಿ ಮಾತಾಡಿ ನಿಶ್ಚಯಸಿದ್ಧಾಯಿತು. ಮತ್ತಾರನ್ನೂ ಜೊತೆಯಲ್ಲಿ ಕರೆದುಕೊಂಡು ಹೋಗುವುದಿಲ್ಲ. ರಾತ್ರಿ ಊಟವಾದ ಮೇಲೆ ಅವರಿಬ್ಬರೂ ಹೋಗುತ್ತಾರೆ. ಜೊತೆಯಲ್ಲಿ ಎರಡು ಗಡಿಗೆ ಸಹ ತೆಗೆದುಕೊಂಡು ಹೋಗುತ್ತಾರೆ. ಏಣಿಯ ಅವಶ್ಯಕತೆಯಿಲ್ಲ. ಇಬ್ಬರೂ ಎರಡು ಕೈಗೊಡಲಿ ತೆಗೆದುಕೊಂಡು ಹೋಗುತ್ತಾರೆ. ಹುಲಿ ಮೊದಲಾದವುಗಳ ಭಯ. ಅದರಲ್ಲೂ ರಾತ್ರಿ ಸಮಯ.

ನೇಪಾಲಿಯ ಮೊಹಲ್ಲಾದಿಂದ ಆತ ನೇರವಾಗಿ ಮನೆ ಕಡೆ ಹೊರಟ. ಆದರೆ ಒಮ್ಮೆ 'ತರಾ' ಭೇಟಿ ಮಾಡಿ ಹೋಗಲು ಆಸೆಯಾಯಿತು. ಆತ ಹೋದರೆ ಕಪಾಹಿ ಮಧ್ಯೆ ಪ್ರವೇಶಿಸಿ ತರಾ ಜೊತೆ ಮಾತನಾಡಲು ಅವಕಾಶ ಕೊಡುವುದಿಲ್ಲ. ಆತನನ್ನು ತರಾಳಿಂದ ಸ್ವಲ್ಪ ದೂರ ಇಡಲು ಬಯಸುತ್ತಾಳೆ. ಏಕೆಂದರೆ ಆತನ ಮನಸ್ಸಿನ ಭಾವವನ್ನು ಬಹುಶಃ ಕಪಾಹಿ ಅರ್ಥಮಾಡಿಕೊಂಡಿದ್ದಾಳೆ.

"ಏನಕ್ಕಾ, ಮಲಗಿಬಿಟ್ಟಿದ್ದೀಯಾ?" - ಬಾಗಿಲು ಬಳಿ ನಿಂತು ಆತ ಮೆಲುದನಿಯಲ್ಲೇ ಹೇಳಿದ.

ಕಪಾಹಿಗೆ ಸ್ವಲ್ಪ ನಿದ್ದೆ ಹತ್ತಿತ್ತು. ಆಕೆ ಎಚ್ಚರಗೊಂಡು ಕೇಳಿದಳು - "ಯಾರದು?"

"ನಾನು. ಮಲಗಿದ್ದರೆ ಮಲಗಿಕೊ. ಏನೋ ಅಗತ್ಯವಿಲ್ಲ. ರಾತ್ರಿ ಸಮಯ. ಸುಮಾರು ಹೊತ್ತಾಗಿದೆ."

ಕಪಾಹಿ ಬಾಗಿಲು ತೆಗೆದಳು. ತರಾ ಮಲಗಿದ್ದಳು.

"ಬಾ, ಒಳಗಡೆ ಬಾ. ರಾತ್ರಿ ಇಷ್ಟು ಹೊತ್ತಿನಲ್ಲಿ ಎಲ್ಲಿಂದ ಬಂದೆ?"

"ಇಲ್ಲೇ ಒಂದು ಕಡೆ ಹೋಗಿದ್ದೆ?" - ಎಂದು ಹೇಳುತ್ತಾ ಗುಲಬ್ ಕುಳಿತ.

ಕಪಾಹಿ ಜೋರಾಗಿ ಕದ ನೂಕಿ ಹಾಕಿದಳು.

"ನೀನು ಪಾಹಿಗೆ ಹೊರಟು ಹೋಗಿದ್ದೀಯೆ ಅಂದುಕೊಂಡಿದ್ದೆ. ಇತ್ತೀಚಿಗೆ ಒಂದು

ದಿನವೂ ನೀನು ಈ ಕಡೆ ಬರಲಿಲ್ಲ."

ದೀಪದ ಬತ್ತಿಯನ್ನು ಮೇಲಕ್ಕೆತ್ತಿ ದೀಪವನ್ನು ಅಲ್ಲಾಡಿಸುತ್ತಾ ಹೇಳಿದಳು - "ಇದರಲ್ಲಿ ಸ್ವಲ್ಪವೂ ಎಣ್ಣೆ ಇಲ್ಲ."

ಗುಲಬ್ ಹೇಳಿದ - "ತರಾ ಎಲ್ಲಿಗೆ ಹೋದಳು? ಮಲಗಿದ್ದಾಳೋ?"

"ಅವಳು ಮಲಗಿ ಬಹಳ ಹೊತ್ತಾಯಿತು. ಇನ್ನೂ ಚಿಕ್ಕ ಹುಡುಗಿ. ಹಾಸಿಗೆ ಮೇಲೆ ಮಲಗಿದ ಕೂಡಲೇ ಆಕೆಗೆ ನಿದ್ದೆ ಬರುತ್ತೆ. ಅವಳು ನಮ್ಮ ಹಾಗೆ ಅಲ್ಲ - ನಮಗೆ ಪ್ರಪಂಚದ ಅನೇಕ ಚಿಂತೆ. ಬೇಗ ನಿದ್ದೆ ಬರೋದಿಲ್ಲಾ!"

ದೀಪದ ಪ್ರಕಾಶ ಕಡಿಮೆಯಾಗುತ್ತಿತ್ತು. ಗುಲಬ್ ಒಂದು ಬಾರಿ ಕಪಾಹಿ ಕಡೆ ದಿಟ್ಟಿಸಿ ನೋಡಿ ಹೇಳಿದ - "ಸುಮ್ಮನೆ ಹಾಗೇ ಬಂದೆ. ಮಲಗಿಕೊ, ನಾನು ಹೋಗ್ತೀನಿ."

"ಹೊರಟೇ ಬಿಟ್ಟೆಯಾ? ಸ್ವಲ್ಪ ಕುಳಿತುಕೊ. ಒಂದು ಬೀಡಾ ಬಾಯಿಗೆ ಹಾಕಿಕೊಂಡು ಹೋಗು."

"ಈಗ ಬ್ಯಾಡ ಬಿಡು."

ಗುಲಬ್ ಎದ್ದ.

"ಸರಿ, ಹೊರಡು. ಪಾಹಿಗೆ ಯಾವಾಗ ಹೋಗ್ತೀಯೇ?"

"ನಾಲ್ಕು ದಿನಗಳಾದ ಮೇಲೆ. ಹೋಗ್ತೀನಿ. ಯಾಕೆ?"

"ಹಾಗಾದರೆ ನಾಳಿದ್ದಿನ ತನಕ ಊರಿನಲ್ಲೇ ಇರ್ತೀಯೇ?"

"ಅಹುದು."

"ಸಾಧ್ಯವಾದರೆ ನಾಳಿದ್ದು ರಾತ್ರಿ ಒಂದು ಸಾರಿ ಇಲ್ಲಿಗೆ ಬಾ. ನಿನ್ನ ಜೊತೆಯಲ್ಲಿ ಸ್ವಲ್ಪ ಮಾತಾಡಬೇಕಾಗಿದೆ.

"ಸಾಧ್ಯವಾದರೆ ಬರ್ತೀನಿ. ಆದರೆ ಬೇಗ ಬರೋಕೆ ಆಗೋಲ್ಲ."

"ಎಲ್ಲಿಗಾದರೂ ಹೋಗ್ತೀಯಾ?"

ಜೇನುಗೂಡಿನ ವಿಷಯವನ್ನು ತಿಳಿಸದಿರುವುದೇ ಮೇಲು ಅಂದುಕೊಂಡ.

ಆತ ಸ್ವಲ್ಪ ಯೋಚಿಸಿ ಹೇಳಿದ - "ಎಲ್ಲರ ಕಣ್ಣು ನಮ್ಮ ಮೇಲಿದೆ. ಈ ವಿಷಯ ನಿನಗೆ ಗೊತ್ತೇ ಇದೆ. ನಾನು ಬೇಗ ಬರೋದು ಅದನ್ನು ಯಾರಾದರೂ ನೋಡೋದು, ಬಾಯಿಗೆ ಬಂದಂತೆ ಮಾತಾಡಿಕೊಳ್ಳೋದು -ಇದೆಲ್ಲಾ ನನಗೆ ಹಿಡಿಸೊಲ್ಲ."

ಬಾಗಿಲ ಬಳಿ ಬಂದು ಕಪಾಹಿ ಹೇಳಿದಳು - "ನಾಳಿದ್ದು ತರಾಳನ್ನು ಅವಳ ಮಾವ ತನ್ನ ಮನೆಗೆ ಬರಹೇಳಿದ್ದಾನೆ. ನಾನು ಒಬ್ಬಳೇ ಇರ್ತೀನಿ. ನೀನು ಬಾ. ಒಬ್ಬಳೇ ಇರಲು ನನಗೆ ಭಯ."

"ಸರಿ, ಬರ್ತೀನಿ ಅಕ್ಕ. ನಾನು ಬರಲೇ?"

ಗುಲಬ್ ನಿಧಾನ ನಿಧಾನವಾಗಿ ಹೊರಟ.

ಸ್ವಲ್ಪ ಹೊತ್ತು ನಿಂತಿದ್ದು ಕಪಾಹಿ ಒಳಗಡೆ ಬಂದು ಕದಹಾಕಿಕೊಂಡಳು.

ರಸ್ತೆಗೆ ಬಂದಮೇಲೆ ಗುಲಬ್ ಆಕಾಶದ ಕಡೆ ದಿಟ್ಟಿಸಿ ನೋಡಿದ. ನಾಳಿದ್ದು ಹುಣ್ಣಿಮೆ ಆಗಬಹುದು. ಬೆಳದಿಂಗಳು ಬಹಳ ಸುಂದರವಾಗಿ ಕಾಣುತ್ತಿತ್ತು. ಮನಸ್ಸಿಗೆ ಬಹಳ ಆನಂದವಾಯಿತು.

ನಾಳಿದ್ದು ಜೇನುಗೂಡು ಕಿತ್ತಮೇಲೆ ಅಕ್ಕ-ಕಪಾಹಿಯ ಮನೆಗೆ ಆತ ಬರಲು ಸಾಧ್ಯ. ರಾತ್ರಿ ಎಷ್ಟು ಹೊತ್ತಾಗುತ್ತೋ ಹೇಳಲಾಗುವುದಿಲ್ಲ.

ಆದರೆ ಆ ದಿನ ತರಾ ಮನೆಯಲ್ಲಿರುವುದಿಲ್ಲ. ತರಾ ಇಲ್ಲದೆ ಹೋದರೆ ಬರೋದೇ ಸರಿಯಾಗಿಲ್ಲ. ಅವಳು ಬಹಳ ಚೆಲುವೆ. ಚೇನಿಮಾಇಗಿಂತ ತರಾ ತುಂಬಾ ಸುಂದರವಾಗಿದ್ದಾಳೆ. ಯಾರೂ ಆಕೆಯನ್ನು ಹಾರಿಸಿಕೊಂಡು ಹೋಗದಿರಲಿ. ಆಕೆಗೆ ತಾಯಿ ಇಲ್ಲ. ಅವಳೇ ಕದ್ದು ಓಡಿ ಹೋದರೆ ಅಕ್ಕ ಏನು ಮಾಡಲು ಸಾಧ್ಯ? ಈ ವಿಷಯನ್ನು ಚಂದ್ರನ ಮೂಲಕ ಹೇಳಿಸಬೇಕು. ಇದರಲ್ಲೇನು ನಾಚಿಕೆ? ಸಮಯ ಸಿಕ್ಕಿದರೆ ನಾಳಿದ್ದು ನಾನೇ ಹೇಳ್ತೇನಿ. ಇಬ್ಬರನ್ನೂ ಪಾಹಿಗೆ ಕರೆದುಕೊಂಡು ಹೋಗ್ತೇನಿ. ನಮ್ಮ ತಾಯಿಯನ್ನು ಕರೆದುಕೊಂಡು ಹೋಗ್ತೇನಿ. ಸ್ವಲ್ಪ ಹೆಚ್ಚಿಗೆ ಜಮೀನು ಆಬಾದು ಮಾಡಿ ಇನ್ನೊಂದು ಜೋಡಿ ಸರಿಯಾದ ಎತ್ತುಗಳನ್ನು ಕೊಂಡು ಕೊಂಡರೆ ಎರಡು ಮೂರು ಬೆಳೆ ಬೆಳೆಯತಕ್ಕ ನಾಲ್ಕಾರು ಎಕರೆ ಜಮೀನು ಸುಲಭವಾಗಿ ಉಳುಮೆ ಮಾಡಬಹುದು. ಸರಿ, ತರಾ ಅದೃಷ್ಟ ಹೇಗಿದೆಯೋ? ಯಾರಿಗೆ ಗೊತ್ತು. ನನ್ನ ಮತ್ತು ನನ್ನ ತಾಯಿಯ ಅದೃಷ್ಟ ಖುಲಾಯಿಸಲಿ.

ಚಂದ್ರನ ಮೂಲಕ ಹೇಳಬೇಕಾದ ಅಗತ್ಯವಿಲ್ಲ. ನಾನೇ ವಿಷಯ ತಿಳಿಸುತ್ತೇನೆ. ಚೇನಿಮಾಇ ವಿವಾಹ ನೆರವೇರಲಿ. ನಾನಂತೂ ತರಾಳನ್ನು ಮದುವೆಯಾಗ್ತೇನಿ. ತರಾ ಮುಂದೆ ಚೇನಿಮಾಇ ಏನೇನೂ ಇಲ್ಲ. ತರಾ ಸೊಸೆಯಾಗಿ ಬರುವುದು ನಮ್ಮ ತಾಯಿಗೂ ಸಂತೋಷವಾಗಬಹುದು. ತರಾ ಒಪ್ಪೋದಾದರೆ!

# ಐದು

"ಯಾರದು?" - ಬಾಗಿಲು ತೆಗೆದ ಸದ್ದನ್ನು ಕೇಳಿಸಿಕೊಂಡು ಆತನ ತಾಯಿ ಕೇಳಿದಳು.

"ನಾನವ್ವ. ಮಲಗಿಬಿಟ್ಟಿದ್ದೀಯಾ? ದೀಪ ಹಚ್ಚು"- ಮಲಗಿದ್ದ ಆತನ ತಾಯಿ ಎದ್ದಳು.

"ರಾತ್ರಿಯಲ್ಲಿ ಇಷ್ಟು ಹೊತ್ತು ಎಲ್ಲಿಗೆ ಹೋಗಿದ್ದೇ? ರಾತ್ರಿ ಹೊತ್ತು ಸುತ್ತಾಡೋ ಅಭ್ಯಾಸ ಮತ್ತೆ ಶುರುವಾಗಿದೆಯೋ?"

ತಾಯಿ ದೀಪ ಹಚ್ಚಿ ಎದ್ದು ಬಂದಳು.

"ಸುತ್ತಾಡಲು ಹೋಗಿರಲಿಲ್ಲ. ಭೀಮನ ಮನೆಗೆ ಹೋಗಿದ್ದೆ."

ಅನಂತರ ಆತ ತಾಯಿ ಜೊತೆಯಲ್ಲಿ ಜೇನುಗೂಡು ಕೀಳಲು ಮಾಡಿರುವ ತಮ್ಮ ಪೂರ್ಣ ಯೋಜನೆಯನ್ನು ತಿಳಿಸಿದ. ಅದನ್ನು ಕೇಳಿ ತಾಯಿಗೆ ಸಂತೋಷವಾಯಿತು.

"ನಿಮ್ಮ ತಂದೆ ವಿಷಯ ತಿಳಿದುಕೊಂಡು ಬರಲು ಹೋಗಿರಬಹುದು ಅಂದುಕೊಂಡೆ."

ಗುಲಬ್ ಒಟಗುಟ್ಟಿದ " - ಆ ವಿಷಯ ನನ್ನೊಡನೆ ಎತ್ತಬೇಡ. ಸಾಯೋರು ಸಾಯಲಿ. ನಿನಗೆ ನೋಡಬೇಕು ಅನ್ನಿಸಿದರೆ ಹೋಗಿ ನೋಡಿಕೊಂಡು ಬಾ. ನಿಮಗಂತೂ ನಾಚಿಕೆ-ಗೀಚಿಕೆ ಇಲ್ಲ."

ಆತನ ತಾಯಿಗೆ ಸಿಟ್ಟು ಬಂತು. " - ನನಗೇನು ದರದು? ಪಟ್ಟದ ರಾಣಿ ಇದ್ದಾಳೆ. ಸೊಸೆ ಇದ್ದಾಳೆ. ಚೆನ್ನಾಗಿ ಸೇವೆ-ಶುಶ್ರೂಷೆ ಮಾಡ್ತಾರೆ. ಸಾಯೋ ಸಮಯದಲ್ಲಿ ಯಾರು ಬಾಯಿಗೆ ಒಂದು ತೊಟ್ಟು ನೀರು ಬಿಡ್ತಾರೆ ನೋಡ್ತೀನಿ."

ತಾಯಿಯ ಮಾತು ಕೇಳಿ ಗುಲಬ್‌ನಿಗೆ ಸಂತೋಷವಾಯಿತು. ಅವನ ಹಾಗೆ ಅವನ ತಾಯಿ ಸಹ ತನ್ನ ಮಾತು ಉಳಿಸಿಕೊಳ್ಳುತ್ತಾಳೆ.

"ಸರಿ. ರಾತ್ರಿ ಸಾಕಷ್ಟು ಹೊತ್ತಾಗಿದೆ. ಹೋಗು. ಮಲಗಿಕೊ. ಇಷ್ಟು ಹೊತ್ತಿನಲ್ಲಿ ಕೂಗಾಡೋದು ಸರಿಯಲ್ಲ" - ಗುಲಬ್ ಹೇಳಿದ.

"ನೀನು ಬರೀ ಮಾತಾಡುವುದರಿಂದ ಏನು ಆಗೋಲ್ಲ. ಒಂದು ಬಾರಿ ರಾತ್ರಿ ಹೊತ್ತು ಸುತ್ತಾಡಿಕೊಂಡು ಮನೆಗೊಬ್ಬರನ್ನು ಕರೆದುಕೊಂಡು ಬಂದಾಗ ನಿನಗೆ ಸಿಕ್ಕಿದ ಮರ್ಯಾದೆ ಏನು? ನೆನಪಿಲ್ಲವೇ? ನಾಚಿಕೆಯಾಗುವುದಿಲ್ಲವೇ? ಭೀಮನ ಮನೆಗಾದರೂ ಹೋಗು. ಯಾರ ಮನೆಗಾದರೂ ಹೋಗು. ಆದರೆ ಹಗಲು ಹೊತ್ತು ಹೋಗು. ಈ ಹಳ್ಳಿಯವರಿಗೆಲ್ಲಾ ಬೇರೆ ಏನು ಕೆಲಸ? ಯಾವನು ಎಲ್ಲಿಗೆ ಹೋದ? ಯಾವನು ಯಾರ ಕಡೆ ನೋಡಿದ? ಅದನ್ನು ಲೆಕ್ಕಾಚಾರ ಹಾಕೋದೇ ಆಗಿದೆ. ಶತ್ರುಗಳಿಗೆ ಎಂದೂ ಸಂಚು ನಡೆಸಲು ಅವಕಾಶ ಕೊಡಬಾರದು."

"ನಾನು ಪಾಹಿಗೆ ಹೋಗಿ ನೆಲಸುತ್ತೇನೆ. ಅಲ್ಲೇ ಒಂದು ಮನೆ ಕಟ್ಟುತ್ತೇನೆ. ನಿನ್ನನ್ನು ಅಲ್ಲಿಗೆ ಕರೆದುಕೊಂಡು ಹೋಗ್ತೀನಿ."

ತಾಯಿ ಮಗನ ಮುಖ ನೋಡಿದಳು.

"ನನ್ನ ಜೊತೆಯಲ್ಲಿ ತಮಾಷೆ ಮಾಡಬೇಡ. ನಾನು ಹುಟ್ಟಿದ ಈ ಸ್ಥಳ. ಈ ಊರು. ಇದೆಲ್ಲಾ ಬಿಟ್ಟು, ನಿನ್ನ ಆ 'ಪಾಹಿ' ಗೆ ಯಾಕೆ ಬರಲಿ? ಸಾಯೋದಾದರೆ ಇಲ್ಲೇ ಸಾಯ್ತೀನಿ. ಹಳ್ಳಿ ಬಿಟ್ಟು ಹೊರಗೆ ಯಾಕೆ ಹೋಗಲಿ?"

-ಕಠೋರವಾಗಿ ತಾಯಿ ಹೇಳಿದಳು.

"ಅಲ್ಲಿ ಮನುಷ್ಯರಿಲ್ಲವೇ? ಸ್ವಲ್ಪ ಜಾಸ್ತಿ ಜಮೀನನ್ನು ಆಬಾದು ಮಾಡಿದರೆ ಇಲ್ಲಿಗಿಂತ ಹೆಚ್ಚು ಸುಖವಾಗಿ ಇರಬಹುದು."

"ಆ ಸುಖ ಅಲ್ಲೇ ಇರಲಿ. ಊರು ಬಿಡೋದರ ಅರ್ಥ ನಮ್ಮ ಮರ್ಯಾದೆ ಕಳೆದುಕೊಂಡ ಹಾಗೆ. ನನ್ನ ಊರಿನಲ್ಲೇ ಗುಡಿಸಲಿನಲಿದ್ದುಕೊಂಡು ಭಿಕ್ಷೆ ಬೇಡಿ ಜೀವನ ಮಾಡ್ತೀನಿ. ಈ ಊರು ಏತಕ್ಕೆ ಬಿಡಲಿ? ನೀನು ಏನು ಮಾಡ್ತೀಯೋ ಮಾಡು. ನನ್ನ ಜೊತೆಯಲ್ಲಿ ಹೇಳಬ್ಯಾಡ."

ಗುಲಬ್‌ನಿಗೆ ತಾಯಿಯ ಮಾತು ಕೇಳಿ ಸ್ವಲ್ಪ ಗಾಬರಿಯಾಯಿತು. ಆತನ ತಾಯಿ ಹೇಳಿದ ಮಾತು ಒಂದೂ ಸುಳ್ಳಲ್ಲ. ಆಕೆಯನ್ನು ಇಂಥ ಸಹಜವಾದ ಮಾತುಗಳಿಂದ ಮರುಳು ಮಾಡಲು ಸಾಧ್ಯವಿಲ್ಲ.

ವೀಳ್ಯದೆಲೆಯ ಪೆಟ್ಟಿಗೆಯಿಂದ ಒಂದು ಅಡಕೆ ಚೂರು ತೆಗೆದುಕೊಂಡು ಗುಲಬ್ ಬಾಯಿಗೆ ಹಾಕಿಕೊಂಡ. ಅಂಗಿ ಜೇಬಿನಿಂದ ಅರ್ಧ ಸೇದಿಬಿಟ್ಟಿದ್ದ ಬೀಡಿ ತುಂಡನ್ನು ತೆಗೆದು ಹಚ್ಚ ತೊಡಗಿದ.

ಆತನ ತಾಯಿ ಹೇಳಿದಳು - "ಪಾಹಿಯಲ್ಲಿ ಮನೆಮಠ ಕಟ್ಟುವ ಅಗತ್ಯವಿಲ್ಲ. ಸಾಧ್ಯವಾದರೆ

ಇಲ್ಲೇ ಎಲ್ಲಿಯಾದರೂ ಒಳ್ಳೆಯ ಕಡೆ ಜಮೀನು ತೆಗೆದುಕೊಂಡು ಸರಿಯಾದ ಒಂದು ಮನೆ ಕಟ್ಟು. ಸೋರೋ ಮನೆಯಲ್ಲಿ ಇನ್ನೆಷ್ಟು ದಿನ ಅಂತ ವಾಸ ಮಾಡೋದು? "

ಗುಲಬ್ ಮರು ಮಾತಾಡಲಿಲ್ಲ.

ತರುಣನಾಗಿದ್ದರೂ ಆತ ಬೇರೆಯವರಂತೆ ಒಂದೇ ಸಮನೆ ಕೆಲಸ ಮಾಡಲಾರ. ಆತನ ಮನಸ್ಸು ಬಹಳ ಮೃದು. ಒಂದು ವೇಳೆ ಸುಂದರವಾದ ಎಲೆಯೊಂದು ಕಣ್ಣಿಗೆ ಬಿದ್ದರೂ ಅದನ್ನು ನೋಡುತ್ತಾ ಆತ ಬೇರೆ ಕೆಲಸವನ್ನೇ ಮರೆತು ಬಿಡುತ್ತಾನೆ. ಆಕಾಶದಲ್ಲಿ ಮೋಡ ಒಂದು ಕಣ್ಣಿಗೆ ಬಿದ್ದರೆ ಸಾಕು, ಊಟ ಮಾಡುವುದನ್ನೇ ಮರೆಯುತ್ತಾನೆ; ಕಾಡಿನಲ್ಲಿ ಎಲ್ಲೋ ಹಕ್ಕಿಯೊಂದರ ಇಂಚರ ಕೇಳಿದ ಕೂಡಲೇ ಉತ್ಕಂಠಿತನಾಗುತ್ತಾನೆ; ಆತ ಯಾವ ಕೆಲಸವನ್ನೂ ಏಕಾಗ್ರತೆಯಿಂದ ನಿರ್ವಹಿಸಲಾರ.

ತಾಯಿ ಏನೇ ಹೇಳಲಿ. 'ಪಾಹಿ' ಯಲ್ಲಿ ಒಂದು ಒಳ್ಳೆಯ ಮನೆ ಕಟ್ಟಬೇಕು - ನದಿಯ ದಡದಲ್ಲಿ ಒಂದು ಸುಂದರವಾದ ಮನೆ. ತರಾಳಿಗಾಗಿ.

ಸೊಸೆಯಿಂದ ಸೇವೆ ಮಾಡಿಸಿಕೊಳ್ಳುವ ಸೌಭಾಗ್ಯ ಒದಗಿದ ಕೂಡಲೇ ತಾಯಿಯ ಕೋಪ ಮಾಯವಾಗುತ್ತೆ. ತರಾ ನಮ್ಮ ತಾಯಿಯ ಬಗ್ಗೆ ಗೌರವ ತೋರಿಸಿ ಉಪಚಾರ ಮಾಡಿದರೆ ಎಲ್ಲವೂ ಸರಿಹೋಗುತ್ತೆ.

ಹಾಸಿಗೆ ಮೇಲೆ ಮಲಗಿಕೊಂಡೇ ಆತನ ತಾಯಿ ತನ್ನಷ್ಟಕ್ಕೆ ತಾನೇ ಯೋಚಿಸ ತೊಡಗಿದಳು.

"ಅವನ ಜೊತೆಯವರಿಗೆಲ್ಲಾ ಮದುವೆ ಆಗಿದೆ. ಮಕ್ಕಳುಮರಿ ಸಹ ಆಗಿವೆ. ಈ ರೀತಿ ಸುತ್ತಾಡಿಕೊಂಡು ಇರುವುದರಿಂದ ಮನೆ ಉದ್ಧಾರ ಆಗುತ್ತದೆಯೇ? ಮನಸ್ಸನ್ನು ಹತೋಟಿಯಲ್ಲಿಟ್ಟುಕೊಳ್ಳಬೇಕು. ಆಗ ಎಲ್ಲ ಸಾಧ್ಯ. ಅಲೆಯುವುದೇ ಕೆಲಸವಾಗಿದೆ. ಇಷ್ಟೊಂದು ತರುಣನಾಗಿದ್ದರೂ ಮುಂದುವರಿಯೋ ಹಂಬಲವೇ ಇಲ್ಲ. ಇಡೀ ದಿನ ಸುತ್ತಾಡುವುದರಿಂದ ಮನೆ ಉದ್ಧಾರವಾಗುತ್ತದೆಯೇ? ಹೊಟ್ಟೆಬಟ್ಟೆಗೆ ಏನು ಗತಿ?"

ಬೀಡಿಯ ಕೊನೆಯ ದಮ್ಮು ಸೇದಿ ಗುಲಬ್ ಹೇಳಿದ - "ಅಲ್ಲಿ ಇಲ್ಲಿ ಸುತ್ತಾಡದೆ ಮನೆಯಲ್ಲೇ ಕುಳಿತುಕೊಂಡು ನಿನ್ನ ಮುಖ ನೋಡ್ತಿದ್ದರೆ ಹೊಟ್ಟೆ ತುಂಬುತ್ತದೆಯೇ? ನೀನು ಬರದಿದ್ದರೆ ಇಲ್ಲೇ ಇರು. ನಾನು ಪಾಹಿಯಲ್ಲೇ ಮನೆಮಠ ಕಟ್ತೇನಿ. ಏನಾಗಬೇಕೋ ಆಗುತ್ತೆ."

ಆತನ ತಾಯಿ ಮತ್ತೇನೂ ಹೇಳಲಿಲ್ಲ.

ಸ್ವಲ್ಪ ಹೊತ್ತಾದ ಮೇಲೆ ತಾಯಿಗೆ ನಿದ್ರೆ ಬಂತು.

ನೆಲದ ಮೇಲೆ ಚಾಪೆ ಹಾಸಿಕೊಂಡು ಎಣ್ಣೆ ಮೆತ್ತಿಕೊಂಡು ಕಪ್ಪು ಕಲೆಯಿದ್ದ ತಲೆದಿಂಬಿನ ಮೇಲೆ ತಲೆಯಿಟ್ಟು ಗುಲಬ್ ಮಲಗಿದ. ಆತನಿಗೆ ನಿದ್ರೆ ಬರಲಿಲ್ಲ. ಕಣ್ಣು ಬಿಟ್ಟುಕೊಂಡೇ ಯೋಚಿಸತೊಡಗಿದ. ಒಮ್ಮೆ ಮೇಲ್ಚಾವಣಿಯ ಕಡೆಗೆ ಕಣ್ಣು ಹಾಯಿಸಿದ. ಇದೇ ರೀತಿ ಇನ್ನು ಹೆಚ್ಚು ದಿನಗಳು ಜೀವನ ನಡೆಸುವುದು ಸರಿಯಲ್ಲವೆಂದು ಯೋಚಿಸಿದ. ಒಂದು ವೇಳೆ ಕಪಾಹಿಯು ತರಾಳನ್ನು ನನಗೆ ಕೊಡುವುದಿಲ್ಲವೆಂದು ಹಟ ಹಿಡಿದರೆ ಆಗ ಬಲತ್ಕಾರವಾಗಿ ತರಾಳನ್ನು ಕರೆತರಬೇಕಾಗುತ್ತೆ. ಚಂದ್ರನೊಡನೆ ಸ್ವಲ್ಪ ಆಲೋಚನೆ ಮಾಡಿ ಆತನ ಸಲಹೆ ಸಹ ಪಡೆಯಬೇಕಾಗುತ್ತದೆ. ಕಪಾಹಿ ದುರ್ನಡತೆ ಹೆಂಗಸು. ತರಾಳಿಗೆ ತಾಯಿ ಸಹ ಇಲ್ಲಾ. ತರಾಳನ್ನು ಮದುವೆ ಮಾಡಿಕೊಳ್ಳುವವರು ಯಾರು? ಪಾಹಿಯಲ್ಲೇ ಒಂದು ಚೆನ್ನಾಗಿರೋ

ಮನೆ ಕಟ್ಟಿಸಬೇಕು. ಒಂದು ವೇಳೆ ಕದ್ದು ಕರೆದುಕೊಂಡು ಓಡಿ ಬರುವ ಪ್ರಸಂಗ ಒದಗಿದರೆ ಪಾಹಿಗೆ ಕರೆದುಕೊಂಡು ಬರ್‍ತೀನಿ. ಯಾರಿಗೂ ಬೇಗ ಹುಡುಕಿ ಪತ್ತೆ ಹಚ್ಚೋಕೆ ಅಲ್ಲಿ ಆಗೋಲ್ಲ. ಕರೆದುಕೊಂಡುಬಂದ ಮೇಲೆ ತರಾಳನ್ನು ಹುಡುಕಿಕೊಂಡು ಯಾರು ಬರ್‍ತಾರೆ?

ಎಣ್ಣೆ ಮುಗಿದು ಹೋದ ಕಾರಣ ದೀಪದ ಪ್ರಕಾಶ ಕ್ರಮೇಣ ಮಬ್ಬಾಗತೊಡಗಿತು. ಕೊನೆಗೆ ಆರಿಹೋಯಿತು. ಮನೆಯ ಮೇಲ್ಛಾವಣಿಯ ಕಂಡಿಯಿಂದ ಬೆಳದಿಂಗಳ ರೇಖೆ ಹಾಯ್ದು ಆತನ ತಲೆದಿಂಬಿನ ಪಕ್ಕದಲ್ಲಿ ಹರಡಿತು. ಆತ ಸ್ವಲ್ಪ ಹೊತ್ತು ಅದನ್ನೇ ಗಮನಿಸಿದ. ಬೆಳದಿಂಗಳು ನೇರವಾಗಿ ಕಂಡಿಯಿಂದ ನುಸುಳಿತ್ತು. ಆತ ತನ್ನ ಕೈ ಚಾಚಿ ದಿಂಬನ್ನು ಆ ಕಡೆ ಸರಿಸಿದ.

## ಆರು

ಡಾಲಿಮ್ ಹಳ್ಳಿಯ ಸಫಿಯತ್ ಸ್ವಲ್ಪ ಹಣವಂತ. ಅವನು ಸಾಗುವಳಿ ಮಾಡುತ್ತಿರುವ ಜಮೀನು ಹದಿನಾಲ್ಕು ಎಕರೆ. ಅಲ್ಲದೆ ಪಾಹಿಯಲ್ಲಿ ಹಿಂಗಾರು ಬೆಳೆಯ ಸುಮಾರು ಒಂಬತ್ತು ಎಕರೆ ಜಮೀನು ಇದೆ. ಆತ ತನ್ನ ಹದಿನೆಂಟನೆಯ ವಯಸ್ಸಿನಲ್ಲಿ ಮದುವೆಯಾದ. ಈಗ ಅವನಿಗೆ 68 ವರ್ಷ ವಯಸ್ಸು. ಈಗಲೂ ಆತನ ಆರೋಗ್ಯ ಬಹಳ ಚೆನ್ನಾಗಿದೆ.

ಸಫಿಗೆ ಐದು ಹೆಣ್ಣು ಮಕ್ಕಳಿದ್ದಾರೆ. ಅವರೆಲ್ಲರಿಗೂ ಬಹಳ ಹಿಂದೆಯೇ ಮದುವೆಯಾಗಿದೆ. ಮೊಮ್ಮಗ ಮೊಮ್ಮಗಳು ಇದ್ದಾರೆ. ಮತ್ತು ಅವನಿಗೆ ಇಬ್ಬರು ಗಂಡು ಮಕ್ಕಳೂ ಇದ್ದಾರೆ. ಅವರು ಹೆಣ್ಣು ಮಕ್ಕಳಿಗಿಂತ ಕಿರಿಯವರು. ರಫೀಯತ್ ಹಿರಿಯ ಮಗ. ಕೆಲವು ವರ್ಷಗಳ ಹಿಂದೆಯೇ ಅವನಿಗೂ ಮದುವೆಯಾಗಿದೆ. ಅವನಿಗೆ ಇಬ್ಬರು ಹೆಣ್ಣು ಮಕ್ಕಳು ಇದ್ದಾರೆ. ಕಿರಿಮಗನಿಗೆ ಇನ್ನೂ ಮದುವೆಯಾಗಿಲ್ಲ. ಅವನಿಗೆ 32 ವರ್ಷ ತುಂಬಿದೆ.

ಅವನಿಗೆ ಮದುವೆಯಾಗದಿರಲು ಅನೇಕ ಕಾರಣಗಳಿವೆ.

ಅವನ ಹೆಸರು ಬಫಿ. ಆತ ಕುಳ್ಳ. ಸುಮಾರು ಮೂರುವರೆ ಅಡಿ ಎತ್ತರ ಇದ್ದಾನೆ. ಒಕ್ಕಣ್ಣ. ಎಡಗೈನ ಎರಡು ಬೆರಳುಗಳಲ್ಲಿ ಒಂದೊಂದು ಗಿಣ್ಣಿಲ್ಲ. ಇಷ್ಟೇ ಅಲ್ಲದೆ ಆತನ ಮುಖ ಸಹ ಸ್ವಲ್ಪ ಸೊಟ್ಟ. ಮೇಲುಗಡೆ ಸಾಲಿನ ಹಲ್ಲುಗಳು ಉಬ್ಬಿಕೊಂಡಿದ್ದುದರಿಂದ ಆತ ಸದಾ ನಗುತ್ತಿರುವಂತೆ ಕಾಣುತ್ತಿತ್ತು.

ಬಫಿ ಸ್ವಲ್ಪ ಮೂಗ ಸಹ. ಹಳ್ಳಿಯವರೆಲ್ಲರೂ ಆತನನ್ನು ಮೂಗ, ಮೂಗ ಎಂದು ಕೂಗಿ ಚುಡಾಯಿಸುತ್ತಿದ್ದುದರಿಂದ ಅವನಿಗಿದ್ದ ಅಲ್ಪಸ್ವಲ್ಪ ಬುದ್ಧಿಯೂ ಹಾಳಾಯಿತು.

ಮುದುಕ ಸಫಿಗೆ ಬಫಿ ಬಗ್ಗೆ ದುಃಖವಾಗದಿದ್ದರೂ ಚಿಂತೆ ಅವಶ್ಯವಾಗಿತ್ತು. ಹೇಗಾದರೂ ಮಾಡಿ ಬಫಿಗೆ ಒಂದು ಹೆಣ್ಣು ಹುಡುಕೋದೇ ಸಫಿಗಿದ್ದ ದೊಡ್ಡ ಚಿಂತೆ. ಆ ಹಳ್ಳಿಯ ಕುಂಟ, ಕುರುಡ, ಯಾರೂ ಮದುವೆಯಾಗದೇ ಇರೋಲ್ಲ. ಮದುವೆ ಒಂದು ಸಂಸ್ಕಾರ, ಅನಿವಾರ್ಯ ಧರ್ಮ. ಮದುವೆಯ ಪರಿಣಾಮ ಏನೇ ಆಗಲಿ, ಮದುವೆ ಮಾಡದಿರುವುದು ದೊಡ್ಡ ತಪ್ಪು. ಅದು ಪಾಪ.

ಕಿರಿಯ ಮಗನ ಮದುವೆ ನೆರವೇರಿಸದೆ ಹೋದರೆ ತಂದೆ ಕರ್ತವ್ಯಚ್ಯುತನಾದಂತೆಂಬುದು ಸಫಿಯ ಅಭಿಪ್ರಾಯ. ಎಲ್ಲಿಯಾದರೂ ಒಂದು ಹೆಣ್ಣು ಹುಡುಕಲೇ ಬೇಕು. ಆದರೆ ಎಲ್ಲಿಯಾದರೂ ಎಂದು ಹೇಳಿದ ಮಾತ್ರಕ್ಕೆ ಕೆಲಸ ಆಗೋದಿಲ್ಲ. ಸಫಿಯತ್‌ನ ಸೊಸೆ ಗುಣ ಮತ್ತು ರೂಪ ಎರಡು ದೃಷ್ಟಿಯಿಂದಲೂ ಜನರಿಗೆ ಮೆಚ್ಚುಗೆಯಾಗಬೇಕು. ಬಫಿ ಮೂಗನಾದರೂ ಆತ ಸಫಿಯ ಮಗನಲ್ಲವೇ?

ಆ ಹುಡುಗಿ ಯಾರು? ಕಪಾಹಿಯ ಅಕ್ಕನ ಮಗಳು ತರಾ.

ಕಪಾಹಿ ಮೇಲಿನ ಅಪಕೀರ್ತಿ ಬಹಳ ಹಳೆ ಮಾತು. ಸಫಿಯ ಸೊಸೆ ಕಡೆ ಬೆರಳು ಮಾಡಿ ತೋರಿಸುವ ಜನ ಹಳ್ಳಿಯಲ್ಲಿ ಬಹಳ ಕಡಿಮೆ. ಬೆರಳು ಮಾಡಿ ತೋರಿಸುವವ ಒಬ್ಬನೇ ಒಬ್ಬ. ಆತನೇ ಅಪಾಪೋಲಿ ಚಂದ್ರ. ಅವನದೇ ಸ್ವಲ್ಪ ಭಯ. ಅವನಿಗೆ ಹಿಂದೂ, ಮುಸಲ್ಮಾನ್, ಹಿರಿಯರು, ಕಿರಿಯರು -ಈ ಬಗ್ಗೆ ಯಾವ ಭೇದಭಾವವೂ ಇಲ್ಲ.

ಸಫಿಯ ಗದ್ದೆಯಲ್ಲಿ ನಾಟಿ, ಕಟಾವು ಕೆಲಸ ಮಾಡಲು ಕಪಾಹಿ ಮತ್ತು ತರಾ ಹೋಗುತ್ತಾರೆ. ಸಫಿ ಮನೆಯಲ್ಲಿ ಕಪಾಹಿ ಬತ್ತ ಕುಟ್ಟುತ್ತಾಳೆ ಮತ್ತು ನೀರು ತುಂಬುತ್ತಾಳೆ. ತರಾಳನ್ನು ಬಫಿ ನೋಡಿದ್ದಾನೆ. ತರಾ ಸಹ ಅವನನ್ನು ಅಣ್ಣಾ ಎಂದು ಕರೆಯುತ್ತಾಳೆ. ಬಫಿ ನೋಡೋಕೆ ಸುಂದರವಾಗಿಲ್ಲದಿದ್ದರೂ ಆತನೂ ಒಬ್ಬ ಮನುಷ್ಯ ಅಲ್ಲವೇ?

ಹತ್ತು ಹನ್ನೆರಡು ವರ್ಷಗಳ ಮುನ್ನ ಸಫಿಯೇ ಕಪಾಹಿ ಕಡೆ ಆಕರ್ಷಿತನಾಗಿದ್ದ. ಆಕೆಯೊಡನೆ ಒಂದಿಷ್ಟು ಪ್ರೀತಿ ಸಹ ಬೆಳೆಸಿದ್ದ. ಅವಳ ಮನೆಗೆ ಹೋಗಿ ಯೋಗಕ್ಷೇಮ ವಿಚಾರಿಸುತ್ತಿದ್ದ. ಆದರೆ ಒಂದು ದಿನ ಕಪಾಹಿ ಮನೆಯಲ್ಲಿ ತನ್ನ ಮಗ ರಫಿ ಇದ್ದುದನ್ನು ನೋಡಿದ. ಅಂದಿನಿಂದ ಕಪಾಹಿ ಸಂಬಂಧ ಬಿಟ್ಟುಬಿಟ್ಟ. ತನ್ನ ಮರ್ಯಾದೆ ಯಾವ ರೀತಿ ಕಾಪಾಡಿಕೊಳ್ಳಬೇಕೆಂಬುದು ಸಫಿಗೆ ಚೆನ್ನಾಗಿ ಗೊತ್ತು.

ರಾತ್ರಿ ಹೊತ್ತು ಕಪಾಹಿ ಮನೆಗೆ ಹೋಗುವುದನ್ನು ನಿಲ್ಲಿಸದೆ ಹೋದರೆ ಮನೆಯಿಂದ ಓಡಿಸುತ್ತೇನೆಂದು ಮರುದಿನವೇ ಸಫಿ ತನ್ನ ಮಗ ರಫಿಗೆ ಎಚ್ಚರಿಕೆ ನೀಡಿದ. ತನ್ನ ತಂದೆ ಹುಲಿಯಂಥ ಮನುಷ್ಯ ಎಂಬುದು ರಫಿಗೆ ಗೊತ್ತು. ಸೋದರತ್ತೆ ಗೌರವ ಕಪಾಹಿ ಕಳೆದುಕೊಳ್ಳಲಿಲ್ಲ. ತನ್ನ ಮಗ ಬಫಿಗಾಗಿ ಸಫಿ ಒಂದೆರಡು ಕಡೆ ಹೆಣ್ಣು ನೋಡಿದ್ದ. ಆದರೆ ಯಾರೂ ಆ ಗಂಡಿನ ಹೆಸರನ್ನೂ ಕೇಳೋಕೆ ಇಷ್ಟಪಡುತ್ತಿರಲಿಲ್ಲ. ಒಬ್ಬಿಬ್ಬರು ಚೆನ್ನಾಗಿ ಬೈದು, ಹೀಯಾಳಿಸಿ ಕಳುಹಿಸಿದ್ದರು. ಆ ಒಕ್ಕಣ್ಣನಿಗೆ ತಮ್ಮ ಮಗಳನ್ನು ಕೊಡುವುದಕ್ಕಿಂತ ಆಕೆಯನ್ನು ಕತ್ತರಿಸಿ ಒಂದು ಮೂಟೆಯಲ್ಲಿ ಹಾಕಿ, ಕಟ್ಟಿ ಧನಶಿರಿಯಲ್ಲಿ ಎಸೆಯುವುದು ಮೇಲೆಂಬುದು ಕೆಲವರ ಅಭಿಪ್ರಾಯವಾದರೆ ನಮ್ಮ ಮಗಳಿಗೆ ಹೊಟ್ಟೆಗಿಲ್ಲದೆಯಿದ್ದರೆ ಇರಲಿ. ಆದರೆ ಸಫಿಯತ್‌ನ ಸೊಸೆಯಾಗಿ ಕೊಡಬಾರದೆಂದು ಮತ್ತೆ ಕೆಲವರ ಅಭಿಪ್ರಾಯವಾಗಿತ್ತು.

ಹುಡುಗನಿಗೆ ತಕ್ಕಂಥ ಹುಡುಗಿ ಹುಡುಕಬೇಕು ಎಂದು ಸಫಿಯತ್‌ಗೆ ಬುದ್ಧಿ ಬಂತು. ಈ ಮೂಗನಿಗೆ ಸ್ಫುರದ್ರೂಪಿ ಹುಡುಗಿ ತಂದು ಮದುವೆ ಮಾಡಿದರೆ ಆಕೆ ಇವನನ್ನು ನೆಮ್ಮದಿಯಿಂದ ಇರೋಕೆ ಬಿಡೊಲ್ಲ.

ಸ್ವಲ್ಪ ದಿವಸಗಳಿಂದ ತರಾ ಮೇಲೆ ಕಣ್ಣು ಬಿದ್ದಿದೆ.

ಸಫಿಯತ್‌ನ ಸೊಸೆಯಾಗಲು ತರಾ ತಕ್ಕ ಹುಡುಗಿ. ಕೊಡೋದಿಲ್ಲ ಅನ್ನುವಂತಿಲ್ಲ. ಕಪಾಹಿಯಂಥ ಬಡವೆ ಸಫಿಯ ಮಾತು ಒಪ್ಪದೆ ಇರೋದು ಹೇಗೆ? ಬಹುಶಃ ಈ ಸಂಬಂಧ

ಬೆಳೆಯಲು ನಾನು ಭಾಗ್ಯವಂತ ಎಂದೇ ಭಾವಿಸಿಯಾಳು. ಕಪಾಹಿಯ ವಿಷಯ ಯಾರಿಗೆ ತಾನೇ ಗೊತ್ತಿಲ್ಲ.?

ಹಳ್ಳಿಯಲ್ಲಿ ಸಫಿ ಬಗ್ಗೆ ಅನೇಕ ರೀತಿಯ ಟೀಕೆಟಿಪ್ಪಣಿ ನಡೆಯುತ್ತಿರುತ್ತದೆ. ಸಫಿಯತ್ ಒಬ್ಬ ಜಿಪುಣ, ಬಡ್ಡಿ ಕಾರ-ಹೀಗೆ ಅನೇಕ ರೀತಿಯ ಹೆಸರು ಅವನಿಗಿದೆ. ಕೆಲವು ವಿಷಯಗಳಂತೂ ದಂತಕಥೆಗಳಂತೆ ಜನಜನಿತವಾಗಿವೆ.

ಸುಮಾರು ನಲವತ್ತು ವರ್ಷಗಳ ಹಿಂದೆ ತನ್ನ ಮದುವೆಯಲ್ಲಿ ಸಫಿಯತ್ ಹನ್ನೆರಡು ಆಣೆ ಕೊಟ್ಟು ಒಂದು ಜೊತೆ ಜೋಡು ಕೊಂಡುಕೊಂಡಿದ್ದ. ಅವು ಇಂದಿಗೂ ಹೊಸ ಜೋಡಿನಂತಿವೆ. ಅವುಗಳನ್ನು ಒಂದು ಬಟ್ಟೆಯಲ್ಲಿ ಸುತ್ತಿ ಅಟ್ಟದ ಮೇಲೆ ಇಟ್ಟಿದ್ದಾನೆ. ಹಳ್ಳಿಯಲ್ಲಿ ಮದುವೆ ನಡೆಯುವ ಸಂದರ್ಭದಲ್ಲಿ ಹಾಗೂ ಹಬ್ಬಹರಿದಿನಗಳಲ್ಲಿ ಒಂದು ಅರ್ಧ ಗಂಟೆ ಹಾಕಿಕೊಳ್ಳುತ್ತಾನೆ. ಅನಂತರ ಅವನ್ನು ಚೆನ್ನಾಗಿ ಒರೆಸಿ ಮತ್ತೆ ಅಟ್ಟದ ಮೇಲೆ ಇಡುತ್ತಾನೆ.

ಅವನ ಮಗ ರಫಿ ತನ್ನ ಮದುವೆಯಲ್ಲಿ ಒಂದು ಜೊತೆ ಹೊಸ ಜೋಡು ಕೊಂಡುಕೊಳ್ಳಲು ಬಯಸಿದ. "ಮನೆಯಲ್ಲಿ ಒಂದು ಜೊತೆ ಜೋಡು ಇವೆ. ಅವೇ ಸಾಕು" ಎಂದು ಮುದುಕ ಗದರಿಸಿದ್ದ. ಜೋಡಿಗಟ್ಟಲೆ ಜೋಡು ಕೊಂಡುಕೊಳ್ಳಲು ಆತನಲ್ಲಿ ಹಣದ ರಾಶಿಯಿದೆಯೇ? ರಫಿ ತನ್ನ ತಂದೆಯ ಜೋಡುಗಳನ್ನೇ ಹಾಕಿಕೊಂಡು ಆನೆಯ ಮೇಲೆ ಕುಳಿತುಕೊಂಡು ಹೋಗಿ ಮದುವೆ ಮಾಡಿಕೊಂಡು ಬಂದ.

ಮತ್ತೊಂದು ವಿಷಯ. ಸಫಿಯ ಕೋಟಿಗೆ ಸಂಬಂಧಿಸಿದ್ದು.

ಹದಿನೈದು ವರ್ಷಗಳ ಹಿಂದೆಯೇ ಜಮೀನಿನ ವಿಷಯದಲ್ಲಿ ಒಂದು ಮೊಕದ್ದಮೆ ನಡೆದಿತ್ತು. ಸಫಿ ಮೊಕದ್ದಮೆಯಲ್ಲಿ ಗೆದ್ದ ಮೇಲೆ ಒಂದು ರೂಪಾಯಿ ಆರಾಣೆ ಕೊಟ್ಟು ಹರಾಜಿನಲ್ಲಿ ಒಂದು ಕೆಂಪು ಕೋಟು ಕೊಂಡಿದ್ದ. ಸುಮಾರು ಅವನ ಅಳತೆಗೆ ಸರಿಯಾಗಿತ್ತು. ಆದರೆ ಸ್ವಲ್ಪ ಸಡಿಲ. ಸಫಿಯತ್ ಎಲ್ಲಿಗಾದರೂ ಬೇರೆ ಸ್ಥಳಕ್ಕೆ ಸುತ್ತಾಡಿ ಬರಲು ಹೊರಟಾಗ, ಅದು ಪುಷ್ಯ ಮಾಸವೇ ಆಗಲಿ ಅಥವಾ ಜ್ಯೇಷ್ಠ ಮಾಸವೇ ಆಗಲಿ - ಷರಟು ಅಥವಾ ಬನೀನಿನ ಮೇಲೆ ಆ ಕೆಂಪು ಕೋಟು ಧರಿಸಿಕೊಂಡು ಹೋಗುತ್ತಿದ್ದ.

ಉಡುಪು, ಉಡುಪೇ. ಅದನ್ನು ಧರಿಸಲೇ ಬೇಕು. ಉಡುಗೆಗೂ ಚಳಿ ಮತ್ತು ಬೇಸಿಗೆಗೂ ಏನೂ ಸಂಬಂಧ?

ಕೆಂಪು ಕೋಟು ಧರಿಸಿದರೆ ಮುದುಕ ನೋಡಲು ಸುಂದರವಾಗಿ ಕಾಣುತ್ತಿದ್ದ. ಎದೆಯವರೆಗೂ ಬೆಳೆದಿರುವ ಬಿಳಿ ಗಡ್ಡ ಮತ್ತು ಆ ವಯಸ್ಸಿನಲ್ಲೂ ಗಟ್ಟಿಮುಟ್ಟಾದ ಹಲ್ಲುಗಳ ಸಾಲುಗಳಿಂದ ಕೂಡಿದ ಮುಖ ಚೆನ್ನಾಗಿ ಕಾಣುತ್ತಿತ್ತು.

ಬೇಸಿಗೆ ದಿನಗಳಲ್ಲಿ ಆತ ಕೋಟು ಧರಿಸಿದಾಗ ಸ್ವಲ್ಪ ಬೆವರು ಬರುತ್ತೆ. ಆದರೆ ಕೋಟನ್ನು ಧರಿಸಿರುವುದರಿಂದಲೇ ಬೆವರು ಬರುತ್ತದೆಂಬುದು ಅರ್ಥವಿಲ್ಲದ ಮಾತು.

ಮೂರನೆಯ ವಿಷಯ ಸಫಿಯತ್‌ನ ನಾಯಿಗಳನ್ನು ಕುರಿತದ್ದು.

ಆ ಹಳ್ಳಿಯವರಿಗೆ ನೆನಪಿರುವಂತೆ ಬಹಳ ದಿನಗಳಿಂದಲೂ ಸಫಿಯತ್‌ನ ಮನೆಯಲ್ಲಿ ನಾಯಿಗಳ ತಂಡವೇ ಇದೆ. ಬಹಳ ಚುರುಕಾದ ನಾಯಿಗಳು. ಯಾರಿಗೂ ಅವುಗಳ ಮರಿಗಳನ್ನು ಕೊಡುವುದಿಲ್ಲ. ಕೊಟ್ಟರೆ ತಳಿ ಹಾಳಾಗುತ್ತೆ. ಯಾವ ಕಳ್ಳ ಸಹ ಆ ಮನೆ ಕಡೆ ಕಣ್ಣೆತ್ತಿ ಸಹ

ನೋಡುವುದಿಲ್ಲ.

ನಾಯಿ ಅಲ್ಲ. ಹುಲಿ.

ತನ್ನ ನಾಯಿಗಳನ್ನು ಕಂಡರೆ ಮುದುಕನಿಗೆ ತುಂಬಾ ಸ್ನೇಹ. ತನ್ನ ಊಟದ ತಟ್ಟೆಯಿಂದ ಒಂದು ಹಿಡಿ ಅನ್ನ ನಾಯಿಗಳಿಗೆ ಹಾಕದೆ ಹೋದರೆ ಆತನ ಹಸಿವೇ ಹಿಂಗುವುದಿಲ್ಲ. ಮುದುಕನ ಬಗ್ಗೆ ನಾಯಿಗಳಿಗೂ ಬಹಳ ಭಕ್ತಿ. ಅವನು ಎಲ್ಲಿ ಸಿಕ್ಕಿದರೂ ಎರಡು ನಾಯಿಗಳು ಅವನನ್ನು ಹಿಂಬಾಲಿಸಿಯೇ ಹೋಗುತ್ತವೆ. ಆದರೆ ಮುದುಕ ನಾಯಿಗಳನ್ನು ಕೈಯಿಂದ ಮುಟ್ಟುವುದಿಲ್ಲ. ನಾಯಿಗಳು ಕೊಳಕು ಮತ್ತು ಅಪವಿತ್ರ. ನಾಯಿಗಳನ್ನು ಮುಟ್ಟಿದರೆ ನಮಾಜು ವ್ರತಭಂಗವಾಗುತ್ತದೆ. ಆಗ ನಮಾಜು ಮಾಡಲು ಅಡ್ಡಿಯಾಗುತ್ತದೆ. ಆದರೆ ಯಾರಾದರೂ ಹಳ್ಳಿಯಲ್ಲಿ ಔತಣವೇರ್ಪಡಿಸಿದರೆ ಸಫಿಯತ್ ಆ ಮನೆಯ ಯಜಮಾನರನ್ನು ಕೇಳಿ ಮನೆಯಲ್ಲಿರೋ ಜನರಿಗೆ ಊಟ ತೆಗೆದುಕೊಂಡು ಬರೋ ಹಾಗೆ ಅನ್ನ ಮತ್ತು ಮಾಂಸವನ್ನು ಒಂದು ಪೊಟ್ಟಣದಲ್ಲಿ ಕಟ್ಟಿಕೊಂಡು ಮನೆಗೆ ಬಂದು, ಅದನ್ನು ತಾನೇ ನಾಯಿಗಳಿಗೆ ತಿನ್ನಿಸುತ್ತಾನೆ. ನಾಯಿಗಳ ಮೇಲೆ ತೋರಿಸುವಷ್ಟು ಪ್ರೀತಿಯನ್ನು ಮೊಮ್ಮಕ್ಕಳ ಮೇಲೆ ತೋರಿಸುತ್ತಿರಲಿಲ್ಲ.

ನಾಲ್ಕನೆಯ ವಿಷಯ ಸಫಿಯತ್ ತೋಟದಲ್ಲಿರುವ ಸಿಹಿ ಮಾವು.

ಅವುಗಳಲ್ಲಿ ಕೆಲವನ್ನು ಸಫಿಯತ್ ತಂದೆ ನೆಟ್ಟಿದ್ದರು. ಕೆಲವನ್ನು ಮಾತ್ರ ಮುದುಕನೇ ನೆಟ್ಟಿದ್ದ. ನಿಜಕ್ಕೂ ಒಳ್ಳೆಯ ಹಣ್ಣು. ರಸವತ್ತಾದ ಹಣ್ಣು. ಬೆಲ್ಲದಷ್ಟು ಸಿಹಿ. ಮಾಗುವ ಮುನ್ನವೇ ಅಥವಾ ಮಾಗಿದ ಮೇಲೆ ತಿನ್ನಬಹುದಾದ ಜಾತಿಯವೂ ಇವೆ. ಮುದುಕನ ತೋಟದಲ್ಲಿರುವಂಥ ಒಳ್ಳೆಯ ಜಾತಿಯ ಮಾವಿನ ಮರಗಳು ಆ ಹಳ್ಳಿಯಲ್ಲಿ ಮೂರೋ ನಾಲ್ಕೋ ಇವೆ.

ಮಾವಿನ ಹಣ್ಣಿನ ಕಾಲದಲ್ಲಿ ಯಾರಾದರೂ ಆತನ ಮನೆಗೆ ಹೋದರೆ ಆ ಮುದುಕ ತನ್ನ ತೋಟದ ಹಣ್ಣನ್ನು ಕೊಟ್ಟು ಇಲ್ಲೇ ತಿನ್ನಬೇಕೆಂದು ಒತ್ತಾಯಪಡಿಸುತ್ತಾನೆ. ಆದರೆ ತಿನ್ನುವಾಗ ಮಾತ್ರ ಎದುರಿಗೆ ಕುಳಿತಿರುತ್ತಾನೆ. ಯಾರಿಗೂ ವಾಟೆ ತೆಗೆದುಕೊಂಡು ಹೋಗಲು ಅವಕಾಶ ಕೊಡುವುದಿಲ್ಲ. ವಾಟೆ ತೆಗೆದುಕೊಂಡು ಹೋದರೆ ಅದರ ತಳಿಯೇ ಹೋದಂತೆ. ಊಟಕ್ಕೆ ಅನ್ನ ಕೈಯಿಂದಲೇ ಬಡಿಸುತ್ತಾರೆ. ಆದರೆ ಅದರ ಜೊತೆಯಲ್ಲಿ ಬೆರಳನ್ನೂ ಕೊಡುತ್ತಾರೆಯೇ? ವಾಟೆ ಕೊಡಲಾಗುವುದಿಲ್ಲ. ವಾಟೆ ಹೋದರೆ ಲಕ್ಷ್ಮಿಯೇ ಹೋದ ಹಾಗೆ.

ಆದರೆ ಬೇರೆಯವರ ಮನೆಯಲ್ಲಿ ಒಳ್ಳೆಯ ಹಣ್ಣಿನ ಬೀಜ ಸಿಕ್ಕಿದರೆ ಮುದುಕ ಖಂಡಿತ ಅದನ್ನು ತಂದು ತನ್ನ ತೋಟದಲ್ಲಿ ನೆಡುತ್ತಾನೆ. ಮಾವಿನ ವಾಟೆ, ಹಲಸಿನ ಹಣ್ಣಿನ ಬೀಜ, ದಾಳಿಂಬೆ ಹಣ್ಣಿನ ಬೀಜ ಅಥವಾ ಯಾವ ಹಣ್ಣಿನ ಬೀಜವಾದರೂ ಸರಿ. ಮುದುಕನ ಕೈಗುಣ ಲಕ್ಷ್ಮೀಯ ಸದೃಶ. ಯಾವ ಬಂಜರು ಭೂಮಿಯಲ್ಲಿ ನೆಟ್ಟರೂ ಅಲ್ಲೇ ಬೆಳೆದು ಫಲ ಕೊಡುತ್ತದೆ.

ಮದುವೆಯಾಗುವ ಮುನ್ನ ಗಡ್ಡ ಬಿಡುವುದರ ಬಗ್ಗೆ ರಫಿ ತನ್ನ ತಂದೆಯೊಡನೆ ಜಗಳ ಮಾಡಿದ್ದ. ಆದರೆ ಸಫಿಯ ಒಂದು ಗುಟುರು ಆತನ ಬಾಯಿಗೆ ಬೀಗ ಹಾಕಿತ್ತು.

ದಿನವೂ ಕ್ಷೌರ ಮಾಡಿಕೊಂಡು ಹೆಂಗಸಿನ ಮುಖದಂತೆ ನುಣ್ಣಗೆ ಮಾಡಿಕೊಂಡು ಸುತ್ತಾಡಲು ನಾಚಿಕೆಯಾಗುವುದಿಲ್ಲವೇ? ನಿನ್ನ ಸಂಪಾದನೆಯಾದರೂ ಏನು? ಒಂದು ಕ್ಷೌರದ

ಕತ್ತಿಗೆ ಎರಡು ರೂಪಾಯಿ ಬೆಲೆ. ನಿತ್ಯ ಕ್ಷೌರ ಮಾಡಿಕೊಳ್ಳುತ್ತಿದ್ದರೆ ಎರಡು ರೂಪಾಯಿನ ಕ್ಷೌರದ ಕತ್ತಿ ಎಷ್ಟು ದಿನ ಬರುತ್ತೆ? ಹೆಚ್ಚೆಂದರೆ ಮೂರು ವರ್ಷ ಬರಬಹುದು. ಪ್ರತಿ ಸಲವೂ ಎರಡು ಆಣೆ ಕೊಟ್ಟು ಕ್ಷೌರ ಮಾಡಿಸಲು ಅಷ್ಟೊಂದು ದುಡ್ಡು ಎಲ್ಲಿಂದ ತರೋದು. ಗಡ್ಡ ಬಿಡು - ಅದು ಅಲ್ಲಾನ ಜ್ಯೋತಿ.

ಮದುವೆ ಗಂಡಾಗಿ ಹೊರಡುವ ದಿನ ಸಹ ರಫಿ ಗಡ್ಡಕ್ಕೆ ಕ್ಷೌರದ ಕತ್ತಿ ಸೋಕಿಸಿರಲಿಲ್ಲ. ಕತ್ತರಿಯಿಂದ ಮಾತ್ರ ಕತ್ತರಿಸಿಕೊಂಡಿದ್ದ.

ಡಾಲಿಮ್ ಹಳ್ಳಿಯಲ್ಲಿ ಕ್ಷೌರದವನಿರಲಿಲ್ಲ. ಇಡೀ ಹಳ್ಳಿಗೆ ಕೇವಲ ಐದು ಕತ್ತರಿಗಳಿವೆ. ಅವುಗಳಲ್ಲಿ ಕನಬಾಪ್ ದರ್ಜಿಯ ಕತ್ತರಿ ಚೆನ್ನಾಗಿದೆ, ಹರಿತವಾಗಿದೆ. ಆದರೆ ಅದನ್ನು ಬಟ್ಟೆ ಕತ್ತರಿಸಲು ಮಾತ್ರ ಉಪಯೋಗಿಸಲಾಗುತ್ತಿತ್ತು. ಕೂದಲು ಕತ್ತರಿಸಲು ಉಪಯೋಗಿಸುತ್ತಿರಲಿಲ್ಲ. ಕೆಲವು ಸಾರಿ ಮುಚ್ಚುಮರೆಯಲ್ಲಿ ಒಬ್ಬಿಬ್ಬರು ಅದರಿಂದ ಕೂದಲು ಕತ್ತರಿಸುತ್ತಿದ್ದರು. ಹಳ್ಳಿಯ ಸುಮಾರು ಪ್ರತಿಯೊಬ್ಬ ತರುಣನಿಗೂ ಕೂದಲು ಕತ್ತರಿಸುವ ವಿಧಾನ ಗೊತ್ತು. ಅವರಲ್ಲಿ ಒಬ್ಬಿಬ್ಬರು ಬಹಳ ಕುಶಲರೆಂದು ಪ್ರಸಿದ್ಧಿ ಪಡೆದಿದ್ದರು. ಬಹಳ ಅಚ್ಚುಕಟ್ಟಾಗಿ ಕತ್ತರಿಸುತ್ತಿದ್ದರು.

ಒಬ್ಬರ ಮನೆಯ ಕತ್ತರಿ, ಇನ್ನೊಬ್ಬರ ಮನೆಯ ಬಾಚಣಿಗೆ, ಮತ್ತೊಬ್ಬರ ಮನೆಯ ಕ್ಷೌರದ ಕತ್ತಿ ತಂದು ಮಗದೊಬ್ಬ ಮನೆಯವರ ಜಗಲಿಯ ಮೇಲೆ ಗೋಡೆಗಳೇ ಇಲ್ಲದ ಆವರಣದಲ್ಲಿ ಕುಳಿತು ಕ್ಷೌರ ಮಾಡಿಕೊಳ್ಳುತ್ತಿದ್ದರು. ಅಚ್ಚುಕಟ್ಟಾಗಿ ಕೂದಲು ಕತ್ತರಿಸುವ ತರುಣನ ಬಗ್ಗೆ ಎಲ್ಲರಿಗೂ ಗೌರವ. ಆದರೆ ಮಾಘ, ಫಾಲ್ಗುಣ, ಚೈತ್ರ, ಆಶ್ವೀಜ ಮತ್ತು ಕಾರ್ತಿಕ ಮಾಸಗಳಲ್ಲಿ ಕ್ಷೌರ ಮಾಡಿಕೊಳ್ಳುತ್ತಿದ್ದರು. ಸಾಮಾನ್ಯವಾಗಿ ಬೇಸಾಯದ ಕಾಲದಲ್ಲಿ ಒಂದೆರಡು ತಿಂಗಳು ಕ್ಷೌರ ಮಾಡಿಕೊಳ್ಳದಿದ್ದರೆ ಅದೇನೂ ಅಸ್ವಾಭಾವಿಕ ಅಲ್ಲ. ತರುಣರ ಮುಖದಲ್ಲಿ ಗಡ್ಡ ಬೆಳೆಯುವುದೇನೂ ಆಶ್ಚರ್ಯದ ಮಾತಲ್ಲ.

ತರಾಳಿಗೆ ಮದುವೆ ಮಾಡುವ ಉದ್ದೇಶದಿಂದ ರಪಾಹಿ ಆ ಹಳ್ಳಿಯ ಮೂರು ನಾಲ್ಕು ಮಂದಿ ತರುಣರನ್ನು ದೃಷ್ಟಿಯಲ್ಲಿಟ್ಟುಕೊಳ್ಳದೇ ಇಲ್ಲ. ಕೆಲವು ತರುಣರು ಯಾರ ಕಣ್ಣಿಗೂ ಬೀಳದಂತೆ ರಪಾಹಿಯ ಮನೆಗೆ ಹೋಗಿ ಉಪಹಾರ ತಿಂದು ಬರೋದು ಎಲೆ ಅಡಿಕೆ ಹಾಕಿಕೊಳ್ಳೋದು ವಾಡಿಕೆ. ಆದರೆ ರಪಾಹಿ ಚತುರಳು. ಯಾರಿಗೂ ಸುಳಿವು ಕೊಟ್ಟಿಲ್ಲ. ಯಾರಿಗೂ ಮಾತು ಕೊಟ್ಟಿಲ್ಲ.

ತರಾಳ ಮನಸ್ಸನ್ನು ಆಕೆ ಸರಿಯಾಗಿ ಅರ್ಥ ಮಾಡಿಕೊಂಡಿಲ್ಲ.

ವಯಸ್ಸಿಗೆ ಬಂದ ಹುಡುಗಿಯ ಮನಸ್ಸನ್ನು ಸಹಜವಾಗಿ ಅರ್ಥಮಾಡಿಕೊಳ್ಳುವುದು ಕಷ್ಟ. ರಪಾಹಿಗೆ ಸಫಿಯತ್ ಚೆನ್ನಾಗಿ ಗೊತ್ತು. ಮೊದಲಿಗೆ ಸಫಿ ಅವಳನ್ನು ಪ್ರೀತಿಸುತ್ತಿದ್ದ. ಆದರೆ ಈಗ ತರಾ ಬಗ್ಗೆ ಆತನಿಗೆ ಮಮತೆ. ಈಗ ಆತ ತನ್ನನ್ನು ಪ್ರೀತಿಸುವುದಿಲ್ಲವೆಂಬುದು ರಪಾಹಿಗೆ ಗೊತ್ತು. ಯಾರಾದರೂ ಸರಿಯಾದ ಗಂಡು ಸಿಗದಿದ್ದರೆ ಕೊನೆಗೆ ತರಾಳನ್ನು ಬಫಿಗೆ ಕೊಟ್ಟು ಮದುವೆ ಮಾಡುವ ಬಗ್ಗೆ ರಪಾಹಿಗೇನೂ ಅಂಥ ವಿಶೇಷ ಪಶ್ಚಾತ್ತಾಪವಿಲ್ಲ. ಸಫಿಯತ್ ಮನೆಯಲ್ಲಿ ತರಾ ಸುಖವಾಗಿಯೇ ಇರುತ್ತಾಳೆ. ಆದರೆ ಬಫಿಯು ತರಾಳಿಗೆ ಯೋಗ್ಯವಾದ ವರನಲ್ಲವೆಂಬುದನ್ನೂ ರಪಾಹಿ ಅರಿತಿದ್ದಾಳೆ. ಬಡವರು ಇಷ್ಟೆಲ್ಲಾ ಯೋಚನೆ ಮಾಡಿದರೆ ಅವರ ಕೆಲಸ ಹೇಗೆ ಕೈಗೂಡುತ್ತದೇ? ಗಂಡಿದ್ದರೆ ಹೆಣ್ಣು ತರಬೇಕು. ಹೆಣ್ಣಿದ್ದರೆ ಬೇರೆ ಮನೆಗೆ

ಕೊಡಬೇಕು.

ಆಗಿಂದಾಗ್ಗೆ ಯಾವುದಾದರೂ ವಸ್ತುಗಳ ನೆಪದಲ್ಲಿ ಅಥವಾ ಏನಾದರೂ ಕೊಟ್ಟು ಬಾ ಎಂದು ಸಳಿಯತ್ ತನ್ನ ಮಗ ಬಳಿಯನ್ನು ಕಪಾಹಿಯ ಮನೆಗೆ ಕಳುಹಿಸುತ್ತಾನೆ. ಬಳೀ ಕಂಡ ಕೂಡಲೇ ತರಾ ಹಿತ್ತಲ ಕಡೆ ಓಡಿ ಹೋಗುತ್ತಾಳೆ. ಕಪಾಹಿ ಅಡಕೆಲೆ-ಗಿಡಕೆಲೆ ಕೊಟ್ಟು ಗಂಟೆಗಟ್ಟಲೆ ಅವನೊಡನೆ ಕಾಡುಹರಟೆ ಕೊಚ್ಚುತ್ತಾಳೆ. ಅವನು ಹೊರಟುಹೋದ ಮೇಲೆ ತರಾ ರೇಗಿಕೊಂಡು ಹೇಳುತ್ತಾಳೆ- "ಅವನ ಮುಖ ನೋಡಲು ನನಗೆ ಇಷ್ಟವಿಲ್ಲ. ಹಲ್ಲು ಬಿಟ್ಟುಕೊಂಡು ಬೇರೆ ನಗ್ತಾನೆ."

ಕಪಾಹಿ ಏನೂ ಉತ್ತರ ಕೊಡುವುದಿಲ್ಲ.

ಹೆಣ್ಣಿನ ಭಾಗ್ಯ ಮತ್ತು ಆಳವಾದ ನೀರಿಗೆ ಎಸೆದ ಗಾಳ ಎರಡೂ ಒಂದೇ! ಪಾಲಿಗೆ ಏನು ಬರುತ್ತೋ ಯಾರಿಗೆ ಗೊತ್ತು?

ತನ್ನನ್ನು ನೋಡುವ ನೆಪದಿಂದ ಮನೆಗೆ ಆಗಿಂದಾಗ್ಗೆ ಬಳಿ ಬರುತ್ತಿದ್ದಾನೆಂಬುದು ತರಾಗೆ ಚೆನ್ನಾಗಿ ಗೊತ್ತು. ಅದರಿಂದ ಅವಳಿಗೆ ಮತ್ತಷ್ಟು ಸಿಟ್ಟು. ಯಾಕೆ? ಗುಲಬ್ ಬಂದರೆ ಆಕೆಗೆ ಸಿಟ್ಟಿಲ್ಲ. ಆತನನ್ನು ಕಂಡರೆ ಆಕೆಗೆ ಮೆಚ್ಚುಗೆ. ಗುಲಬ್ ಹೆಚ್ಚು ಮಾತನಾಡುವುದಿಲ್ಲ; ಹೆಚ್ಚಿಗೆ ಹೊತ್ತು ಕುಳಿತುಕೊಳ್ಳುವುದೂ ಇಲ್ಲ. ಏನೂ ತಿಳಿಯದವನಂತೆ ನಟಿಸುವುದೂ ಇಲ್ಲ. ನಿಜಕ್ಕೂ ಆತನೇ ತಕ್ಕ ವರ. ಆದರೆ ಬಡವ. ಧನಿಕರ ಪರಿವಾರ ಸಹ ಎಷ್ಟಿವೆ? ಎಲ್ಲರೂ ಬಡವರೇ. ತರುಣ. ಜೊತೆಗೆ ಜಮೀನು ಅಬಾದು ಮಾಡುತ್ತಿದ್ದಾನೆ. ಮನೆಮಠ ಕಟ್ಟುತ್ತಿದ್ದಾನೆ. ಕೊನೆಯ ತನಕ ಬಡವನಾಗಿಯೇ ಇರೋದಿಲ್ಲಾ. ಗುಲಬ್ ಸಹ ಒಂದು ದಿನ ಧನಿಕನಾಗುತ್ತಾನೆ.

ಆ ಮೂರ್ಖನನ್ನು ನೋಡಲು ನನಗೆ ಇಷ್ಟವಿಲ್ಲ.

ಕಪಾಹಿಯ ಆಶಯ ತರಾಳಿಗೂ ಅರ್ಥವಾಗುತ್ತಿಲ್ಲ. ಆದರೆ ಕಪಾಹಿ ಸದಾ ಏನೋ ಯೋಚಿಸುತ್ತಿರುವಂತೆ ಕಾಣುತ್ತಾಳೆ. ಏನನ್ನೋ ಸಾಧಿಸಲು ಹವಣಿಸುತ್ತಿದ್ದಾಳೆ.

ಬಹುಶಃ ಕಪಾಹಿಗೆ ತನ್ನ ಮನಸ್ಸಿನಲ್ಲಿರೋ ವಿಚಾರವೇ ಅರ್ಥವಾಗುತ್ತಿಲ್ಲ. ಸೂಕ್ತ ರೀತಿಯಲ್ಲಿ ಯೋಚಿಸುವುದೂ ಆಕೆಗೆ ಗೊತ್ತಿಲ್ಲ. ಹೊಟ್ಟೆಬಟ್ಟೆ ಮತ್ತು ತರಾಳ ಬಗ್ಗೆ ಯೋಚಿಸುತ್ತಿರುತ್ತಾಳೆ. ಅಷ್ಟೇ.

ಚಂದ್ರ ಸಹ ಆಗಾಗ್ಗೆ ಕಪಾಹಿಯ ಮನೆಗೆ ಬರುತ್ತಿರುತ್ತಾನೆ. ಆತನನ್ನು ಕಂಡರೆ ಕಪಾಹಿಗೂ ಭಯ. ಆದರೆ ಅವನೊಡನೆ ಸ್ನೇಹ ಇದೆ. ಆತ ನಿರ್ಭೀತ ವ್ಯಕ್ತಿ. ಥಟ್ಟುಮಸ್ತಾಗಿದ್ದಾನೆ. ಅವನು ತರಾಳನ್ನು ಕೇಳಿ ಟೀ ಮಾಡಿಸಿಕೊಂಡು ಕುಡಿಯುತ್ತಾನೆ. ಕೆಲವು ಸಾರಿ ಬೆನ್ನಿನಲ್ಲಿ ಬೆವರುಸಾಲೆ ಎಂದು ಹೇಳಿ ತರಾಳಿಂದ ಉಜ್ಜಿಸಿಕೊಳ್ಳುತ್ತಾನೆ. ಎಂಥ ಹುಚ್ಚ. ತನ್ನವರು, ಪರರು ಎಂಬ ಭೇದಭಾವವೇ ಆತನಿಗಿಲ್ಲ. ಅವನು ತರಾಳ ಜೊತೆಯಲ್ಲಿ ಮಧ್ಯಮಧ್ಯೆ ಇಂಗ್ಲೀಷಿನಲ್ಲೇ ಮಾತಾಡುತ್ತಾನೆ. ಏನು ಹೇಳುತ್ತಾನೋ ಯಾರಿಗೆ ಗೊತ್ತು? ಒಂದು ವೇಳೆ ಕೆಟ್ಟ ಮಾತಾಡಿದರೂ ಅರ್ಥವಾಗುವುದಿಲ್ಲ. ತರಾಳಂತೂ ತಕ್ಕ ಉತ್ತರ ಕೊಡುತ್ತಾಳೆ. ಕಪಾಹಿಗೆ ಅಂಜಿಕೆಯಾದರೂ ಚಂದ್ರ ಕೆಟ್ಟವನು ಅನ್ನಿಸುವುದಿಲ್ಲ. ಆ ಬಡಪಾಯಿ ಎಂದಾದರೊಮ್ಮೆ ತುಂಬಾ ಉಪಕಾರ ಮಾಡುವ ವ್ಯಕ್ತಿ.

ತರಾ ಸಹ ಚಂದ್ರನನ್ನು 'ಚಂದ್ರಣ್ಣಾ' ಎಂದೇ ಕೂಗುತ್ತಾಳೆ. ಸಲಿಗೆಯಿದೆ. ಬಹಳ ಸಲಿಗೆ.

ಒಂದು ದಿನ ಕಪಾಹಿಯ ಎದುರುಗಡೆಯೇ ತರಾಳನ್ನು ಕೇಳಿದ - "ಹೇ ತರಾ, ನಾನು ಒಬ್ಬ

ಒಳ್ಳೆಯ ಗಂಡನ್ನು ಹುಡುಕ್ತೀನಿ. ನೀನು ಮದುವೆ ಮಾಡಿಕೊಳ್ತೀಯಾ?"

ನಾಚಿಕೆಯಿಂದ ಸಿಟ್ಟು ಮಾಡಿಕೊಂಡು ಹೇಳಿದಳು - "ಥೂ ಹೋಗು. ಏನೇನೋ ಮಾತಾಡ್ತೀಯೆ. ನಾಚಿಕೆಯಾಗುವುದಿಲ್ಲವೆ ? ನಿನ್ನ ಜೊತೆಯಲ್ಲಿ ಇನ್ನು ಮಾತೇ ಆಡುವುದಿಲ್ಲ."

ಚಂದ್ರು ಸಹ ಗಹಗಹಿಸಿ ನಕ್ಕ.

"ನಾಚಿಕೆ ಪಟ್ಟುಕೊಳ್ಳುವಂಥ ಮಾತು ನಾನು ಏನು ಹೇಳಿದೆ. ಹಾಗಾದರೆ ಇದರ ಅರ್ಥ ಮ್ಯಾರೇಜ್ ಆಗೋದೆ ಇಲ್ಲ ಅಂತ ಆಯಿತು. ಯಾರ ಜೊತೆಯಲ್ಲಾದರೂ ಪರಾರಿಯಾಗೋ ಉಪಾಯ ಯೋಚಿಸುತ್ತಿದ್ದೀಯೇನು? ಓಡಿ ಹೋದರೆ ನಿನ್ನ ಸಾಯಿಸೇ ಬಿಡ್ತೀವಿ. ನಿನಗೊಂದು ಮದುವೆ ಮಾಡಿಸ್ತೀನಿ. ಅರ್ಥವಾಯಿತೇ ನಿನ್ನ ಮದುವೆಯಲ್ಲಿ ನಾನು ಏನು ಉಡುಗೊರೆ ಕೊಡ್ತೀನಿ ಅಂತ ಗೊತ್ತೇ? ಒಂದು ಜೊತೆ ಸ್ಯಾಂಡಲ್. ಗೊತ್ತಾಯಿತೇ? ಯಾವಾಗಲಾದರೂ ಸ್ಯಾಂಡಲ್ ಹಾಕಿಕೊಂಡಿದ್ದೀಯಾ?"

ತರಾ ಮುಖ ನಾಚಿಕೆಯಿಂದ ಕೆಂಪೇರಿತು. ಸ್ಯಾಂಡಲ್ ಹಾಕಿಕೊಂಡು ಮದುವೆ ಆಗೋದು ನಾಚಿಕೆಗೇಡು. ಸ್ಯಾಂಡಲ್ ಹಾಕಿಕೊಂಡು ನಡೆಯೋದು ಹೇಗೆ?

ಕಪಾಹಿ ಹೇಳಿದಳು - "ಬರಿ ಮಾತಿನಿಂದ ಏನು ಪ್ರಯೋಜನ? ನಿನ್ನ ತಂಗಿಗೆ ಒಬ್ಬ ಒಳ್ಳೆಯ ಗಂಡು ಹುಡುಕಿ ಕೊಟ್ಟರೆ ಸೈ ಅನ್ನಬಹುದು."

ಈ ಮಾತು ತರಾ ಎದುರಿನಲ್ಲಿಯೇ ಹೇಳಿದಳು. ತರಾ ಭಾವಪರವಶಳಾಗಿ ಆಶಾಪೂರ್ಣ ದೃಷ್ಟಿಯಿಂದ ಚಂದ್ರನ ಕಡೆಗೆ ನೋಡಿದಳು.

ಚಂದ್ರು ದೃಢ ಆಶ್ವಾಸನೆ ನೀಡಿದ.

"ಸೋದರತ್ತೆ, ಸಿಯರ್‌ಲಿ (ಶೂರ್ಲಿ) ಅಂತ ತಿಳಿದುಕೊ. ಅನಂತರ ಆಗೋದಿಲ್ಲ ಅಂತ ಹೇಳಬೇಡ. ಬ್ಯೂಟಿಫುಲ್ ಯಂಗ್ ಮ್ಯಾನ್. ಗೊತ್ತಾಯಿತೇ? ಸ್ವಲ್ಪ ನೀವು ವೈಟ್ ಮಾಡಿ. ಏನು ಯೋಚಿಸುತ್ತಿರುವಂತಿದೆ? ವಾಟ್ ಈಜ್ ಯು ಥಿಂಕ್ ಚಂದ್ರು."

ಚಂದ್ರು ಹೊರಟು ಹೋದ.

ತರಾಳ ಮನಸ್ಸಿನಲ್ಲಿ ಆಶೆ ಮೂಡಿತು.

ಕಪಾಹಿ ಏನೇನೋ ಯೋಚಿಸತೊಡಗಿದಳು. ಚಂದ್ರು ಗಂಡು ಹುಡುಕಿದರೂ ಹುಡುಕ ಬಹುದು. ಆತ ನಟ್ಟಿರುಳಿನಲ್ಲೂ ಎರಡು ಮೈಲಿ ದೂರದಿಂದ ಸೀಮೆಎಣ್ಣೆ ತರಬಲ್ಲ ಭೂಪ. ಅವನ ನೆರವಿನಿಂದ ತರಾಳಿಗೆ ಒಳ್ಳೆಯ ಗಂಡು ಸಿಕ್ಕಿದರೂ ಸಿಗಬಹುದು. ಯಾರಿಗೆ ಗೊತ್ತು? ಈಗ ಏನೂ ಹೇಳಲಾಗುವುದಿಲ್ಲ.

## ಏಳು

ಹುಣ್ಣಿಮೆಯ ಬೆಳದಿಂಗಳು. ಶುದ್ಧ ಶುಭ್ರ ಬೆಳದಿಂಗಳು ಎಲ್ಲೆಲ್ಲೂ ಚೆಲ್ಲಿದೆ. ಧನಶಿರಿಯ ನೀರಿನ ಮೇಲೆ ಬೆಳದಿಂಗಳ ಕಾಂತಿ ಕಂಗೊಳಿಸುತ್ತಿದೆ.

ಉತ್ತರ ದಿಕ್ಕಿನ ಕಡೆಗೆ ಬೀಸುವ ಗಾಳಿ ಕಾಡಿನ ಮಧ್ಯೆ ಹಾದು ಹೋಗುತ್ತಿದೆ. ಜೇನುತುಪ್ಪದ ಕಂಪು ವಾಯುವಿನೊಡನೆ ಕೂಡಿ ಹರಡುತ್ತಿದೆ.

ಟವಲಿನಿಂತ ಸುತ್ತಿರುವ ಮಣ್ಣಿನ ಗಡಿಗೆಯೊಂದನ್ನು ಹೆಗಲಿಗೆ ನೇತು ಹಾಕಿದ್ದಾನೆ. ಅದು ಮೂರು ಸೇರು ತುಂಬುವಷ್ಟು ಗಾತ್ರ ಇದೆ. ಆತನ ಹತ್ತಿರ ಕಾಡಿನ ಮರಗಳನ್ನು ಕಡಿಯಲು ಬಳಸುವ ಉದ್ದನೆಯ ಕಾವಿರುವ ಒಂದು ಕೈಗೊಡಲಿಯಿದೆ. ಕೈಯಲ್ಲಿ ಹೊತ್ತಿಸದಿರುವ ಒಂದು ದೀಪ ಇದೆ. ಗುಲಬ್ ಬೀಡಿ ಸೇದುತ್ತಿದ್ದಾನೆ.

ನದಿಯ ದಡದ ಸಣ್ಣ ದಾರಿಯಲ್ಲಿ ಗುಲಬ್ ಹೋಗುತ್ತಿದ್ದಾನೆ. ಜೇನುಗೂಡು ಕೀಳಬೇಕಾಗಿದೆ. ಹಗಲು ಹೊತ್ತಿನಲ್ಲೇ ಆತ ಎಲ್ಲ ಸಿದ್ಧತೆ ಮಾಡಿಟ್ಟಿದ್ದ. ಸಾಯಂಕಾಲವಾಗುವುದನ್ನೇ ಕಾಯುತ್ತಿದ್ದ. ಕೊನೆಗೆ ಸಾಯಂಕಾಲ ಆಯಿತು. ಆತ ಹೊರಟ. ಭೀಮನ ಮನೆಗೆ ಹೋಗಿ ಅವನನ್ನು ಕರೆದುಕೊಂಡು ಹೋಗುತ್ತಾನೆ.

ಆತನ ಮನಸ್ಸು ಆನಂದದಿಂದ ತುಂಬಿ ತುಳುಕಾಡುತ್ತಿತ್ತು.

ಕನಿಷ್ಠ ಪಕ್ಷ ಹತ್ತು ಸೇರು ಜೇನುತುಪ್ಪ ಸಿಗುತ್ತದೆ. ಮಾರಾಟ ಮಾಡಿದರೂ ಸ್ವಲ್ಪ ದುಡ್ಡು ಸಿಗುತ್ತೆ. ಇಲ್ಲದಿದ್ದರೆ ತಿನ್ನಲು ಸಾಕಷ್ಟು ಸಿಗುತ್ತೆ. ಕೈಯ್ಯಾರೆ ಕಿತ್ತ ಜೇನುತುಪ್ಪದ ಸವಿಯೇ ಬೇರೆ.

ನದಿಯ ದಡದಲ್ಲೇ ಭೀಮನ ಮನೆಗೆ ಹೋಗಲು ಕಾಲುದಾರಿಯಿದೆ. ಆತನ ಮನೆಯಿಂದ ಸುಮಾರು ಒಂದು ಮೈಲಿ ದೂರ. ಆದರೆ ಹಳ್ಳಿಯವರು ಯಾರೂ ಈ ದೂರವನ್ನು ಒಂದು ಮೈಲಿ ಎಂದು ಭಾವಿಸುವುದಿಲ್ಲ. ಎಷ್ಟೋ ಸಾರಿ ಒಂದು ವೀಳ್ಯದೆಲೆಗಾಗಿ ಹಳ್ಳಿಯವರು ಇಲ್ಲಿಂದ ಅಲ್ಲಿಯವರೆಗೂ ಹೋಗುತ್ತಾರೆ. ಎರಡೂ ಮೈಲಿಗಿಂತಲೂ ಜಾಸ್ತಿ.

ಜೇನುಗೂಡನ್ನು ಆದಷ್ಟು ಬೇಗ ಕಿತ್ತು ತಂದರೆ ಮೇಲು. ಜೇನುಗೂಡು ಪಕ್ವವಾದರೆ ಜೇನುಹುಳು ಕಚ್ಚುವುದಿಲ್ಲ. ಜೇನುತುಪ್ಪ ತೆಗೆದುಕೊಂಡು ಹೋಗಿ ಮನೆಯಲ್ಲಿಟ್ಟು ಊಟ ಮಾಡಿಕೊಂಡು ಕಪಾಹಿ ಅಕ್ಕನ ಮನೆಗೆ ಹೋಗುತ್ತಾನೆ. ಆದರೆ ಅಂದು ತರಾ ಮನೆಯಲ್ಲಿದ್ದರೆ ಮೇಲಾಗಿತ್ತು. ಜೇನುತುಪ್ಪ ಅವಳ ಕೈಯಲ್ಲಿಯೇ ಕೊಟ್ಟಿದ್ದರೆ ಆತನ ಮನಸ್ಸಿಗೆ ತೃಪ್ತಿ.

ತರಾ ಇಲ್ಲದಿದ್ದರೂ ಪರವಾಗಿಲ್ಲ. ಈವೊತ್ತು ಮನೆಯಲ್ಲಿ ಕಪಾಹಿ-ಅಕ್ಕ ಒಬ್ಬಳೇ ಇರುತ್ತಾಳೆ. ಆತ ಇಂದು ನಾಚಿಕೆ ಪಡದೆ ತನ್ನ ಮನಸ್ಸಿನ ಭಾವನೆಯನ್ನು ಕಪಾಹಿಗೆ ತಿಳಿಸುತ್ತಾನೆ.

ಬಿಚ್ಚು ಮನಸ್ಸಿನ ಮಾತು. ತರಾಳನ್ನು ಮದುವೆಯಾಗಲು ಆತನಿಗೆ ಇಷ್ಟ. ಈಗ ಅಲ್ಲ. ಮಾಘಫಾಲ್ಗುಣ ಮಾಸದಲ್ಲಿ. ಆದರೆ ಮಾತುಕತೆ ನಿಶ್ಚಿತವಾಗಬೇಕು. ಇಲ್ಲದಿದ್ದರೆ ಕಪಾಹಿ ಮನೆಗೆ ಬಂದು ಹೋಗುವುದು ಯಾವ ಸುಖಕ್ಕೆ?

ಗುಲಬ್‌ನ ಮನಸ್ಸಿನಲ್ಲಿ ಒಂದು ನಿರ್ದಿಷ್ಟ ಆಶೆ ಮೂಡಿತು. ಅವನನ್ನು ಅಳಿಯನನ್ನಾಗಿ ಮಾಡಿಕೊಳ್ಳಲು ಕಪಾಹಿ ಎಂದೂ ನಿರಾಕರಿಸುವುದಿಲ್ಲ. ಆತನ ಹತ್ತಿರ ಹಣ ಇಲ್ಲ. ಆದರೆ ಅವನಂಥ ಒಳ್ಳೆಯ ಗಂಡು ತರಾಳಿಗೆ ಎಲ್ಲಿ ಸಿಗುತ್ತಾನೆ?

ಆತ ಆನಂದ ತುಂದಿಲನಾದ. ಈವೊತ್ತು ನಾಚಿಕೆಪಟ್ಟುಕೊಳ್ಳದೆ ಸ್ಪಷ್ಟವಾಗಿ ತಿಳಿಸಲೇ ಬೇಕೆಂದು ಯೋಚಿಸಿದ.

ಆತ ಅಕಸ್ಮಾತ್ತಾಗಿ ಸುತ್ತಲೂ ನೋಡಿದ.

ಇಡೀ ಬುವಿ ಶುಭ್ರ ಬೆಳದಿಂಗಳಿಂದ ಕಂಗೊಳಿಸುತ್ತಿದೆ. ಗಿಡಮರಗಳ ಹಸಿರು ಎಲೆಗಳ ಮೇಲೆ ಮನೋಹರ ಬೆಳದಿಂಗಳು ಬೆಳಗುತ್ತಿದೆ. ಹರಿಯುತ್ತಿರುವ ನದಿಯ ನೀರಿನ ಮೇಲೆ ಬೆಳದಿಂಗಳು ಚೆಲ್ಲಿದೆ. ಕಾಂತಿಯುತವಾದ ಮನೋಹರ ಅಲೆಗಳು ನೃತ್ಯ ಮಾಡುತ್ತಿವೆ.

ಗುಲಬ್ ಎಲ್ಲ ಮಾತನ್ನೂ ಮರೆತ. ಗಾಳಿಯಲ್ಲಿ ಅನೇಕ ಸವಿ ಮಾತುಗಳು ಗುಂಯ್‌ಗುಟ್ಟುತ್ತಿವೆ. ಸರಸರ ಎಂದು ಶಬ್ದ ಮಾಡುತ್ತಾ ಮರದ ಪುಟ್ಟ ಎಲೆಗಳು ಕಂಪಿಸುತ್ತಿವೆ. ನದಿಯ ದಡದಲ್ಲಿರುವ ಗಿಡಮರಗಳ ಎಲೆಗಳು ಗಾಳಿಯ ಹೊಡೆತದಿಂದ ಚಟಚಟ, ಚಟಪಟ ಎಂದು ಶಬ್ದ ಮಾಡುತ್ತಿವೆ.

ಮನೋಹರ ಬೆಳದಿಂಗಳು - ತಂಗಾಳಿ ಬೀಸುತ್ತಿದೆ.

ಗುಲಬ್‌ನ ಮನಸ್ಸು ಅನಿರ್ವಚನೀಯ ಆನಂದದಿಂದ ನರ್ತನ ಮಾಡುತ್ತದೆ. ಗಿಡದ ಎಲೆಗಳೊಡನೆ ಅವನಿಗೂ ನರ್ತನ ಮಾಡಬೇಕೆನಿಸುತ್ತದೆ.

ಆತ ಸಿಳ್ಳು ಹಾಕಿದ.

ಯಾರನ್ನೋ ಕೂಗಿ ಏನೋ ಹೇಳಲು ಬಯಸಿದ.

ಹಾಡಲು ಬಯಸಿದ.

ಆದರೆ ಆತನಿಗೆ ಯಾರ ಹೆಸರೂ ಅಥವಾ ಯಾವ ಹಾಡೂ ಜ್ಞಾಪಕಕ್ಕೆ ಬರಲಿಲ್ಲ.

ನೃತ್ಯದ ಧಾಟಿಯಲ್ಲಿ ಆತ ಮುಂದೆ ಹೊರಟ. ರಸ್ತೆಯಲ್ಲಿ ಬೆಳೆದಿದ್ದ ಹುಲ್ಲು ಆತನ ಸಂಗಾತಿ.

ಸಿಳ್ಳು ಹಾರುತ್ತಾ ಹಾರುತ್ತಾ ಹೋಗುತ್ತಿದ್ದ. ನದಿಯ ದಡದಲ್ಲಿ ಕುಳಿತುಕೊಂಡು ಯಾರೋ ಕೊಳಲು ಬಾರಿಸುತ್ತಿರುವುದನ್ನು ಆತ ಕೇಳಿಸಿಕೊಂಡ. ಆದರ ಸ್ವರ ಅಷ್ಟು ಸುಶ್ರಾವ್ಯವಾಗಿರಲಿಲ್ಲ. ಆದರೆ ರಾತ್ರಿಯ ಬೆಳದಿಂಗಳಿನಲ್ಲಿ ಅದೇ ಇಂಪಾಗಿತ್ತು.

ಕೆಲಸಕಾರ್ಯ ಇಲ್ಲ. ಯಾರೋ ನದಿಯ ದಡದಲ್ಲಿ ಕುಳಿತು ಕೊಂಡು ಕೊಳಲು ಬಾರಿಸುತ್ತಿದ್ದಾರೆ ಎಂದು ಅಂದುಕೊಂಡ.

ಇದಕ್ಕೆ ಮುನ್ನ ಡಾಲಿಮ್ ಗ್ರಾಮದಲ್ಲಿ ಎಂದಾದರೂ ಇಷ್ಟು ಬೆಳದಿಂಗಳು ಇತ್ತೋ ಅಥವಾ ಇಲ್ಲವೋ ಎಂಬುದು ಗುಲಬ್‌ನಿಗೆ ನೆನಪಿಲ್ಲ, ಇರಲಾರದು, ಎಂದೂ ಇರಲಾರದು.

ಬೆಳ್ಳನೆಯ ಬೆಳದಿಂಗಳು ಆತನ ಮನಸ್ಸನ್ನು ಸೂರೆಗೊಂಡಿದೆ.

ಆತ ಭೀಮನ ಮನೆ ಅಂಗಳದಲ್ಲಿ ಬಂದು ನಿಂತ.

"ಭೀಮ"

"ಯಾರು? ಗುಲಬ್‌ನೇ? ಬಾ"

ಭೀಮ ಅಂಗಳಕ್ಕೆ ಬಂದ. "ಸಾಯಂಕಾಲದಿಂದ ಕಾಯ್ತಾ ಕುಳ್ತಿದ್ವಿ. ನೀನು ಇಷ್ಟೊತ್ತು ಮಾಡ್ಬಿಟ್ಟೆ."

"ಸೋದರ, ನಿಜಕ್ಕೂ ಭರ್ಜರಿ ಬೆಳದಿಂಗಳು" - ಗುಲಬ್ ಹೇಳಿದ.

"ಅಹುದು"

ಸ್ವಲ್ಪ ಹೊತ್ತಿನ ಮೇಲೆ ಭೀಮ ಮತ್ತು ಗುಲಬ್ ಮನೆಯಿಂದ ಹೊರಟು ಕಾಡಿನ ಕಡೆ ನಡೆದರು. ಗುಲಬ್ ಸುತ್ತಲೂ ಕಣ್ಣರಳಿಸಿ ನೋಡತೊಡಗಿದ. ಯಾವುದೋ ಕಾರಣದಿಂದ ಬೆಳದಿಂಗಳು ಕಣ್ಮರೆಯಾದರೆ?

"ಇಂದು ಹುಣ್ಣಿಮೆ ಅಲ್ಲವೇ? "

ಆಗ ಭೀಮ ಮತ್ತೇನನ್ನೋ ಯೋಚಿಸುತ್ತಿದ್ದ.

ಕಳೆದ ನಾಲ್ಕು ದಿನಗಳಿಂದ ಮೂರು ಎಮ್ಮೆಗಳು ಕಣ್ಮರೆಯಾಗಿವೆ. ಹುಡುಕಲು ಸಮಯ ಸಹ ಇಲ್ಲ. ಹೆದರಬೇಕಾಗಿಲ್ಲ. ಶ್ರಾವಣದ ತಿಂಗಳು ಮುಗಿಯುತ್ತಾ ಬಂದಿದೆ.

"ಭಾದ್ರಪದ ಮಾಸದಲ್ಲಿ ಪ್ರವಾಹ ಬಂದರೆ ಭಯ" - ಭೀಮ ಹೇಳಿದ.

"ಈಗಲೇ ಪ್ರವಾಹ ಬರೋದಿಲ್ಲಾ. ಅದರ ಚಿಂತೆ ಯಾಕೆ?" ಎಂದು ಗುಲಬ್ ಮಾತು ತೇಲಿಸಿ ಹೇಳಿದ.

ಧನಶಿರಿಯಲ್ಲಿ ಪ್ರವಾಹ ಬಂದೇ ಬರುತ್ತೆ. ಇದು ಒಂದು ತರಹ ನದಿ. ಒಮ್ಮೊಮ್ಮೆ ಹುಚ್ಚು ಹೊಳೆಯಾಗುತ್ತದೆ. ಯಾವ ಅಡೆತಡೆಗೂ ಅದು ಜಗ್ಗೋದಿಲ್ಲಾ. ಅಣೆಕಟ್ಟೆ, ಕೋಟೆ ಕೊತ್ತಳವನ್ನು ಲೆಕ್ಕಿಸುವುದಿಲ್ಲ; ಬೋರ್ಗರೆಯುತ್ತಾ ಹರಿಯುತ್ತದೆ. ನದಿಯ ಇಕ್ಕೆಲಗಳನ್ನು ಕೊರೆದು ಹಾಕುತ್ತದೆ. ದಿಣ್ಣೆಗಳನ್ನು ಕೊಚ್ಚಿಹಾಕುತ್ತದೆ. ಹಳ್ಳಿಗೆಲ್ಲಾ ನೀರು ನುಗ್ಗುತ್ತದೆ. ಅಕ್ಕಪಕ್ಕದ ಹೊಲಗದ್ದೆಗಳ ಫಸಲನ್ನು ಕೊಚ್ಚಿಕೊಂಡು ಹೋಗುತ್ತದೆ. ನದಿಯ ದಡದಲ್ಲಿರುವ ರೈತರ ಮನೆಮಠಗಳನ್ನು ಕೆಡವಿ ನೆಲಸಮ ಮಾಡುತ್ತದೆ.

ಇದಕ್ಕಾಗಿ ಯಾರಾದರೂ ಧನಶಿರಿಯ ಬಗ್ಗೆ ಸಿಟ್ಟಾಗುತ್ತಾರೆಯೇ? ಧನಶಿರಿ ತಾಯಿಯಂತೆ. ತಾಯಿಗೆ ಒಮ್ಮೊಮ್ಮೆ ಸಿಟ್ಟು ಬಂದೇ ಬರುತ್ತೆ. ಕೆಲವು ಸಾರಿ ತಾಯಿ ನಮ್ಮನ್ನು ಕೆಸರಿನಿಂದ ಪಾರು ಮಾಡುತ್ತಾಳೆ. ಕೆಲವು ಸಾರಿ ಮಡಿಲಿನಿಂದ ಕೆಸರಿನಲ್ಲಿ ಬಿಸಾಡುತ್ತಾಳೆ.

ಧನಶಿರಿಯಲ್ಲಿ ಭೀಕರ ಪ್ರವಾಹ ಬಂದರೆ ಜನರು ಬಹಳ ದೂರ ಓಡಿ ಹೋಗುತ್ತಾರೆ. ಪ್ರವಾಹವನ್ನು ತಡೆಗಟ್ಟುವ ಪ್ರಯತ್ನ ವ್ಯರ್ಥ.

ಚಂದ್ರ ಕೇವಲ ಹುಚ್ಚ. ಆತ ಹೇಳುವುದೇ ಬೇರೆ. ನದಿಗೆ ಅಣೆಕಟ್ಟು ಕಟ್ಟಲಾಗುವುದಿಲ್ಲ ಎಂದು ಯಾರು ಹೇಳ್ತಾರೆ? ದೊಡ್ಡದೊಡ್ಡ ನದಿಗಳಿಗೆ ಅಣೆಕಟ್ಟು ಕಟ್ಟಿ ಬಹುದೂರದವರೆಗೆ ನೀರು ತೆಗೆದುಕೊಂಡು ಹೋಗಿದ್ದಾರೆ. ಈಗಿನ ಕಾಲದಲ್ಲಿ ನದಿಯ ದೇವರು-ದಿಂಡರು ಎಲ್ಲಿಯೋ ಪರಾರಿಯಾಗಿದ್ದಾರೆ.

ಮನುಷ್ಯ ಹೆಚ್ಚು ಹೊಳೆ ಬರುವ ದೊಡ್ಡದೊಡ್ಡ ನದಿಗಳಿಗೆ ಅಣೆಕಟ್ಟು ಕಟ್ಟಿದ್ದಾನೆ. ಒಂದು ದಿನ ನಾವೂ ಧನಶಿರಿಗೂ ಬುದ್ಧಿ ಕಲಿಸುತ್ತೇವೆ. ಕಾದು ನೋಡು. ಪ್ರತಿ ವರ್ಷವೂ ಹೊಲಗದ್ದೆಗಳನ್ನು ಮುಳುಗಡೆ ಮಾಡಿ ಇದು ಮಿತಿಮೀರಿ ಹೋಗಿದೆ.

ಚಂದ್ರ ಎಂದಾದರೊಮ್ಮೆ ಹುಚ್ಚನಾಗುತ್ತಾನೆ. ಆತ ಪ್ರವಾಹವನ್ನು ತಡೆಗಟ್ಟಲು ಬಯಸುತ್ತಾನೆ. ಜಲದೇವತೆ ಅವನಿಗೆ ಯಾವ ಅಪಕಾರವನ್ನೂ ಮಾಡದಿರಲಿ.

ವಟವೃಕ್ಷದ ಕೆಳಗಡೆ ಬೆಳದಿಂಗಳು ಮತ್ತು ಕತ್ತಲೆಯ ಮಧುರ ಹೋರಾಟ ನಡೆಯುತ್ತದೆ. ಒಂದು ಏಕಾಂತ ರಹಸ್ಯ.

"ಎಲ್ಲಿದೆ?" - ಭೀಮನು ಗುಲಬ್‌ನ ಕಿವಿಯ ಹತ್ತಿರ ಪಿಸುಗುಟ್ಟಿದ. ಜೇನುಹುಳು ಅವನ ಮಾತನ್ನು ಅರ್ಥಮಾಡಿಕೊಂಡು ಬಿಟ್ಟರೆ!

"ಪಂಜು ಹತ್ತಿಸಲೇ?

"ಸ್ವಲ್ಪ ತಾಳು"

"ಜೇನುತುಪ್ಪ ಮಡುಗಟ್ಟಿ ನಿಂತಿದೆ. ಭಾರಿ ಜೇನುಗೂಡು ನೇತಾಡುತ್ತಿದೆ."

ಭೀಮನ ಕಣ್ಣುಗಳಲ್ಲಿ ಕಾಂತಿ ಹೊಮ್ಮಿತು.

"ಭಾರಿ ಜೇನುಗೂಡು"

"ಅರಚಬೇಡ"

ಮರದ ಎಲೆಗಳ ಮಧ್ಯದಿಂದ ಹಾದುಬಂದ ಕೊಂಚ ಬೆಳದಿಂಗಳು ಜೇನುಗೂಡಿನ ಮೇಲೆ ಬಿದ್ದಿತ್ತು. ಆದರೆ ಪಂಜು ಹೊತ್ತಿಸಿದ ಮೇಲೆ ಅದು ಕಾಣಿಸಲಿಲ್ಲ.

"ಮೇಲಕ್ಕೆ ಹತ್ತು" - ಗುಲಚ್ ಹೇಳಿದ.

ಪಂಜು ಹಿಡಿದುಕೊಂಡು ಇಬ್ಬರೂ ಒಂದು ಸಾರಿ ಮರದ ಸುತ್ತಲೂ ನೋಡಿದರು. ಎಲ್ಲಿಯಾದರೂ ಹುಲಿ ಮೊದಲಾದವು ಇದ್ದರೆ!

"ಏನೂ ಇಲ್ಲ. ಹತ್ತು."

ಹೊತ್ತಿಸಿದ ಪಂಜನ್ನು ಕೈಯಲ್ಲಿ ಹಿಡಿದುಕೊಂಡು ಭೀಮ ತೆವಳುತ್ತಾ ತೆವಳುತ್ತಾ ಮರವನ್ನೇರಿದ. ಮತ್ತೊಂದು ಪಂಜನ್ನು ಹಿಡಿದುಕೊಂಡು ಗುಲಚ್ ಅವನ ಕಡೆ ಕಣ್ಣು ಮಿಟುಕಿಸದೆ ನೋಡುತ್ತಾ ನಿಂತ.

"ಮಂಗನ ಮೊಮ್ಮಗ" ಅಂದುಕೊಂಡ.

ಒಂದು ಕೊಂಬೆಯ ಮೇಲೆ ಕುಳಿತುಕೊಂಡು ಭೀಮ ಹೇಳಿದ - "ಗುಲಚ್, ಜೇನು ಹುಳು ತುಂಬಾ ಇವೆ."

"ಹಾಗಾದರೆ?"

ಗುಲಚ್ ಒಂದೇ ಸಮನೆ ಭೀಮನ ಕಡೆ ನೋಡುತ್ತಾ ನಿಂತ.

ಭೀಮ ಪಂಜನ್ನು ಜೇನುಗೂಡಿನ ಕೆಳಗಡೆ ಇರಿಸಿದ. ಬೆಂಕಿ ಮತ್ತು ಹೊಗೆಯಿಂದಾಗಿ ಜೇನುಹುಳು ಹಾರಿ ಹೋದವು. ನಡುವಿನಲ್ಲಿ ಕಟ್ಟಿದ್ದ ಗಡಿಗೆಯನ್ನು ಜೇನುಗೂಡಿನ ಕೆಳಗಡೆ ಅಲ್ಲಾಡದಂತೆ ಇಟ್ಟು ಭೀಮ ಜೇನುಗೂಡು ಕಿತ್ತ. ಭಾರಿ ಜೇನುಗೂಡು.

ಉಪಾಯವೇನೂ ತೋಚದೆ ಜೇನುಹುಳುಗಳು ದೂರದಲ್ಲಿಯೇ ಇದ್ದವು.

"ಏನು ಭೀಮ? ಕೀಳಲು ಸಾಧ್ಯವಾಯಿತೇ?" - ಕೆಳಗಡೆ ನಿಂತಿದ್ದ ಗುಲಚ್ ಕೇಳಿದ.

"ಕಿತ್ತಾಯಿತು"

ಮೂರು ನಾಲ್ಕು ಹನಿ ಜೇನುತುಪ್ಪ ಕೆಳಗಡೆ ತೊಟ್ಟಿಕ್ಕಿತು. ತೊಟ್ಟಿಕ್ಕುವ ಕಡೆ ಮಡಕೆಯನ್ನು ಇಡಲು ಗುಲಚ್ ಪ್ರಯತ್ನಿಸಿದ. ಆದರೆ ಇಡಲಾಗಲಿಲ್ಲ.

ಪಂಜನ್ನು ಕೈಯಲ್ಲಿ ಹಿಡಿದುಕೊಂಡು ಮತ್ತು ಗಡಿಗೆಯನ್ನು ನೇತು ಹಾಕಿಕೊಂಡು ಭೀಮ ಮರದಿಂದ ಇಳಿದು ಬಂದ. ಒಂದು ಜೇನುಹುಳು ಸಹ ಅವನನ್ನು ಕಚ್ಚಲಿಲ್ಲ.

ಒಂದು ಗಡಿಗೆ ತುಂಬಾ ಜೇನುತುಪ್ಪವಿತ್ತು. ಅಷ್ಟೇ ಅಲ್ಲದೆ ಇಡೀ ಜೇನುಗೂಡನ್ನೇ ಕಿತ್ತು ತಂದಿದ್ದ.

"ಜೇನುತುಪ್ಪ ಬಹಳ ಜಾಸ್ತಿಯಾಗಿತ್ತು" - ಭೀಮ ಆನಂದದಿಂದ ಹೇಳಿದ.

ಇಬ್ಬರೂ ಅಲ್ಲಿ ಉದುರಿದ್ದ ಎಲೆಗಳ ಮೇಲೆಯೇ ಚಕ್ಕಳಬಕ್ಕಳ ಹಾಕಿ ಕುಳಿತರು. ತೃಪ್ತಿಯಾಗುವಷ್ಟು ಜೇನುತುಪ್ಪ ಕುಡಿದರು. ಭೀಮನ ಕೈಮೇಲೆಲ್ಲಾ ಜೇನುತುಪ್ಪ ಸೋರಿತ್ತು. ಅದನ್ನು ನಾಲಿಗೆಯಿಂದ ಆತ ನೆಕ್ಕಿಕೊಂಡ.

"ಈವೊತ್ತು ಇದನ್ನು ಕೀಳದಿದ್ದರೆ ನಾಳೆ ತನಕ ಇರುತ್ತಿರಲಿಲ್ಲ."

"ಅಹುದು"

ಜೇನುತುಪ್ಪ ಹಂಚಿಕೊಂಡು ಅವರಿಬ್ಬರೂ ಕಾಡಿನಿಂದ ಹೊರಟು ಬಂದರು.

ಭೀಮ ಹೇಳಿದ - "ನೀನು ನೋಡದೆ ಇದ್ದರೆ ಇದು ಹೀಗೆಯೇ ಹಾಳಾಗುತ್ತಿತ್ತು. ಆ ಕಡೆಯ ಕಾಡಿನ ಒಳಗಡೆ ಇನ್ನೂ ಇರಬಹುದು? ಆದರೆ ಆ ಕಡೆ ನುಗ್ಗಲು ಹೆದರಿಕೆಯಾಗುತ್ತದೆ."

ಬಹಳ ಹೊತ್ತಾಗಿತ್ತು. ರಾತ್ರಿಯಾದ್ದರಿಂದ ಬಹುಶಃ ಹಳ್ಳಿಯ ಜನರೆಲ್ಲರೂ ಮಲಗಿದ್ದರು. ಆ ಕಡೆ ಈ ಕಡೆ ಸುತ್ತಾಡೋ ಅಭ್ಯಾಸವಿದ್ದ ಒಬ್ಬಿಬ್ಬ ತರುಣರು ಬೆಳದಿಂಗಳಲ್ಲಿ ಇನ್ನೂ ಕುಳಿತಿದ್ದರು.

ಭೀಮ ಜೇನುತುಪ್ಪದ ಗಡಿಗೆಯನ್ನು ತೆಗೆದುಕೊಂಡು ಮನೆಗೆ ಹೋದ. ಹೋಗುವಾಗ ಆತ ಹೇಳಿದ - "ಸ್ವಲ್ಪ ಹಾಗೆಯೇ ಗಮನಿಸುತ್ತಿರು. ಎಲ್ಲಾದರೂ ಕಣ್ಣಿಗೆ ಬಿದ್ದರೆ ನನಗೂ ತಿಳಿಸು. ಬೇರೆ ಯಾರಿಗೂ ಹೇಳಬೇಡ."

ಗುಲಬ್ "ಹೂಂ" ಎಂದ.

ಗುಲಬ್ ತನ್ನ ಮನೆ ಬಳಿ ನಿಂತು ಯೋಚಿಸತೊಡಗಿದ. ಒಂದು ವೇಳೆ ಈಗ ಮನೆಗೆ ಹೋದರೆ ಕಪಾಹಿ ಅಕ್ಕನ ಮನೆಗೆ ಹೋಗೋಕೆ ಆಗೋಲ್ಲ. ರಾತ್ರಿ ಇಷ್ಟು ಹೊತ್ತಿನಲ್ಲಿ ಹೊರಗಡೆ ಹೋಗಿ ಬರ್ತೀನಿ ಅನ್ನೋ ಮಾತು ತಾಯಿಯ ಕಿವಿಗೆ ಬಿದ್ದರೆ ಆಕೆ ಬೈಯುತ್ತಾಳೆ. ಈಗ ನಮ್ಮ ಮನೆಗೆ ಹೋಗೋದು ಸರಿಯಲ್ಲ. ಹೀಗೆಯೇ ಕಪಾಹಿ ಮನೆಗೆ ಹೋಗಿ ಅಲ್ಲಿಂದ ಮನೆಗೆ ಒಂದೇ ಸಾರಿ ಬರುವುದು ಸರಿ. ಇಲ್ಲದಿದ್ದರೆ ತಾಯಿ ಗೊಣಗುಟ್ಟುತ್ತಾಳೆ ಅಂದುಕೊಂಡ.

ಕಪಾಹಿಯ ಮನೆಬಳಿ ಹೋದಮೇಲೆ ಗುಲಬ್‌ನಿಗೆ ಸ್ವಲ್ಪ ಅಂಜಿಕೆಯಾಯಿತು. ರಾತ್ರಿ ಇಷ್ಟು ಹೊತ್ತಿನಲ್ಲಿ ನಾನು ಬಂದಿರುವುದನ್ನು ಯಾರಾದರೂ ಒಂದು ವೇಳೆ ನೋಡಿದರೆ ಏನೆಂದು ಯೋಚಿಸಬಹುದು? ಆತ ಸುತ್ತಲೂ ನೋಡಿದ. ಯಾರೂ ಇಲ್ಲ. ಎಲ್ಲರೂ ಮಲಗಿ ನಿದ್ರಿಸುತ್ತಿದ್ದಾರೆ. ಕಪಾಹಿಯ ಮನೆ ಆ ಕಡೆ ತುದಿಯಲ್ಲಿದೆ. ಹತ್ತಿರದಲ್ಲಿ ಯಾರ ಮನೆಯೂ ಇಲ್ಲ. ಇದಲ್ಲದೆ ಪ್ರತಿಯೊಂದು ತೋಟದಲ್ಲಿ ಅನೇಕ ಮರಗಿಡಗಳಿವೆ. ಮಧ್ಯದಲ್ಲಿ ಮನೆಗಳಿವೆ. ವರಾಂಡಕ್ಕೆ ಬರುವ ತನಕ ಗೊತ್ತಾಗುವುದಿಲ್ಲ.

ಈ ಕಡೆ ರಸ್ತೆಯಲ್ಲಿ ಯಾರು ತಿರುಗಾಡುತ್ತಿಲ್ಲ. ಈಗ ಸುಮಾರು ರಾತ್ರಿ ಮೂರನೆಯ ಜಾವ.

ಬಾಗಿಲಿನ ಬಳಿ ನಿಂತು ಗುಲಬ್ ಮೆಲುದನಿಯಲ್ಲಿ ಕೂಗಿದ - "ಅಕ್ಕಾ, ಏ ಅಕ್ಕಾ!"

ಒಳಗಡೆ ಮಲಗಿಕೊಂಡೇ ಏನೋ ಸ್ವಲ್ಪ ಶಬ್ದ ಮಾಡಿದಂತಾಯಿತು.

"ಅಕ್ಕ, ನಿದ್ರೆ ಬಂದಿದೆಯೆ?"

"ಯಾರು? ಗುಲಬ್‌ನೇ? ತಡಿ ಬಂದೇ"

ದೀಪ ಹತ್ತಿಸಿ ಆಕೆ ಬಾಗಿಲು ತೆರೆದಳು. ಒಳಗಡೆ ಬಾ ಎಂದು ಕರೆದಳು. "ಯಾಕೆ ಇಷ್ಟು ಹೊತ್ತು ಮೀರಿ ಬಂದೆ?"

ಕೈಗೊಡಲಿ ಮತ್ತು ಜೇನುತುಪ್ಪದ ಮಡಕೆ ಹಿಡಿದುಕೊಂಡು ಗುಲಬ್ ಒಳಗಡೆ ಹೋದ.

"ಅದೇನು?" ಕದ ಹಾಕಿಕೊಂಡು ಕಪಾಹಿ ಕೇಳಿದಳು.

"ಜೇನು ಕೀಳಲು ಹೋಗಿದ್ದೆ. ಅಲ್ಲೇ ಇಷ್ಟು ಹೊತ್ತಾಯಿತು. ಅಲ್ಲಿಂದ ನೇರವಾಗಿ ಇಲ್ಲಿಗೆ ಬಂದೆ."

"ಜೇನು? ಎಲ್ಲಿ ಕಿತ್ತೆ?"- ಅನಂತರ ಕಪಾಹಿ ಕೇಳಿದಳು -"ನೀನು ಊಟ ಮಾಡಿದೆಯಾ?"

"ಊಟ ಎಲ್ಲಿ ಮಾಡಿದೆ? ಸಂಜೆಯೇ ಮನೆ ಬಿಟ್ಟು ಹೊರಟೆ. ಆದರೆ ಈವೊತ್ತು ಜೇನುತುಪ್ಪದಲ್ಲೇ ಹೊಟ್ಟೆ ತುಂಬುಸುಕೊಂಡಿಷ್ಟಿ."

ಒಂದು ಲೋಟ ನೀರು ತಂದುಕೊಟ್ಟು ಕಪಾಹಿ ಹೇಳಿದಳು - "ಜೇನುತುಪ್ಪ ಕುಡಿದರೆ ಹೊಟ್ಟೆ ತುಂಬುತ್ತದೆಯೇ? ಕೈಕಾಲು ತೊಳೆದುಕೊಂಡು ಬಾ. ನಾನು ಊಟಕ್ಕೆ ಬಡಿಸ್ತೀನಿ. ನಾನು ನಿನಗಾಗಿ ಅಡಿಗೆ ಮಾಡಿಷ್ಟಿ."

ಊಟ ಮಾಡುತ್ತಾ ಗುಲಬ್ ಕೇಳಿದ - "ತರಾ ಹೋಗಿದ್ದಾಳೆಯೇ?"

"ಹೋದಳು. ಬೆಳಿಗೆಯೇ ಹೋದಳು. ನಾನು ಒಬ್ಬಳೇ. ನೀನು ಬರಬಹುದೆಂದು ಯೋಚಿಸುತ್ತಾ ಬಹಳ ಹೊತ್ತಿನವರೆಗೂ ಕಾದು ಕುಳಿತಿದ್ದೆ. ಅನಂತರ ಹಾಗೆಯೇ ಚಾಪೆಯ ಮೇಲೆ ಹೊರಳಿಕೊಂಡೆ. ನಿದ್ದೆ ಹತ್ತಿರಲಿಲ್ಲ. ಒಬ್ಬಳೆ ಇರಲು ಹೆದರಿಕೆ ಆಗುತ್ತೆ."

ಗುಲಬ್ ಚುಟುಕ ಉತ್ತರ ಕೊಟ್ಟ - "ಅಹುದು."

ಗುಲಬ್‌ನಿಗೆ ಸ್ವಲ್ಪ ಅಂಜಿಕೆಯಾಯಿತು. ತರಾ ಇಲ್ಲ. ಕಪಾಹಿ ಒಬ್ಬಳೇ ಇದ್ದಾಳೆ. ಆಕೆಯ ಸ್ವಭಾವ ಮತ್ತುನಡತೆಯ ಬಗ್ಗೆ ಮೊದಲೇ ಅವನಿಗೆ ಗೊತ್ತು. ಆದರೆ ಕಪಾಹಿ ಅವನಿಗಿಂತ ಕನಿಷ್ಠ ಮೂರು ನಾಲ್ಕು ವರ್ಷ ದೊಡ್ಡವಳು.

ಊಟ ಮುಗಿದ ಮೇಲೆ ಇಬ್ಬರೂ ಮಧ್ಯದ ರೂಮಿಗೆ ಬಂದರು.

ಅಡಕೆಎಲೆ ತಟ್ಟೆ ತಂದಿಟ್ಟು, ಅಡಕೆಯನ್ನು ಕತ್ತರಿಸುತ್ತಾ ಕಪಾಹಿ ಗುಲಬ್‌ನ ಕಡೆ ನೋಡಿ ಕೇಳಿದಳು - "ಪಾಹಿಯಲ್ಲಿ ಎಷ್ಟು ಎಕರೆ ಜಮೀನು ಆಬಾದು ಮಾಡಿದ್ದೀಯೆ?"

"ಒಂದಿಷ್ಟು ಆಬಾದು ಮಾಡಿದ್ದೇನೆ. ಒಬ್ಬನೇ ಎಷ್ಟು ಅಂತ ಮಾಡಲು ಸಾಧ್ಯ?"

"ಮನೆ ಕಟ್ಟಿದ್ದೀಯೋ ಅಥವಾ ಇಲ್ಲವೋ?

"ಇನ್ನೂ ಕಟ್ಟಿಸಿಲ್ಲ. ಈ ಕಾರ್ತಿಕ ಮಾಸದಲ್ಲಿ ಮನೆಗೆ ಸಾಮಾನು-ಸರಂಜಾಮು ಜೋಡಿಸಿ ಕಟಾವು ಆದ ಮೇಲೆ ಆ ಕೆಲಸಕ್ಕೆ ಕೈಹಾಕ್ತೀನಿ."

"ಪಾಹಿಯಲ್ಲಿ ಕಟ್ಟುವ ಮನೆಗೆ ನಿಮ್ಮ ತಾಯಿ ಬರ್ತ್ತಾಳಾ?"

"ತಾಯಿಗೆ ಅಲ್ಲಿಗೆ ಬರಲು ಇಷ್ಟವಿಲ್ಲ."

"ಹಾಗಾದರೆ ನಿನಗೆ ಮನೆ ಕಟ್ಟಿಸುವ ಯೋಚನೆ ಯಾಕೆ?"

ಆ ಪ್ರಶ್ನೆ ಕೇಳಿ ಗುಲಬ್‌ಗೆ ನಾಚಿಕೆಯಾಯಿತು. ಅದಕ್ಕೆ ಏನು ಉತ್ತರ ಹೇಳೋದೋ ಅಥವಾ ಸುಮ್ಮನಿರೋದೆ ಎಂದು ನಿಶ್ಚಯಿಸುವ ಮುನ್ನವೇ ನಗುತ್ತಾ ಕಪಾಹಿ ಹೇಳಿದಳು - "ಏತಕ್ಕೆ ನಾಚಿಕೆಪಟ್ಟುಕೊಳ್ಳುತ್ತೀಯೆ? ನೀನು ತರುಣ. ಒಬ್ಬ ಹುಡುಗಿ ಬರ್ತಾಳೆ ಮತ್ತು............."

ಬಾಯಿಯಲ್ಲಿ ಬೀಡಾ ಅಗಿಯುತ್ತಾ ಗುಲಬ್‌ನು ಕಪಾಹಿಯ ಮುಖವನ್ನು ನೋಡಿದ. ತನ್ನ ಮುಖವನ್ನೇ ನೋಡುತ್ತಾ ನಗುತ್ತಿದ್ದ ಕಪಾಹಿ ದೀಪದ ಮಂದಬೆಳಕಿನಲ್ಲೂ ಬಹಳ ಸುಂದರವಾಗಿ ಕಂಡಳು. ಕಪಾಹಿ ಈಗಲೂ ತರುಣಿ. ಆಕೆಯ ಕಟ್ಟುಮಸ್ತಾದ ದೇಹದಲ್ಲಿ ಆತನ ಕಣ್ಣುಗಳು ನಾಟಿದವು. ಕಪಾಹಿ ನಗುತ್ತಾ ಹೇಳಿದಳು "ನನ್ನನ್ನು ಏಕೆ ಈ ರೀತಿ

ದುರುಗುಟ್ಟಿಕೊಂಡು ನೋಡ್ತಿದೀಯೆ? ನೀನು ಎಂದೂ ಹೆಂಗಸರನ್ನು ನೋಡಲೇ ಇಲ್ವೇನು?''

ಆಗಲೂ ಸಹ ಗುಲಬ್‌ನಿಗೆ ಏನೂ ಮಾತಾಡಲಾಗಲಿಲ್ಲ. ಅವನ ಮುಖ ನಾಚಿಕೆಯಿಂದ ಕೆಂಪೇರಿತು. ಆತನಿಗೆ ತರಾಳ ವಿಷಯ ಮಾತಾಡಬೇಕೆಂಬ ಇಚ್ಛೆ ಪ್ರಬಲವಾಗಿತ್ತು. ಆದರೆ ಆ ಸಮಯದಲ್ಲಿ ಆತನ ಬಾಯಿಂದ ಮಾತೇ ಹೊರಡಲಿಲ್ಲ.

ಸಮಾಧಾನ ಹಾಗೂ ಆಶ್ವಾಸನೆಯ ಧ್ವನಿಯಲ್ಲಿ ಕಪಾಹಿ ನಗುತ್ತಾ ಹೇಳಿದಳು -ಮನೆಮಠ ಕಟ್ಟಿಸು; ತೋಟತುಡಿಕೆ ಮಾಡು; ಅಲ್ಪಸ್ವಲ್ಪ ಉಳಿದೆಲ್ಲ ಸಿದ್ಧತೆ ಮಾಡಿಕೊ. ಇನ್ನೆಷ್ಟು ದಿನ ಬ್ರಹ್ಮಚಾರಿಯಾಗಿರಬೇಕು ಅಂತಿದ್ದೀಯೆ?''

ಅನಂತರ ಆತನ ಗದ್ದ ಹಿಡಿದು, ಆತನ ಮುಖವನ್ನು ಸ್ವಲ್ಪ ಮೇಲೆತ್ತಿ ಹೇಳಿದಳು - ''ನೀನೇನೂ ಹೆದರಬೇಕಾಗಿಲ್ಲ. ಚಿಂತಿಸಬೇಡ. ಬಹಳ ದಿನಗಳಿಂದಲೂ ನಾನು ನಿನ್ನ ಮೇಲೆ ನಿಗಾ ಇಟ್ಟಿದ್ದೇನೆ. ನಿನ್ನನ್ನು ಕೈಬೀಡೋಲ್ಲ. ತಿಳಿಯಿತೇ?''

ಗುಲಬ್ ಆನಂದಭರಿತನಾದ. ಅಕ್ಕ ನನ್ನ ಮನಸ್ಸಿನ ಭಾವನೆಯನ್ನು ಅರ್ಥ ಮಾಡಿಕೊಂಡಿದ್ದಾಳೆಂದು ಯೋಚಿಸಿದ. ನನ್ನ ಜೊತೆಯಲ್ಲಿ ತರಾಳ ವಿವಾಹ ನೆರವೇರಿಸುತ್ತಾಳೆಂದು ಭಾವಿಸಿ ತಲೆ ತಗ್ಗಿಸಿಕೊಂಡೇ ಕುಳಿತ.

ಕದ ಸರಿಯಾಗಿ ಹಾಕಿದೆಯೋ ಇಲ್ಲವೋ ಎಂದು ಕುಳಿತುಕೊಂಡೇ ಶರೀರವನ್ನು ಸ್ವಲ್ಪ ಬಾಗಿಸಿ ಬಾಗಿಲಿನ ಕಡೆ ಕಪಾಹಿ ನೋಡಿದಳು. ಅನಂತರ ಹೇಳಿದಳು - ''ನೀನು ಬೇನಿಮಾಇ ಚಿಂತೆ ಹಚ್ಚಿಕೊಳ್ಳಬೇಡ. ನನ್ನ ಹಾಗೆ ನಿನ್ನನ್ನು ಯಾರು ಪ್ರೀತಿಸ್ತಾರೆ?

ನಿಜ, ಇಲ್ಲಿಯವರೆಗೂ ಈ ರೀತಿ ಪ್ರೀತಿಪೂರ್ವಕವಾದ ಮಾತು ಯಾರೂ ಆಡಿರಲಿಲ್ಲ. ಕಪಾಹಿಯ ಬಗ್ಗೆಯೂ ಆತನಲ್ಲಿ ಸ್ನೇಹ ಮೂಡುತ್ತಿದೆ.

ಸ್ವಲ್ಪ ಹೊತ್ತು ಮೌನವಾಗಿದ್ದ ಮೇಲೆ ಗಟ್ಟಿಮನಸ್ಸು ಮಾಡಿ ಆತ ಹೇಗೋ ಹೇಳಿದ - ''ಜೇನುತುಪ್ಪ ಎತ್ತಿಡು. ರಾತ್ರಿ ಸಮಯ. ಬಹಳ ಹೊತ್ತಾಯಿತು. ನಾನು ಬರ್ತೀನಿ.''

''ನೀನು ಹೋಗಲೇ ಬೇಕೆ? ಒಂದು ವೇಳೆ ನೀನು ಹೊರಟು ಹೋದರೆ ನಾನು ಒಬ್ಬಳೇ ಹೇಗಿರಲಿ? ಹೊರಟು ಹೋಗೋದೆ ಆದರೆ ಬಂದದ್ದು ಯಾಕೆ?

ಗುಲಬ್ ಏನೂ ಮಾತಾಡಲಿಲ್ಲ. ಸರಿ, ತರಾ ಮನೆಯಲ್ಲಿಲ್ಲ. ಆತ ಹೊರಟುಹೋದರೆ ಕಪಾಹಿಗೆ ಹೆದರಿಕೆಯಾಗಬಹುದು.

ಆತ ಹೇಗೋ ಹೇಳಿದ - ''ಸರಿ, ಇಲ್ಲೇ ಇರ್ತೀನಿ. ಆದರೆ ಬೆಳಗಾಗುವ ಮುನ್ನವೇ ಹೋಗಬೇಕು. ಹಳ್ಳಿಯವರು ಯಾರಾದರೆ ನೋಡಿದರೆ............''

''ನೋಡಿದರೆ ಏನಾಗುತ್ತೆ. ನೀನು ಗಂಡಸು. ನಿನಗೆ ಇಷ್ಟೊಂದು ಭಯವೇ?''

ಇಷ್ಟು ಹೇಳಿ ಕೈಯಲ್ಲಿ ದೀಪ ಹಿಡಿದುಕೊಂಡು ಕಪಾಹಿ ತಾನು ಮಲಗುವ ಕೊಠಡಿಗೆ ಹೋದಳು. ಹಾಸಿಗೆಯನ್ನು ಸ್ವಲ್ಪ ಒದರಿದಳು. ಅನಂತರ ಗುಲಬ್‌ನನ್ನು ಕೂಗಿ - ''ಬಾ. ಮಲಗಿಕೊ. ರಾತ್ರಿ, ತುಂಬಾ ಹೊತ್ತಾಗಿದೆ.'' - ಎಂದಳು.

ಹಾಸಿಗೆ ಮೇಲೆ ಮಲಗಿ ಗುಲಬ್ ಹೇಳಿದ - ''ಇನ್ನೊಂದು ಹಾಸಿಗೆ ಇದೆಯೇನು? ನೀನು ಎಲ್ಲಿ ಮಲಗಿಕೊಳ್ತೀ ಅಕ್ಕಾ?''

ಹಚ್ಚಡ ಎಳೆದುಕೊಂಡು ಕಪಾಹಿ ದೀಪ ಆರಿಸಿ ಹೇಳಿದಳು - ''ಇನ್ನೊಂದು ಹಾಸಿಗೆ

ಎಲ್ಲಿದೆ? ಸ್ವಲ್ಪ ಆ ಕಡೆ ಜರುಗು."

ಗುಲಬ್ ಮರುಮಾತಾಡದೆ ಪಕ್ಕಕ್ಕೆ ಜರುಗಿದ. ಕಪಾಹಿ ಆತನ ಪಕ್ಕಕ್ಕೆ ಸರಿದು ತನ್ನ ಮುಖವನ್ನು ಆತನ ಮುಖದ ಹತ್ತಿರ ತೆಗೆದುಕೊಂಡು ಹೋಗಿ ಹೇಳಿದಳು - "ನೀನು ಏನೂ ಯೋಚಿಸಬೇಡ. ಈವೊತ್ತಿನಿಂದ ನೀನು ನನ್ನನ್ನು ಅಕ್ಕಾ ಎಂದು ಕರೆಯಬೇಡ. ನಾನೇನು ನಿನಗೆ ಅಕ್ಕ ಆಗಬೇಕೆ?"

ಕಪಾಹಿ ಎಂದೂ ಆತನಿಗೆ ಅಕ್ಕ ಆಗಿರಲಿಲ್ಲವೆಂಬುದನ್ನು ಗುಲಬ್ ಅರಿತುಕೊಂಡ.

ರಾತ್ರಿ ಸಮಯ. ನಿಶ್ಶಬ್ದತೆ ಹೆಚ್ಚು ಹೆಚ್ಚಾಗುತ್ತಿತ್ತು. ಗೋಡೆಯ ಸಂದಿನಿಂದ ಬೆಳದಿಂಗಳ ಕಿರಣ ಮನೆಯೊಳಗೆ ಬೀಳುತ್ತಿತ್ತು. ಇಲ್ಲಿಯವರೆಗೂ ತಾನು ತರಾಳಿಗಾಗಿ ಕಾಯುತ್ತಿರಲಿಲ್ಲವೆಂಬ ಅನುಭವ ಗುಲಬ್‌ನಿಗೆ ಆಯಿತು -ಕಾಯುತ್ತಿದ್ದುದು ಕಪಾಹಿಗಾಗಿ ಅನ್ನಿಸಿತು.

## ಎಂಟು

ಗುಲಬ್‌ನ ತಂದೆಗೆ ವಿಪರೀತ ಕಾಯಿಲೆ. ಆತನ ಸ್ಥಿತಿ ಚಿಂತಾಜನಕ. ಈ ಸುದ್ದಿಯನ್ನು ಪಾಹಿಯವರೆಗೂ ಮುಟ್ಟಿಸಿದ್ದಾಯಿತು. ಆದರೆ ಗುಲಬ್ ಬರಲಿಲ್ಲ. ಮುದುಕನಿಗೆ ಯಾವತ್ತು ಏನಾಗುತ್ತೋ ಹೇಳಲಾಗುವುದಿಲ್ಲ. ಹಾಗೇನಾದರೂ ಆಗುವ ಮುನ್ನವೇ ಆಸ್ತಿ-ಪಾಸ್ತಿ ಭಾಗ ಮಾಡಿ ಬಿಡಬೇಕೆಂದು ಹೇಳುತ್ತಾನೆ. ಆದುದರಿಂದ ನಿನ್ನನ್ನು ಬರಹೇಳಿದ್ದಾನೆ ಬಾ ಎಂದು ಆಸೆ ತೋರಿಸಿದ್ದೂ ಆಯಿತು.

ಇಷ್ಟು ಹೇಳಿದರೂ ಆತ ಒಪ್ಪಲಿಲ್ಲ. ನಾನು ನಮ್ಮಪ್ಪನ ಮಗನಾಗಿದ್ದರೆ ನನ್ನ ಪಾಲಿನ ಆಸ್ತಿ ತಾನಾಗಿಯೇ ಸಿಗುತ್ತೆ. ಒಂದು ವೇಳೆ ಸಿಗದಿದ್ದರೆ ಏನೂ ನಷ್ಟ ಇಲ್ಲ. ಅಲ್ಲಿರೋದು ತಾನೇ ಏನು? ಕೊಡದೆ ಇದ್ದರೆ ಇರಲಿ. ನನಗೆ ಆತ್ಮವಿಶ್ವಾಸ ಇದೆ. ಸಂಪಾದನೆ ಮಾಡ್ತೀನಿ.

ಈ ವಿಷಯದ ಬಗ್ಗೆ ತಾಯಿ ಮತ್ತು ಆತನಲ್ಲಿ ಭಿನ್ನಾಭಿಪ್ರಾಯವಿತ್ತು. ಮುದುಕನ ಸ್ಥಿತಿ ಚಿಂತಾಜನಕ ಎಂಬ ಸುದ್ದಿ ಕೇಳಿ ಹಾಗೂ ಜನರ ಮಾತಿನ ಮೇರೆಗೆ ಆತನ ತಾಯಿ ತನ್ನ ಗಂಡನನ್ನು ನೋಡಲು ಹೋಗಿದ್ದಳು. ಒಂದು ದಿನ ಗುಲಬ್ ಮನೆಗೆ ಹೋದಾಗ ಆತನ ತಾಯಿ ಮನೆಯಲ್ಲಿರಲಿಲ್ಲ. ಅಕ್ಕಪಕ್ಕದವರನ್ನು ವಿಚಾರಿಸಿದಾಗ ಅವರು ನಿಮ್ಮ ತಾಯಿ ಕೆಲವು ದಿವಸಗಳ ಹಿಂದೆಯೇ ನಿಮ್ಮ ತಂದೆ ಮನೆಗೆ ಹೋದಳು. ಅಲ್ಲೆ ಇದ್ದಾಳೆ ಎಂದು ತಿಳಿಸಿದರು. ಆಗ ಆತನಿಗೆ ಸಿಟ್ಟು ಬಂತು. ಮನೆ ಬಿಟ್ಟು ಹೋಗುವಾಗ ಹಳ್ಳಿಯವರಿಗೆ ಈ ರೀತಿ ಹೇಳಿ ಹೋದ - "ನಾನು ಇನ್ನು ಇಲ್ಲಿಗೆ ಬರುವುದಿಲ್ಲ. ಪಾಹಿಯಲ್ಲೇ ಇರ್ತೀನಿ. ನನ್ನ ತಾಯಿಗೂ ತಿಳಿಸಿಬಿಡಿ. ಆಕೆ ಸಹ ಮತ್ತೆ ಇಲ್ಲಿಗೆ ಬರಬೇಕಾದ ಅವಶ್ಯಕತೆಯಿಲ್ಲ. ಅಲ್ಲಿಯೇ ಇರಲಿ. ಅವಳ ಹಿರಿಯ ಮಗ ಇದ್ದಾನೆ. ಅವನೇ ಅನ್ನ ಹಾಕ್ತಾನೆ. ದನಕರುಗಳನ್ನು ನೋಡಿಕೊಳ್ಳಲು ನಾನು ನೇಪಾಲಿಗೆ ವಹಿಸಿ ಹೋಗ್ತೀನೆ. "

ಒಬ್ಬಿಬ್ಬರು ಆತನಿಗೆ ಸಲಹೆ ನೀಡಿದರು. ಯಾರ ಮೇಲೂ ಸದಾ ಸಿಟ್ಟಾಗಬಾರದು.

ತಂದೆತಾಯಿ ತಮ್ಮ ಮಕ್ಕಳ ಮೇಲೆ ಕೋಪಿಸಿಕೊಳ್ಳದೆ ಬೇರೆ ಯಾರ ಮೇಲೆ ಕೋಪಿಸಿಕೊಳ್ಳುತ್ತಾರೆ? ನೀನು ಸಹ ಹೋಗು - ಒಮ್ಮೆ ಮಾತಾಡಿ ವಿಷಯ ತಿಳಿದುಕೊಂಡು ಬಾ ಎಂದರು.

ಆದರೆ ಗುಲಬ್ ಹೋಗಲಿಲ್ಲ.

ಕಾಯಿಲೆ ಬಿದ್ದಿದ್ದ ತನ್ನ ತಂದೆಯನ್ನು ನೋಡಬೇಕೆಂದು ಒಮ್ಮೆ ಅನ್ನಿಸಿತ್ತು. ಹೋದರೆ ಆತನ ಪ್ರತಿಜ್ಞೆ ಭಂಗವಾಗುತ್ತೆ. ಆಗ ಅವನನ್ನು ನೀನು ಗಂಡಸೇ ಎಂದು ಯಾರಾದರೂ ಪ್ರಶ್ನಿಸಬಹುದು? ಗಂಡಸ್ತನದ ಮಾತು?...

ಆತನ ತಾಯಿ ಆತನನ್ನು ಬಿಟ್ಟು ಹೊರಟು ಹೋದದ್ದು ಒಂದು ರೀತಿಯಲ್ಲಿ ಒಳ್ಳೆಯದೇ ಆಯಿತು. ಆಕೆಯ ಚಿಂತೆ ಕಡಿಮೆಯಾಯಿತು. ಆತನ ಮನೆ ಹಾಗೆಯೇ ಇರುತ್ತೆ. ಅದರಲ್ಲಿರೋದು ತಾನೇ ಏನು? ತಾಯಿ ಯೋಚನೆಗಿಂತ ದನಕರುಗಳ ಯೋಚನೆ ಆತನಿಗೆ ಬಹಳವಾಗಿತ್ತು. ಅದಕ್ಕೆ ತಕ್ಕ ವ್ಯವಸ್ಥೆ ಮಾಡಿದ. ನೇಪಾಲಿ ಹಳ್ಳಿಯ ಚಕ್ರ ಬಹಾದುರ್ ಆತನ ದನಕರುಗಳನ್ನು ನೋಡಿಕೊಳ್ಳುತ್ತಾನೆ. ಅದಕ್ಕಾಗಿ ಅವುಗಳಿಂದ ಆತ ತನ್ನ ಹೊಲಗದ್ದೆಯ ಉಳುಮೆ ಕೆಲಸ ಮಾಡಿಕೊಳ್ಳುತ್ತಾನೆ. ಉಳುಮೆ ಕೆಲಸಕ್ಕೆ ಸರಿಯಾದ ಎತ್ತುಗಳು.

ಉಳುಮೆ ಮಾಡಿಯೇ ಮಾಡುತ್ತಾನೆ.

ತರಾ ಮತ್ತು ಕಪಾಹಿಯ ವಿಷಯವನ್ನು ಹೆಚ್ಚಿಗೆ ತಲೆಗೆ ಹಚ್ಚಿಕೊಳ್ಳದಿದ್ದರೂ ಕೆಲಸ ಹೇಗೋ ನಡೆಯುತ್ತೆ. ಏನೋ ಒಂದು ಆಗುತ್ತೆ. ಕಪಾಹಿಯೇ ಸ್ವಲ್ಪ ಗಡಿಬಿಡಿ ಮಾಡಿದ್ದಾಳೆ. ಆದರೆ ಆಕೆಗೆ ಆತನ ಬಗ್ಗೆ ತುಂಬಾ ಸ್ನೇಹ. ಹಣೆಬರಹವಿದ್ದಂತೆ ಆಗುತ್ತೆ.

ಕಾರ್ತಿಕ ಮಾಸದ ಮಧ್ಯಾವಧಿ. ಧನಶಿರಿಯಲ್ಲಿ, ನೀರು ದಿನೇದಿನೇ ಕಡಿಮೆಯಾಗುತ್ತಿದೆ. ನದಿಯ ಮಧ್ಯದಲ್ಲಿ ಕೆಸರಿನ ಪ್ರದೇಶ ಅಲ್ಲಲ್ಲಿ ಕಂಡುಬರುತ್ತಿದೆ. ಆ ಪ್ರದೇಶಗಳಲ್ಲಿ ಆಲೂಗಡ್ಡೆ, ಸಾಸಿವೆ, ಮೆಣಸು, ಬದನೇಕಾಯಿ - ಮುಂತಾದ ತರಕಾರಿಗಳು ಹುಲುಸಾಗಿ ಬೆಳೆಯುತ್ತವೆ. ಶ್ರಾವಣ ಮತ್ತು ಭಾದ್ರಪದ ಮಾಸದ ಮಳೆಗಾಲದಲ್ಲಿ ಮುಳುಗಡೆ ಆಗಿದ್ದ ಜಮೀನಿನ ಪೈರುಪಚ್ಚೆ ಈಗ ಕಾಣುತ್ತಿವೆ. ಗುಲಬ್ ಆಬಾದು ಮಾಡಿ ಮುಳುಗಡೆ ಆಗಿದ್ದ ಸುಮಾರು ನಾಲ್ಕು ಎಕರೆ ಜಮೀನಿನಲ್ಲಿ ಈಗ ನೀರು ನಿಂತಿಲ್ಲ. ಸ್ವಲ್ಪ ತಗ್ಗಾದ ಜಮೀನು. ನದಿಯ ಕಡೆಗೆ ಸ್ವಲ್ಪ ಮಣ್ಣು ತುಂಬಿ ಭರ್ತಿ ಹಾಕಿದರೆ ಆ ಜಮೀನು ಮಳೆಗಾಲದಲ್ಲಿ ಮುಳುಗಡೆ ಆಗೊಲ್ಲ. ಹಿಂಗಾರು ಬೆಳೆ ಬೆಳೆಯಬಹುದು. ತುಂಬು ಪ್ರವಾಹ ಬರದಿದ್ದರೆ ಮಳೆಗಾಲದಲ್ಲಿ 'ಬಾಓ' ಮತ್ತು ಶಾಲಿ ಬತ್ತದ ಪೈರು ನಾಟಿಹಾಕಬಹುದು.

ಭಾರಿ ಪ್ರವಾಹ ಬಂದರೆ ಎಲ್ಲವೂ ಮುಳುಗಡೆ. ಅದರ ಕಥೆಯೇ ಬೇರೆ.

ಹೊಸ ಆಸೆ ಮತ್ತು ಹೊಸ ಹುರುಪಿನಿಂದ ಗುಲಬ್ ಹೊಸ ಜಮೀನು ಆಬಾದು ಮಾಡುವುದರಲ್ಲಿ ತೊಡಗಿದ. ಬೆಳಿಗ್ಗೆಯಿಂದ ಸಾಯಂಕಾಲದವರೆಗೂ ಆತನಿಗೆ ಬೇರಾವ ಚಿಂತೆಯೂ ಇಲ್ಲ. ಖುದ್ದಾಗಿ ನಾಲ್ಕು ಎಕರೆ ಜಮೀನು ಆಬಾದು ಮಾಡಿ ಅದರ ವಾರ್ಷಿಕ ಪೋಡು-ಪಟ್ಟೆ ತನ್ನ ಹೆಸರಿಗೆ ಮಾಡಿಸಿಬಿಟ್ಟರೆ ಅವನಿಗೆ ಮತ್ತೆ ಯಾವ ಚಿಂತೆಯೂ ಇರುವುದಿಲ್ಲ. ಅದು ಕೈಗೂಡಿದರೆ ತಂದೆಯ ಆಸ್ತಿಪಾಸ್ತಿಯ ಪಾಲಿನ ಆಸೆ ಕೈಬಿಟ್ಟರೂ ತನ್ನ ಹೊಟ್ಟೆಬಟ್ಟೆ ಬಗ್ಗೆ ಯೋಚಿಸಬೇಕಾಗಿಲ್ಲ. ಪಿಕಾಸಿ, ಕೊಡಲಿ ಮತ್ತು ಕಾಡಿನ ಗಿಡಮರಗಳನ್ನು ಕಡಿಯುವ ಕಡಗತ್ತಿಯಿಂದ ಕಾಡಿನ ಗಿಡಗಂಟೆಗಳನ್ನು ಕತ್ತರಿಸಿ ಸಾಧ್ಯವಾದಷ್ಟು ಜಮೀನು

ಹಸನು ಮಾಡತೊಡಗಿದ. ಒಂದು ಮೊಳ ಜಮೀನು ಹಸನು ಮಾಡಿದರೆ ಅವನಿಗೆ ಖುಷಿಯೋ ಖುಷಿ. ತನ್ನ ಜಮೀನಿನ ಕಡೆ ನೋಡಿ ತನ್ನಷ್ಟಕ್ಕೆ ತಾನೇ ನಗುತ್ತಾನೆ. ನದಿ ಆತನ ಬಗ್ಗೆ ಕನಿಕರ ತೋರಿಸಿ ಇಂಥ ಫಲವತ್ತಾದ ಜಮೀನನ್ನು ಅವನಿಗಾಗಿ ಮೀಸಲಾಗಿರಿಸಿದೆ ಎನ್ನುವಂತಿದೆ. ಧನಶಿರಿಯ ಬಗ್ಗೆ ಆತನಿಗೂ ಸ್ನೇಹ. ಅದು ಪ್ರವಾಹದ ಸಂದರ್ಭದಲ್ಲೂ ಆ ಜಮೀನನ್ನು ಮುಳುಗಡೆ ಮಾಡದೆ ಮಣ್ಣುಮೆಕ್ಕಲು ತಂದು ಒತ್ತರಿಸಿ ಮತ್ತಷ್ಟು ಬೋರೆ ಮಾಡುತ್ತದೆ.

ಬಿಸಿಲಿನಲ್ಲಿ ಕೆಲಸ ಮಾಡಿ ಬೆವರಿನಿಂದ ಒದ್ದೆಯಾಗಿ ಆಯಾಸಗೊಂಡಾಗ ಬೂರುಗದ ಮರದ ನೆರಳಿನಲ್ಲಿ ಕುಳಿತುಕೊಳ್ಳುತ್ತಾನೆ. ಪಿಕಾಸಿ ಮತ್ತು ಕೊಡಲಿ ಹಿಡಿದು ಕೆಲಸ ಮಾಡಿ ಮಾಡಿ ಆತನ ಅಂಗೈ ಚರ್ಮ ಬಹಳ ಒರಟಾಗಿದೆ. ಆತ ತನ್ನ ಅಂಗೈಯನ್ನು ನೋಡಿಕೊಳ್ಳುತ್ತಾನೆ. ಅಂಗೈನಲ್ಲಿ ಭಾಗ್ಯರೇಖೆಯಿದೆ ಎಂಬ ಸಮಾಚಾರ ಆತನಿಗೆ ಗೊತ್ತಿದೆ. ಆದರೆ ಅರ್ಥವಾಗುತ್ತಿಲ್ಲ. ಅಂಗೈನಲ್ಲಿ ಅಲ್ಲಲ್ಲಿ ಕೆಲವು ರೇಖೆಗಳಿವೆ. ಅವುಗಳ ಅರ್ಥ ಯಾರಿಗೆ ಗೊತ್ತು?

ಆತ ಆಕಾಶದ ಕಡೆ ನೋಡುತ್ತಾನೆ. ಅಶ್ವೀಜ ಮಾಸದ ತಿಳಿಯಾಗಸ. ಆತನ ಮನಸ್ಸು ತಿಳಿಯಾಗುತ್ತದೆ. ತುಸು ದೂರದಲ್ಲಿ ಪಾಹಿಯಲಿದ್ದ ತನ್ನ ಮನೆ ಕಡೆ ನೋಡುತ್ತಾನೆ. ಅದೇ ಸ್ಥಳದಲ್ಲಿ ಮನೆ ಕಟ್ಟಬೇಕಾಗಿದೆ. ಮೊದಲಿನಿಂದಲೇ ಆತ ತೋಟ ಮಾಡಿದ್ದಾನೆ. ಭೀಮ ಜಾತಿಯ ಮತ್ತು ಇನ್ನಿತರ ಜಾತಿಯ ಬಾಳೆ ಗಿಡಗಳಲ್ಲಿ ಗೊನೆಗಳಿವೆ. ಊದಾಬಣ್ಣದ ನೆಲ್ಲವರೆ ಕಾಯಿನ ಗಿಡ ಚಪ್ಪರದ ತುಂಬಾ ಹಬ್ಬಿದೆ. ಈ ಸಾರಿ ಸಾಸಿವೆ ಫಸಲು ತುಂಬಾ ಹುಲುಸಾಗಿದೆ. ಆತನ ಕೈಗೆ ಸ್ವಲ್ಪ ಕಾಸು ಸಿಗುತ್ತೆ.

ಗುಲಬ್ ತನ್ನ ತೋಳುಗಳನ್ನು ನೋಡಿಕೊಂಡ. ಬಹುಶಃ ತೀರಾ ಕಪ್ಪಾಗಿದೆ. ಅದರಲ್ಲೇನು ಆಶ್ಚರ್ಯ? ಅಶ್ವೀಜ ಮಾಸದ ಬಿಸಿಲಿನಲ್ಲಿ ಇಡೀ ದಿನ ಕೆಲಸ ಮಾಡಬೇಕು. ಕಪ್ಪಾಗದೆ ಮತ್ತೇನು?

ಕುಳಿತಿದ್ದವನು ಎದ್ದು ಧನಶಿರಿಯ ನೀರಿಗೆ ಇಳಿದ. ಅದರ ನೀರು ಸ್ಫಟಿಕದಂತೆ ಶುಭ್ರವಾಗಿತ್ತು. ಕೈಕಾಲು ಮುಖ ಚೆನ್ನಾಗಿ ತೊಳೆದ. ಅನಂತರ ನದಿಯ ನೀರಿನಲ್ಲಿ ತನ್ನ ಮುಖ ನೋಡಿಕೊಂಡ. ನಿಜ. ಬಹಳ ದಿನಗಳಿಂದ ಆತ ಕನ್ನಡಿಯಲ್ಲಿ ತನ್ನ ಮುಖ ನೋಡಿಕೊಂಡಿರಲಿಲ್ಲ. ಮುಖ ಹೆಚ್ಚು ಕಪ್ಪಾಗಿಲ್ಲವೆಂಬುದನ್ನು ಗಮನಿಸಿದ. ಆದರೆ ಹೆಚ್ಚು ಶ್ರಮ ಪಟ್ಟಿದ್ದಾನೆ. ಕೊಂಚ ಬಡಕಲಾಗಿದ್ದಾನೆ. ಕೈಗಳಿಂದ ತನ್ನ ಕೆನ್ನೆ ಸವರಿಕೊಂಡ. ನಿಜ. ಕಣ್ಣಿನ ಕೆಳಭಾಗದಲ್ಲಿ ಆತನ ಕೆನ್ನೆ ತುಸು ಹತ್ತಿಕೊಂಡಿವೆ. ಹೊತ್ತಿಗೆ ಸರಿಯಾಗಿ ಊಟ ತಿಂಡಿಯಿಲ್ಲ. ಇಡೀ ದಿನವೆಲ್ಲಾ ಕೆಲಸ ಮಾಡಿದ ಮೇಲೆ ಸಾಯಂಕಾಲಕ್ಕೆ ಅಚ್ಚುಕಟ್ಟಾಗಿ ಅಡಿಗೆ ಮಾಡಿಕೊಂಡು ಊಟ ಮಾಡಲು ಶಕ್ತಿಯೇ ಇರುವುದಿಲ್ಲ. ಏನುತಿಂದರೂಅದು ರುಚಿಯಾಗಿ ಕಾಣುತ್ತೆ. ಆದರೆ ಆಗಿಂದಾಗ್ಗೆ ಮಾಂಸ, ಮೀನು, ಕೋಳಿ ಮುಂತಾದವುಗಳನ್ನು ತಿನ್ನದೆ ಹೋದರೆ ಶರೀರ ಸಹಕರಿಸುವುದಿಲ್ಲ.

ಹೇಗೋ ಅಶ್ವೀಜ ಮಾಸ ಕಳೆಯಿತು.

ಮನೆ ಸಹ - ಒಂದೇ ಆವರೆ ಸಾಲದು. ಕನಿಷ್ಠಪಕ್ಷ ಎರಡು ಬೇಕೇ ಬೇಕು. ಅಡಿಗೆ ಮನೆ ಒಂದು ಪ್ರತ್ಯೇಕವಾಗಿರಬೇಕು. ಒಂದು ವಾಸಕ್ಕೆ ಮತ್ತೊಂದು ಕುಳಿತುಕೊಳ್ಳುವುದಕ್ಕೆ.

ಬಹಳ ಕೆಲಸ ಇದೆ. ಹೆಚ್ಚಿಗೆ ದಿನಗಳು ಸಹ ಇಲ್ಲಾ. ಮಾರ್ಗಶಿರ ಮಾಸ ಬರುತ್ತಲೇ

ಕೈಯಲ್ಲಿ ಕುಡುಗೋಲು ಹಿಡಿಯಬೇಕಾಗುತ್ತದೆ. ಒಬ್ಬನೇ ಎರಡೇ ಕೈಗಳಿಂದ ಎಷ್ಟು ಮಾಡಲು ಸಾಧ್ಯ?

ಗುಲಚ್ ಬೂರುಗದ ಮರದ ಕಡೆ ಕಣ್ಣು ಹಾಯಿಸಿದ. ಬಹುಶಃ ಎಲ್ಲಾ ಎಲೆಗಳೂ ಹಣ್ಣಾಗಿ ಉದುರಿಹೋಗಿವೆ. ಮೂರುನಾಲ್ಕು ಹಳದಿ ಬಣ್ಣದ ಎಲೆಗಳು ಕೆಲವು ಕೊಂಬೆಗಳಲ್ಲಿ ಈಗಲೂ ಇವೆ. ಒಂದು ಕೊಂಬೆಯ ಮೇಲೆ ಹಕ್ಕಿಯೊಂದು ಗೂಡು ಕಟ್ಟಿರುವುದು ಆತನ ಕಣ್ಣಿಗೆ ಬಿತ್ತು. ಹುಲ್ಲು-ಕಸಕಡ್ಡಿಗಳಿಂದ ಮಾಡಿದ ಗೂಡು ಕೊಂಬೆಯಲ್ಲಿ ನೇತಾಡುತ್ತಿದೆ. ಅದೇ ರೀತಿಯ ಇನ್ನೂ ಕೆಲವು ಗೂಡುಗಳಿವೆ. ಅವುಗಳಲ್ಲಿ ಮೂರೋ ನಾಲ್ಕೋ ಹಳೆಯ ಗೂಡುಗಳು. ಬಹುಶಃ ಅವು ಕಳೆದ ವೈಶಾಖ ಮಾಸದಲ್ಲಿ ಕಟ್ಟಿದ ಗೂಡುಗಳು. ಒಂದೆರಡು ಹೊಸದರಂತೆ ಕಾಣಿಸಿದವು. ಒಂದೊಂದು ಹುಲ್ಲು-ಕಸಕಡ್ಡಿಯನ್ನು ಕಲೆ ಹಾಕಿ ಹಕ್ಕಿ ತಾನಾಗಿಯೇ ಅಚ್ಚುಕಟ್ಟಾದ ಗೂಡನ್ನು ಕಟ್ಟುತ್ತದೆ.

ಗುಲಚ್ ಸಹ ಒಂದು ಮನೆ ಕಟ್ಟುತ್ತಾನೆ.

ಆದರೆ ಮನೆ ಕಟ್ಟುವ ಮುನ್ನ ಹೇಗಾದರೂ ಮಾಡಿ ನದಿಯ ದಡದಲ್ಲಿ ಹೊಸದಾಗಿ ಸ್ವಲ್ಪ ಜಮೀನು ಆಬಾದು ಮಾಡುತ್ತಾನೆ. ಜೀವನಕ್ಕೆ ಹೊಲಗದ್ದೆಯೇ ಗತಿ. ಮನೆಗೆ ಬರುವ ಹುಡುಗಿ ಯಾವ ಧೈರ್ಯದಿಂದ ಬಂದಾಳು?

ಡಾಲಿಮ್ ಹಳ್ಳಿಗೆ ಹೋಗಿ ಒಂದು ದಿನ ಆತ ಚಂದ್ರನನ್ನು ಭೇಟಿ ಮಾಡಿದ. ನೀನು ಶತಮೂರ್ಖ, ಎಂದು ಹೇಳಿ ಚಂದ್ರ ಆತನಿಗೆ ಧೈರ್ಯ ಹೇಳಿದ. ನೀನು 'ಅಲೋನ್ಲಿ'ಯಾಗಿ ಜಗತ್ತಿನ ಎಲ್ಲ ಕೆಲಸಗಳನ್ನೂ ಮಾಡಬಲ್ಲೆಯಾ? 'ಮನಿ' ಹ್ಞ? ಹಣ? ಹತ್ತಿಪ್ಪತ್ತು ಖರ್ಚು ಮಾಡಬೇಕಾಗುತ್ತೆ; ಕೂಲಿ ಆಳುಗಳನ್ನು ನೇಮಕ ಮಾಡಿಕೊ. ನಾನು ಕರಕ್ಕೊಂಡು ಬರ್ತೀನಿ. ಮಿಕಿರ್ ಹಳ್ಳಿಯ ತುರು ಮತ್ತು ಯದು ಕೂಲಿಗೆ ಕರೆದರೆ ಬರ್ತಾರೆ. ಚೆನ್ನಾಗಿ ಕೆಲ್ಸ ಮಾಡಬಲ್ಲರು. ಅವರನ್ನು ಕೆಲಸಕ್ಕೆ ನೇಮಿಸಿ ನೀನು ಸ್ವಲ್ಪ ಸೂಪರ್‌ವೈಜ್ ಮಾಡು. ಸಾಧ್ಯವಾದರೆ ನಾನು ಬರ್ತೀನಿ. ಕೆಲ್ಸ ಆಗುತ್ತೆ. 'ಡು ನಾಟ್ ಅಫ್ರೈಡ್.'

ಚಂದ್ರನ ಇಂಗ್ಲಿಷ್ ಮಾತು ಗುಲಚ್‌ನಿಗೆ ತಿಳಿಯದಿದ್ದರೂ ಆ ಮಾತಿನ ಅರ್ಥವನ್ನು ಗ್ರಹಿಸಿದ. ಅವನ ಹತ್ತಿರ ಸುಮಾರು ಇಪ್ಪತ್ತೇಳು ರೂಪಾಯಿ ಇತ್ತು. ಬಾಳೆಹಣ್ಣು-ಕಬ್ಬು ಮಾರಿ ಕೂಡಿಟ್ಟಿದ್ದ. ನಿಜ, ನನಗೆ ಹಣದ ಅಗತ್ಯ ಏನಿದೆ? ಮಿಕಿರ್ ಹಳ್ಳಿಯ ಕೂಲಿಗಾರರನ್ನು ನೇಮಿಸಿ ಜಮೀನು ಮಾಡಿಸಿದರೆ ಏನೂ ಯೋಚಿಸಬೇಕಾಗಿಲ್ಲ.

ಆತ ಆ ವಿಷಯವನ್ನು ಕಪಾಹಿಗೂ ತಿಳಿಸಿದ.

ಕಪಾಹಿ ಹೇಳಿದಳು - "ಕೂಡಿಟ್ಟಿರೋ ಎಲ್ಲ ಹಣವನ್ನು ಖರ್ಚುಮಾಡಿ ಬರಿಗೈಯಾಗುವುದು ಸರಿ ಅಲ್ಲ."

ತರಾ ಹೇಳಿದಳು - "ಅಮ್ಮಾ, ನನ್ನ ಹತ್ತಿರವೂ ಸ್ವಲ್ಪ ಹಣ ಇದೆ ಅಲ್ವೇ? ಅಣ್ಣನಿಗೇ ಕೊಡಲೇ? ಕೊಟ್ಟರೆ ಅದಕ್ಕೆ ಬದಲಾಗಿ ಮನಗೆ ಕೆಲವು ಗುಂಟೆ ಜಮೀನನ್ನಾದರೂ ಕೊಡ್ತಾನೆ........"

"ನಿಮ್ಮ ಹಣ ಬೇಕಾಗಿಲ್ಲ" - ಎಂದು ಹೇಳಿ ಮೊದಲಿಗೆ ಗುಲಚ್ ನಿರಾಕರಿಸಿದರೂ ಕಪಾಹಿ ಮತ್ತು ತರಾಳ ಒತ್ತಾಯದ ಮೇಲೆ ಹದಿನೈದು ರೂಪಾಯಿಗಳನ್ನು ತೆಗೆದುಕೊಂಡ. ಸರಿ, ಈ ಹಣದಿಂದ ಎಷ್ಟು ಜಮೀನನ್ನು ಮಾಡಲು ಸಾಧ್ಯವೋ ಅದು ನಿಮ್ಮದೇ ಎಂದು ಹೇಳಿದ.

ಕಪಾಹಿ ನಗುತ್ತಾ ಹೇಳಿದಳು- "ನೀನು ನನ್ನದು-ನಿಮ್ಮದು ಎಂದು ಪ್ರತ್ಯೇಕ ಮಾಡುತ್ತಿದ್ದೀಯಾ? ನಾವು ಹೆಂಗಸರು. ಜಮೀನು ತೆಗೆದುಕೊಂಡು ಅಗಿದು ತಿನ್ನಲೇ? ಅದು ನಮ್ಮ ಜಮೀನು ಆಗುತ್ತದೆಯೇ?"

ಮಾತಿನ ಜಾಡು ಹಿಡಿದು ಗುಲಬ್ ಮುಗಳ್ನಗೆ ಬೀರಿದ. ತರಾ ಸಹ ಆ ಜಾಡಿನ ಅರ್ಥವನ್ನು ಅರಿತು ನಾಚಿಕೆಗೊಂಡಳು. ಮುಖ ಕೆಂಪೇರಿತು.

ಗುಲಬ್ - "ನನ್ನ ಜಮೀನು ಎಂದು ಹೇಳಲಾಗುವುದಿಲ್ಲ. ಅದಕ್ಕೆ ಯಾವ ಕಾರಣವೂ ಇಲ್ಲ. ಅದನ್ನು ನಮ್ಮ ಜಮೀನು ಎನ್ನಬಹುದು."

ಗುಲಬ್‌ನಿಗೆ ತನ್ನ ತಂದೆಯ ದೇಹಸ್ಥಿತಿ ಮೊದಲಿಗಿಂತಲೂ ಉತ್ತಮವಾಗಿದೆ ಎಂಬ ವಿಷಯ ಹಾಗೂ ತನ್ನ ತಾಯಿ ಅಲ್ಲಿರೋ ಸಮಾಚಾರ ಕಪಾಹಿಯಿಂದ ತಿಳಿಯಿತು. ತನ್ನ ತಾಯಿಯ ಸೇವಾಶುಶ್ರೂಷೆ ಹಾಗೂ ಪ್ರಯತ್ನದಿಂದಾಗಿ ತನ್ನ ತಂದೆಗೆ ಮರುಜನ್ಮ ಬಂತೆಂಬ ವಿಷಯ ಸಹ ತಿಳಿಯಿತು.

ಗುಲಬ್‌ನ ಮನಸ್ಸಿನ ವಿರಕ್ತಿಯನ್ನು ಗ್ರಹಿಸಿ ಕಪಾಹಿ ಹೇಳಿದಳು - "ಒಳ್ಳೆಯದೇ ಆಯಿತು. ನಿನ್ನ ತಾಯಿ ಗಂಡನನ್ನು ಬಿಟ್ಟು ಎಲ್ಲಿಯ ತನಕ ಈ ರೀತಿ ಇರಲು ಸಾಧ್ಯ? ಗಂಡ-ಹೆಂಡತಿ ನಡುವೆ ಜಗಳ ಆಗೇ ಆಗುತ್ತೆ."

ಗುಲಬ್ ಇಷ್ಟು ಮಾತ್ರ ಹೇಳಿದ - "ಭಗವಂತ ಒಳ್ಳೆಯದು ಮಾಡಲಿ.ಮತ್ತೆ ಮೊದಲಿನ ರೀತಿ ಆಗದಿರಲಿ."

ಕಪಾಹಿ ನಕ್ಕು ಹೇಳಿದಳು - "ಇನ್ನೊಬ್ಬಳು ಚೀನಿಮಾಣಿಯೊಡನೆ ನೀನು ಪರಾರಿ ಆದರೆ ಜಗಳ ಆಗಬಹುದು. ಆದರೆ ಈ ಸಾರಿ ನಿನ್ನ ತಾಯಿ ಮಾತ್ರ ಅಲ್ಲೇ ಇರ್‍ತಾಳೆ."

ಗುಲಬ್‌ನ ಮುಖವನ್ನು ನೋಡಿ ಕಪಾಹಿ ನಕ್ಕಳು. ಕಪಾಹಿಯ ಮಾತುಗಳನ್ನು ಕೇಳಿ ಗುಲಬ್‌ನಿಗೆ ಸಂತೋಷವಾಯಿತು. ಈ ಹುಡುಗಿ ಮಾತನಾಡಲು ಪ್ರಾರಂಭಿಸಿದರೆ ಆಕೆಯ ಬಗ್ಗೆ ಪ್ರೇಮ ಮೂಡುವುದು ಸಹಜ.

ತರಾ ಮನಸ್ಸಿನಲ್ಲೇ ಯೋಚಿಸತೊಡಗಿದಳು. ಗುಲಬ್ ತನ್ನನ್ನು ಕದ್ದು ಕರೆದುಕೊಂಡು ಪರಾರಿಯಾದರೂ ಚಿಂತೆಯಿಲ್ಲ. ಚಿಕ್ಕಮ್ಮ ಯಾವ ಕೋರ್ಟು-ಕಚೇರಿಗೆ ಹೋಗ್ತಾಳೆ? ನಮ್ಮಂಥ ಬಡವರ ಮದುವೆ ಶಾಮಿಯಾನ ಹಾಕಿಸಿ ಯಾವಾಗ ಮಾಡ್ತಾರೆ? ಮಳೆಗಾಲ ಮುಗಿಯಲಿ. ಆತ ಜಮೀನು ಆಬಾದು ಮಾಡಲಿ. ಬೆಳೆದ ದಿನಸಿ ಮನೆಗೆ ತರಲಿ. ಗುಲಬ್‌ನ ಮನಸ್ಸಿನ ಮರ್ಮವನ್ನು ಅರಿತ ಅನಂತರ ಅವನೊಡನೆ ಪರಾರಿಯಾಗುತ್ತೇನೆ. ಏನು ಮಹಾ ಆಗುತ್ತೆ?

ಚಂದ್ರನ ಸಲಹೆ ಕೆಲಸ ಮಾಡಿತು.

ಗುಲಬ್ ತನ್ನ ಜೊತೆಗೆ ಮಿಕಿರ್ ಹಳ್ಳಿಯ ತುರು ಮತ್ತು ಯದುವನ್ನು ಹಾಗೂ ನೇಪಾಲಿ ಹಳ್ಳಿಯ ಕೇಲಾ ಎಂಬ ನೇಪಾಲಿಯನ್ನು ಕೂಲಿಗೆ ಕರೆದುಕೊಂಡು ಕೆಲಸಕಾರ್ಯ ಮಾಡತೊಡಗಿದ. ಒಂದೇ ಸಮನೆ ಒಂದು ವಾರ ಕಾಡಿನ ಗಿಡ-ಗೆಂಟೆಗಳನ್ನು ಕತ್ತರಿಸಿ ಸುಮಾರು ಎರಡು ಎಕರೆ ಜಮೀನು ಹಸನು ಮಾಡಿದ.

ಗುಲಬ್‌ನ ಮನಸ್ಸು ಸಾಹಸದಿಂದ ತುಂಬಿ ತುಳುಕಾಡಿತು. ತಾನು ಕಷ್ಟಪಟ್ಟು ಮಾಡಿದ ಜಮೀನಿನ ಕಡೆ ನೋಡಿದಾಗ ಆತನಲ್ಲಿ ಅಭಿಮಾನ ಮೂಡುತ್ತದೆ. ಸುಮಾರು ಮೂರು ಎಕರೆ

ಹೊಸ ಜಮೀನು ಹಸನು ಮಾಡಿದ್ದಾನೆ. ಅದಕ್ಕಿಂತ ಮೊದಲಿದ್ದ ಅಲ್ಪಸ್ವಲ್ಪ ಜಮೀನು ಇದ್ದೇ ಇದೆ. ಇಂದು ಆತ ಜಮೀನಿನ ಒಡೆಯ. ಆತನಿಗೆ ಮತ್ತೇನೂ ಬೇಕಾಗಿಲ್ಲ. ನದಿಯ ಪಕ್ಕದ ಜಮೀನು ಫಲವತ್ತಾದ ಜಮೀನು. ಭಾರಿ ಪ್ರವಾಹ ಬರದಿದ್ದರೆ ಅದು ಒಂದು ಅಮೂಲ್ಯ ಆಸ್ತಿ.

ಧನಶಿರಿಯ ಕಡೆ ನೋಡಿ ಹೇಳಿದ - ಧನಶಿರಿಂ ಈ ಜಮೀನಿಗೆ ತುಸು ದೂರದಲ್ಲೇ ಹರಿದರೆ ಒಳ್ಳೆಯದು. ನನ್ನ ಜಮೀನಿನ ಹತ್ತಿರ ಈ ಕಡೆ ಹೊಸದಾಗಿ ಭರ್ತಿ ಮಣ್ಣು ಬೀಳುತ್ತೆ. ಆಗ ನೀರು ನನ್ನ ಜಮೀನಿಗೆ ನುಗ್ಗಿ ಹಾಳುಮಾಡುವುದಿಲ್ಲ.

ತನ್ನ ಜಮೀನಿನ ತುಸು ದೂರದಲ್ಲಿಯೇ ಧನಶಿರಿ ಹರಿಯುತ್ತಿರುವಂತೆ ಆತನ ಕಣ್ಣಿಗೆ ಗೋಚರಿಸಿತು. ಆತನ ಜಮೀನು ದಿನೇ ದಿನೇ ಎತ್ತರವಾಗುತ್ತಿದೆ. ಆತನ ಗದ್ದೆಯಲ್ಲಿ ತುಂಬಾ ಬತ್ತ-ಕಬ್ಬು ಮೊದಲಾದ ಫಸಲು ಬೆಳೆದು ನಿಂತಿದೆ. ನಯನ ಮನೋಹರವಾಗಿದೆ. ಹಚ್ಚನೆಯ ಹಸಿರು ಫಸಲಿನಿಂದ ಆತನ ಗದ್ದೆ ಕಂಗೊಳಿಸುತ್ತಿದೆ. ತರಾ-ಕಪಾಹಿ ಕಟಾವು ಕೆಲಸ ಮಾಡುತ್ತಿದ್ದಾರೆ. ಬತ್ತವನ್ನು ಮೂಟೆಗೆ ತುಂಬಿ ಹೆಗಲಿನ ಮೇಲೆ ಹೊತ್ತುಕೊಂಡು ಮನೆಗೆ ತೆಗೆದುಕೊಂಡು ಹೊಗುತ್ತಿದ್ದಾನೆ. ಹೊಸ ಬತ್ತದ ಕಂಪು ಮನೆಮಠದಲ್ಲೆಲ್ಲ ಹರಡಿದೆ.

ಸುತ್ತಲೂ ಸೊಂಪಾಗಿ ಕಂಗೊಳಿಸುತ್ತಿರುವ ಗದ್ದೆಗಳ ಮಧ್ಯೆ ಆತನೇ ಕಟ್ಟಿದ ಚಿಕ್ಕ ಮನೆಯಿದೆ. ನೆಲ ಉರುಬಿಕೊಂಡು ಅದರ ಮೇಲೆ ಊಟ ಮಾಡಬಹುದಾದ ಅಂಗಳವಿದೆ. ಕೊಳದ ಅಗತ್ಯವೇನೂ ಇಲ್ಲ. ಧನಶಿರಿಯಿರುವ ತನಕ ನೀರಿನ ಕೊರತೆಯಿಲ್ಲ.

ಅಂಗಳದ ಮುಂದೆಯೇ ಎರಡು ಹೂ ಗಿಡ ನೆಡುತ್ತಾನೆ.

ಜಮೀನು ಹಸನು ಮಾಡಲು ಆತನಿಗೆ ಮೂವತ್ತು ರೂಪಾಯಿ ಖರ್ಚಾಯಿತು. ಅದರಲ್ಲಿನ ಅರ್ಧ ದುಡ್ಡು ತರಾಳದು. ಆದರೆ ತರಾಳಿಗೆ ಜಮೀನು ಕೊಡುವುದಿಲ್ಲ. ಅವಳಿಗೆ ಜಮೀನಿನ ಅವಶ್ಯಕತೆಯಾದರೆ ಏನಿದೆ? ಸ್ವತಃ ನೇಗಿಲು ಹಿಡಿದು ಗದ್ದೆ ಉಳುತ್ತಾಳೆಯೇ? ಒಂದು ವೇಳೆ ಉಳುಮೆ ಮಾಡಿದರೂ. ಹದಿನೈದು ಕೊಡೋ ಕಡೆ ಇಪ್ಪತ್ತು ರೂಪಾಯಿ ಕೊಡ್ತೀನಿ. ಆದರೆ ಜಮೀನು ಕೊಡೋಲ್ಲ.

ಜಮೀನು ಅಂದರೆ ಆತನಿಗೆ ಬಹಳ ವ್ಯಾಮೋಹ.

ಫಲವತ್ತಾದ ಕೆಸರು ಗದ್ದೆ. ಒಳ್ಳೆಯ ಜಮೀನು. ದೇಹದ ಒಂದು ತುಂಡು ಮಾಂಸ ಕೊಟ್ಟರೂ ಜಮೀನು ಕೊಡೊಲ್ಲ.

ಮತ್ತೊಂದು ಅಂಶವೇನೆಂದರೆ ತರಾ ಮತ್ತು ಆಕೆಯ ಚಿಕ್ಕಮ್ಮ ಸಹ ಎಂದೂ ತಮ್ಮ ಹಣದ ಅಥವಾ ಜಮೀನಿನ ಬಗ್ಗೆ ಕಿಂಚಿತ್ ಸಹ ಪ್ರಸ್ತಾಪಿಸಿಲ್ಲ. "ಆ ಸ್ಥಳದಲ್ಲಿ ಬೇರೆ ಯಾರಾದರೂ ಜಮೀನು ಆಬಾದು ಮಾಡಿದ್ದಾರೆಯೇ? "ಎಂದು ತರಾ ಲೋಕಾಭಿರಾಮವಾಗಿ ಕೇಳಿದ್ದಳು.

"ಇಲ್ಲ, ಬೇರೆ ಯಾರು ಆಬಾದು ಮಾಡ್ತಾರೆ? ಆ ಜಮೀನೆಲ್ಲಾ ನಮ್ಮದೇ. ಬೇರೆ ಯಾರು ಕಣ್ಣು ಹಾಕಿಲ್ಲ." ಗುಲಬ್‌ನ ಮಾತಿನಲ್ಲಿ ಜಯಭೇರಿ ಹೊಡೆದ ಸಮ್ರಾಟನ ಆತ್ಮಾಭಿಮಾನದ ಸ್ವರವಿತ್ತು.

ತರಾ ಮತ್ತೇನೂ ಹೇಳಿಲಿಲ್ಲ.

ಗುಲಬ್‌ನ ಜಮೀನೇ ತರಾಳ ಜಮೀನು.

ಹಣ ಇರೋದಿಲ್ಲಾ. ಜಮೀನು ಇರುತ್ತೆ. ಆಕೆ ಕೊಡಿಟ್ಟ ಹಣದಿಂದ ಜಮೀನು ಹಸನು ಮಾಡಲು ತುಸು ಸಹಾಯ ಮಾಡಿದಳು. ಆದರಿಂದಲೇ ಅವಳಿಗೆ ಸಂತೋಷವಾಗಿದೆ.

ಅಷ್ಟರಲ್ಲೇ ಮಾರ್ಗಶಿರ ಮಾಸ ಬಂತು. ಮುಂಚಿತವಾಗಿ ಬರೋ ಚಳಿ ಕೊಯ್ಲಿಗೆ ಬರತೊಡಗಿದೆ. ಧನಶಿರಿಯ ದಡದಲ್ಲಿ ಮುಂಜಾನೆ ಮಂಜು ದಟ್ಟವಾಗಿ ಕವಿಯ ತೊಡಗಿದೆ. ಮಧ್ಯಾಹ್ನದ ಬಿಸಿಲು ಹಿತವಾಗತೊಡಗಿದೆ. ರಾತ್ರಿ ಹೊತ್ತು ರಜಾಯಿ ಹೊದಿಕೆ. ಆರಾಮವಾಗಿ ನಿದ್ರೆ.

ಈಗ ಹಿಂಗಾರು ಬೆಳೆಯ ಕಾಲವಲ್ಲ. ಆದಾಗ್ಯೂ ಗುಲಬ್ ತನ್ನ ಹೊಸ ಜಮೀನನ್ನು ಹಸನು ಮಾಡಿ ಸ್ವಲ್ಪ ಸಾಸಿವೆ ಮತ್ತು ತರಕಾರಿ ಬೀಜ ನೆಟ್ಟ. ಈಗಲೂ ಮೊಳೆತು ಗಿಡವಾಗಲು ಸಾಧ್ಯ. ನದಿ ಪಕ್ಕದ ಕೆಸರು ಗದ್ದೆ. ಫಲವತ್ತಾದ ಜಮೀನು.

ಗುಲಬ್‌ನಿಗೆ ಕೊಂಚವೂ ಆಯಾಸವಾಗುವುದಿಲ್ಲ. ಕೆಲಸ ಮಾಡಿದರೆ ಅವನಿಗೆ ಆನಂದವಾಗುತ್ತೆ. ಬಹುಶಃ ರಾತ್ರಿ ಹೊತ್ತು ಸಹ ನಿದ್ದೆ ಮಾಡೊಲ್ಲ. ಗದ್ದೆ ಕೆಲಸಕ್ಕೆ ಹೋಗುವುವವರೆಗೂ ಮನೆ ಕಟ್ಟಲು ಅಗತ್ಯವಾಗಿ ಬೇಕಾದ ಸಾಮಾನು ಜಮಾಯಿಸುವ ಕಾರ್ಯದಲ್ಲಿ ತೊಡಗಿರುತ್ತಾನೆ.

ಮರಕ್ಕೇನೂ ಅಭಾವವಿಲ್ಲ. ಸಾಕಷ್ಟು ಹುಲ್ಲು-ಸೊಪ್ಪುಸದೆ ಇದೆ. ಧನಶಿರಿ ದಡದಲ್ಲಿನ ಕಾಡಿನಲ್ಲಿ ಬಿದಿರು ಬೆಳೆದು ಬಲಿತಿದೆ. ಮಳೆಗಾಲದಲ್ಲಿ ಪ್ರವಾಹ ಬಂದಾಗ ನದಿಯಲ್ಲಿ ಮರದ ದಿಮ್ಮಿಗಳು ಕೊಚ್ಚಿಕೊಂಡು ಬರುತ್ತವೆ.

ಆಗಿಂದಾಗ್ಗೆ ಆತ ಸಹ ಡಾಲಿಮ್ ಹಳ್ಳಿಗೆ ಹೋಗಿ ಕಂಬಗಳು ಮತ್ತು ತೊಲೆ ಕಡಿದು ಜಮಾಯಿಸಿದ್ದಾನೆ. ಡಾಲಿಮ್ ಹಳ್ಳಿಗೆ ಪಶ್ಚಿಮದಲ್ಲಿರುವ ದೊಡ್ಡ ಕಾಡಿನಲ್ಲಿ ಒಳ್ಳೆಯ ಮರ ಸಿಗುತ್ತೆ. ಕಠಲುವಾ, ನಾಹರ್, ಸಲಖ್, ಸಾಲ್ ಸೋನಾರೂ ಮುಂತಾದ ಜಾತಿಯ ಮರಗಳು ಸಿಗುತ್ತವೆ. ಕೊಂಚ ಕಾಡಿನ ಒಳಗಡೆ ಹೋಗಿ ಆತ ಒಳ್ಳೆಯ ಮರವನ್ನು ಆರಿಸಿ ಆರಿಸಿ ಕಡಿದು ಹಾಕಿದ. ಮನೆ ಕಟ್ಟೋದೆ ಆದ ಮೇಲೆ ಬಂದೋಬಸ್ತಾಗಿ ಕಟ್ಟಬೇಕು ಅಂತ ಅಂದುಕೊಂಡ.

ನಾಟಿ ಸಮಯದಲ್ಲಿ ಮಾಡೋ ತರಾತುರಿ. ಕಟಾವು ಸಮಯದಲ್ಲಿ ಮಾಡಬೇಕಾಗಿಲ್ಲ. ಬತ್ತ ಬಲಿತು ಉದುರಿ ಹೋಗುವ ಮುನ್ನ ಕೊಯ್ದು ತಂದರೆ ಒಳ್ಳೆಯದು. ಹಕ್ಕಿ ಎಷ್ಟು ಬತ್ತ ತಿನ್ನಲು ಸಾಧ್ಯ? ಜಿಂಕೆ, ಕಾಡುಹಂದಿ ಅಥವಾ ಆನೆ ನುಗ್ಗಿ ತಿಂದು-ತುಳಿದು ಹಾಳು ಮಾಡದಿದ್ದರೆ ಅದೃಷ್ಟ. ಆನೆ ಎಲ್ಲಕ್ಕಿಂತಲೂ ಹೆಚ್ಚು ಅಪಾಯಕಾರಿ. ಒಂದು ಕಡೆಯಿಂದ ಹಾಳು ಮಾಡುತ್ತದೆ.

ಆದರೆ ಈ ಕಡೆ ಆನೆ ಕೆಲವು ಸಾರಿ ಬರುತ್ತೆ. ಆನೆಯ ಕಾಟದ ಭಯ ಡಾಲಿಮ್ ಹಳ್ಳಿಯವರಿಗಿದೆ. ದೊಡ್ಡ ಕಾಡು, ಅದಕ್ಕೆ ತೀರಾ ಸಮೀಪದಲ್ಲಿದೆ.

ಗುಲಬ್‌ನಿಗೆ ಜಮೀನು ಜಾಸ್ತಿಯಿಲ್ಲ. ಇದ್ದ ಅಲ್ಪಸ್ವಲ್ಪ ಜಮೀನಿನಲ್ಲಿ ಬತ್ತದ ನಾಟಿ ಹಾಕಿದ್ದಾನೆ. ಬೇರೆಯವರ ಗದ್ದೆ ಸಹ ಮಾಡುತ್ತಾನೆ. ಅವನಿಗೆ ಅದೃಷ್ಟ ಖುಲಾಯಿಸಿದರೆ ಮುಂದಿನ ವರ್ಷದಿಂದ ಬೇರೆಯವರ ಗದ್ದೆ ಮಾಡದಿದ್ದರೂ ಜೀವನ ಸಾಗುತ್ತದೆ. ಒಬ್ಬನೇ ಇದ್ದಾನೆ. ನಾಲ್ಕು ಎಕರೆ ಜಮೀನಿದೆ-ಬೇಕಾದಷ್ಟು ಆಯಿತು. ಆದರೆ ಈ ಸಾರಿ ತಾಯಿ ಇಲ್ಲ. ನಾಟಿ- ಕಟಾವು ಕೆಲಸ ಕಷ್ಟ ಆಗುತ್ತೆ. ಆದರೆ ಅದಕ್ಕೆ ಮುನ್ನವೇ ನಾಟಿ ನೆಡೋಳು ಮನೆಗೆ ಬರುತ್ತಾಳೆ. ಚಿಂತಿಸಬೇಕಾಗಿಲ್ಲ.

ಚಿಂತೆಯಿಲ್ಲ, ಜಮೀನು ಹಸನು ಮಾಡಿದ್ದಾಯಿತು. ನಾಟಿ ನೆಡೋಳು ಬರ್‍ತಾಳೆ.

ಗುಲಚ್‌ನಿಗಿರುವ ಇನ್ನೆರಡು ಅಭಾವವೆಂದರೆ ಒಂದು ಪಂಚೆ ಮತ್ತೊಂದು ಬನೀನು. ಆತ ತನ್ನ ತಾಯಿ ನೇಯ್ದಿದ್ದ ಒರಟು ಹಾಗೂ ಚಿಕ್ಕಪನ್ನದ ಪಂಚೆ ಉಟ್ಟುಕೊಂಡು ಬಂದಿದ್ದ. ಹೇಗೋ ಮಾಡಿ ಮಂಡಿ ಕೆಳಗಡೆ ಬರೋ ಹಾಗೆ ಉಡುತ್ತಾನೆ. ಆತನ ಬನೀನು ಹಳೆಯದು ಹೊಲಿಸಿ ಮೂರು ವರ್ಷ ಆಗಿತ್ತು. ಅಲ್ಲಲ್ಲಿ ಹರಿದು ಹೋಗಿತ್ತು. ಷರಾಯಿ ಅಪರೂಪವಾಗಿ ಧರಿಸುತ್ತಾನೆ. ಎಲ್ಲಿಯಾದರೂ ಹೋದಾಗ ಮಾತ್ರ ಒಮ್ಮೊಮ್ಮೆ ಅದನ್ನು ಧರಿಸುತ್ತಾನೆ. ಹೆಗಲಿನ ಮೇಲೆ ಟವಲೊಂದಿದ್ದರೆ ಸಾಕು.

ಆದರೆ ಆತ ಈ ಸಾರಿ ಸಾಕಿವೆ ಮಾರಿದ್ದೇ ಆದರೆ ಒಂದು ದೊಡ್ಡ ಪನ್ನದ ಪಂಚೆ ಮತ್ತು ಬನೀನು ಕೊಂಡುಕೊಳ್ಳುತ್ತಾನೆ.

# ಒಂಬತ್ತು

ಕಂಬಕ್ಕಾಗಿ ದೊಡ್ಡ ಕಾಡಿನಲ್ಲಿ ಕಡಿದು ಹಾಕಿದ್ದ ಸೋನಾ ಜಾತಿಯ ಮರಗಳನ್ನು ಕೆತ್ತಿ ಸರಿಪಡಿಸಲು ಗುಲಚ್ ಬೇಕಾದ ಆಯುಧಗಳನ್ನು ತೆಗೆದುಕೊಂಡು ಹೊರಟ. ಮಾರ್ಗಶಿರ ಮಾಸದ ಮಧ್ಯಾವಧಿ. ಬತ್ತದ ಕೊಯ್ಲು ಹೆಚ್ಚುಕಡಿಮೆ ಮುಗಿದಿತ್ತು. ತಗ್ಗು ಜಮೀನಿನ 'ಶಾಲಿ' ಬತ್ತ ಇನ್ನೂ ಚೆನ್ನಾಗಿ ಬಲಿತಿರಲಿಲ್ಲ. ಈ ಮಧ್ಯೆ ಸ್ವಲ್ಪ ಮನೆ ಕಟ್ಟುವ ಕೆಲಸಕಾರ್ಯಕ್ಕೆ ಕೈಹಾಕಿದರೆ ಮೇಲು. ಕಾಡಿನಲ್ಲೇ ಕಂಬಗಳನ್ನು ಕೆತ್ತಿ ಸರಿಪಡಿಸಿದ ಮೇಲೆ ಅವುಗಳನ್ನು ಜನರ ಸಹಾಯದಿಂದಲೋ ಅಥವಾ ಎತ್ತಿನ ಗಾಡಿ ಮೂಲಕವೋ ನದಿಯ ದಡಕ್ಕೆ ಸಾಗಿಸಬೇಕು. ನದಿಯ ದಡಕ್ಕೆ ಸಾಗಿಸಿ ಬಿಟ್ಟರೆ ಯಾವ ಯೋಚನೆಯೂ ಇಲ್ಲ.

ನೇಪಾಲಿ ಹಳ್ಳಿಗೆ ಹೋಗಿ ಆತ ತನ್ನ ದನಕರುಗಳ ಬಗ್ಗೆ ವಿಚಾರಿಸಿದ. ಅವುಗಳನ್ನು ಚೆನ್ನಾಗಿ ಸಾಕುತ್ತಿದ್ದರು. ಸ್ವಲ್ಪ ಮೈತುಂಬಿಕೊಂಡು ಕಟ್ಟುಮಸ್ತಾಗಿವೆ. ಧನಶಿರಿಯ ದಡದಲ್ಲಿ ಮೇವಿಗೆ ಅಭಾವವಿಲ್ಲ. ಹುಲಿ ಕೈಗೆ ಸಿಕ್ಕಬೀಳದೆ ಇರೋದು ಅದೃಷ್ಟ. ಮುಂದಿನ ವರ್ಷ ಆತ ದನಕರುಗಳನ್ನು ನೇಪಾಲಿ ವಶದಲ್ಲಿ ಬಿಡುವುದಿಲ್ಲ. ತಾನೇ ನೋಡಿಕೊಳ್ಳುತ್ತಾನೆ.

ಗುಲಚ್‌ನಿಗೆ ಬಾಯಾರಿಕೆಯಾಯಿತು. ಡಾಲಿಮ್ ಹಳ್ಳಿಯಲ್ಲಿ ಈಗ ಆತ ವಾಸಿಸುವುದಿಲ್ಲ. ಮುರಿದು ಬೀಳುತ್ತಿರುವ ಆತನ ಮನೆ ಇನ್ನೂ ಇದೆ. ಆದರೆ ಅದರಲ್ಲಿ ಈಗ ಆತನ ತಾಯಿ ಸಹ ಇಲ್ಲ. ಅಲ್ಲಿಗೆ ಹೋಗಲು ಆತನಿಗೆ ಮನಸ್ಸಾಗಲಿಲ್ಲ.

ಎಲ್ಲರೂ ಬತ್ತದ ಗದ್ದೆಯ ಕೆಲಸದಲ್ಲಿ ನಿರತರಾಗಿದ್ದಾರೆ. ಇಡೀ ಹಳ್ಳಿಯಲ್ಲೇ ಶಾಂತ ವಾತಾವರಣವಿದೆ. ಊಟ-ತಿಂಡಿ ಮುಗಿಸಿ ಹಳ್ಳಿಯ ಮಕ್ಕಳು-ಮರಿಗಳು, ಹೆಂಗಸರು ಎಲ್ಲರೂ ಗದ್ದೆ ಕೆಲಸದಲ್ಲಿದ್ದಾರೆ. ಎಲ್ಲರೂ ಕಲೆತು ಮಾಡಿದರೆ ತಾನೇ ಕೆಲಸ ಪೂರೈಸುವುದು.

ಕಪಾಹಿ ಮನೆಯ ಬಾಗಿಲು ಸ್ವಲ್ಪ ತೆರೆದಿರುವುದನ್ನು ಕಂಡು ಗುಲಚ್ ಮನೆಯೊಳಗಡೆ ಹೋದ.

''ಅಕ್ಕಾ.....''

ಒಳಗಡೆಯಿಂದ ಬಂದವಳು -ತರಾ.

ಗುಲಬ್‌ನನ್ನು ನೋಡಿ ಆಕೆ ಮೂಕಳಂತೆ ನಿಂತಳು.

ಮೆಲುದನಿಯಲ್ಲಿ ಕೇಳಿದಳು - "ಏನಣ್ಣಾ...."

"ಸರಿ, ನಿಮ್ಮ ಚಿಕ್ಕಮ್ಮ ಇಲ್ವೇ?"

"ಇಲ್ಲಾ, ಗದ್ದೆ ಕೆಲಸಕ್ಕೆ ಹೋಗಿದ್ದಾಳೆ."

"ಯಾವ ಗದ್ದೆಗೆ ಹೋಗಿದ್ದಾಳೆ?" ಮೋಡಾದ ಮೇಲೆ ಕುಳಿತು ತರಾಳ ಮುಖವನ್ನೇ ನೋಡುತ್ತಾ ಕೇಳಿದ.

"ಸಫಿಯತ್ ಗದ್ದೆಗೆ. ಎಲ್ಲಿಂದ ಬಂದೆ ಅಣ್ಣಾ?"

"ಪಾಹಿಯಿಂದ. ದೊಡ್ಡ ಕಾಡಿನಲ್ಲಿ ಕಂಬ, ತೊಲೆ ಎಲ್ಲದಕ್ಕೂ ಮರ ಕಡಿಸ್ತಿದೀನಿ. ಸರಿ, ತುಂಬಾ ಬಾಯಾರಿಕೆ. ಒಂದು ಲೋಟ ನೀರು ಕೊಡು. ನಿಮ್ಮ ಚಿಕ್ಕಮ್ಮ ಯಾವಾಗ ಬರ್ತಾಳೆ?"

"ಈಗೆಲ್ಲಿ ಬರ್ತಾಳೆ? ಸಾಯಂಕಾಲಕ್ಕೆ ಬರ್ತಾಳೆ."

"ನೀನೇಕೆ ಹೋಗಲಿಲ್ಲ.?"

ನೀರಿನ ಬಟ್ಟಲು ಆತನ ಮುಂದಿಟ್ಟು ತರಾ ಹೇಳಿದಳು - "ಹೋಗಲಿಲ್ಲ."

"ಯಾಕೆ?"

"ನಾನು ಹೋಗೊಲ್ಲ......"

"ಯಾಕೆ ಹೋಗೊಲ್ಲ?"

"ನಿಮಗೆ ಗೊತ್ತಿಲ್ವೇ?"

"ನನಗೇನು ಗೊತ್ತು? ಸರಿ. ಇನ್ನೊಂದು ಲೋಟ ನೀರು ಕೊಡು."

"ಟೀ ಮಾಡ್ತೀನಿ. ಕುಳಿತುಕೊ ಅಣ್ಣಾ. ಈ ಚಳಿಯಲ್ಲಿ ತಣ್ಣಗಿರೋ ನೀರು ಕುಡಿಯಬಾರದು" - ಎಂದು ಹೇಳುತ್ತಾ ಆಕೆ ಆತನ ಮುಖವನ್ನು ನೋಡಿದಳು. ಆತ ಸಹ ತರಾಳ ಮುಖ ನೋಡಿದ. ತರಾಳ ಮುಖ ದಿನೇ ದಿನೇ ಅರಳುತ್ತಲೇ ಇದೆ. ಆಕೆಯ ಎರಡೂ ಕೆನ್ನೆಗಳು ಗುಲಾಬಿಗಳೇ ಆಗಿವೆ. ಆಕೆಯ ದೇಹದ ಅಂಗಸೌಷ್ಠವ ಮನೋಹರವಾಗಿದೆ.

ಸ್ವಲ್ಪ ಹೊತ್ತಿನವರೆಗೆ ಇಬ್ಬರೂ ಒಬ್ಬರನ್ನೊಬ್ಬರೂ ನೋಡತೊಡಗಿದರು. ಅನಂತರ ಗುಲಬ್ ಕೇಳಿದ - "ಬತ್ತ ಕೊಯ್ಯಲು ನೀನೇಕೆ ಹೋಗಲಿಲ್ಲ, ತರಾ?"

ತರಾ ಬಾಗಿಲ ಬಳಿಗೆ ಹೋಗಿ ಬಗ್ಗಿ ಹೊರಗಡೆ ಕಣ್ಣು ಹಾಯಿಸಿದಳು. ಮಧ್ಯಾಹ್ನದ ಬಿಸಿಲು ಅಂಗಳದಲ್ಲಿ ಚೆಲ್ಲಿತ್ತು. ಅಕ್ಕಪಕ್ಕದಲ್ಲಿ ಯಾರೂ ಇಲ್ಲ. ಬತ್ತದ ಗದ್ದೆ ಕಡೆಯಿಂದ ಮೆಲ್ಲಗೆ ಗಾಳಿ ಬೀಸುತ್ತಿದೆ. ಹೊಸ ಬತ್ತದ ಕಂಪು ಸೂಸುತ್ತಿದೆ.

ತರಾ ಗುಲಬ್ ಬಳಿ ಬಂದು ಮಂಡಿಯೂರಿ ಕುಳಿತುಕೊಂಡಳು. ತಲೆ ತಗ್ಗಿಸಿಕೊಂಡು ಹೇಳಿದಳು - "ನಾನು ಇನ್ನೇನು ಹೇಳಲಿ? ನೀವು ಬಂದಾಗಲೆಲ್ಲಾ ಚಿಕ್ಕಮ್ಮ ಇರ್ತಾಳೆ. ನಾನು ಸಫಿಯತ್‌ನ ಮಗ ಆ ಮೂಗನನ್ನು ಒಪ್ಪಿಕೊಳ್ಳಬೇಕಾಗಿದೆ."

"ಯಾಕೆ?" - ಗುಲಬ್ ಜೋರಾಗಿ ಕೇಳಿದ.

"ಗಟ್ಟಿಯಾಗಿ ಮಾತನಾಡಬೇಡಿ. ಯಾರಾದರೂ ಕೇಳಿಸಿಕೊಂಡಾರು. ಆ ಮೂಗನಿಗೆ ಕೊಟ್ಟು ಮದುವೆ ಮಾಡಲು ನಿಶ್ಚಯಿಸಿದರೆ ನಾನು ನದಿಗೆ ಬಿದ್ದು ಪ್ರಾಣ ಬಿಡ್ತೀನಿ."

ಗುಲಬ್ ತರಾಳ ಕೈ ಹಿಡಿದು ಹೇಳಿದ - "ಆಗಲಿ, ಒಳಗಿಂದೊಳಗೆ ಸಂಚು ನಡೆಯುತ್ತಿದೆ. ನೀನು ಮೊದಲೇ ನನಗೆ ಯಾಕೆ ತಿಳಿಸಲಿಲ್ಲ."

ಅಸಹಾಯಕತೆ ತುಂಬಿದ ಕಣ್ಣುಗಳಿಂದ ತರಾ ಗುಲಬ್‌ನ ಮುಖವನ್ನು ನೋಡಿದಳು. ಅನಂತರ ಹೇಳಿದಳು - "ಹೇಗೆ ತಿಳಿಸಲಿ. ಎದುರುಗಡೆ ಚಿಕ್ಕಮ್ಮ ಇರುತ್ತಿರಲಿಲ್ಲವೇ? ನೀವು ತಾನೇ ಏನಂತೀರಿ?"

"ಸರಿ. ಆತನ ಗದ್ದೆಯಲ್ಲಿ ಬತ್ತ ಕೊಯ್ಯಲು ನೀನು ಹೋಗಲಿಲ್ಲ. ಒಳ್ಳೆಯ ಕೆಲಸ ಮಾಡಿದೆ. ತುಂಬಾ ಧೈರ್ಯ ಮಾಡಿದ್ದೀಯೆ. ಆದರೆ ನಿನ್ನ ಚಿಕ್ಕಮ್ಮನಾದರೂ ನನಗೆ ತಿಳಿಸಬಾರದಾಗಿತ್ತೆ? ನಿನ್ನ ಚಿಕ್ಕಮ್ಮ ಏನು ಹೇಳ್ತಾಳೆ?"

"ಚಿಕ್ಕಮ್ಮ ಏನು ಹೇಳ್ತಾಳೆ? ಸಿಕ್ಕಿಯತ್ ಜಮೀನಿನಲ್ಲಿ ನಾಟಿ-ಕೊಯ್ಲು ಮಾಡಿ ಜೀವನ ಸಾಗಿಸ್ತಾಳೆ. ತನ್ನ ಸ್ವಂತ ಜಮೀನಿದೆಯೆ? ಅಥವಾ ಮನೆಮಠ ಇದೆಯೇ? ನಮ್ಮ ಬಗ್ಗೆ ಯೋಚಿಸೋರು ಯಾರು?"

"ನಾನು. ನನಗೂ ನಿಮಗೂ ಏನು ಸಂಬಂಧವಿಲ್ಲ. ಅಲ್ವೇ? ಇಂಥ ಮುಖ್ಯವಾದ ವಿಷಯವನ್ನು ಇಲ್ಲಿಯವರಿವಿಗೂ ನನಗೆ ತಿಳಿಸದೆ ಗುಟ್ಟಾಗಿ ಇಟ್ಟಿದ್ದೀರಿ. ನನಗೂ ನಿಮಗೂ ಬಹಳ ದೂರ ಅಲ್ವೇ?"

ಗುಲಬ್‌ನ ಮಾತಿನಲ್ಲಿ ಆಕ್ಷೇಪದ ಸ್ವರ ಎದ್ದು ಕಾಣುತ್ತಿತ್ತು.

ತರಾ ಹೇಳಿದಳು - "ನಿಮ್ಮನ್ನು ಹೊರಗಿನವರು ಎಂದು ತಿಳಿದುಕೊಂಡಿದ್ದರೆ ಈ ವಿಚಾರ ನಿಮ್ಮ ಜೊತೆಯಲ್ಲಿ ಹೇಳುತ್ತಿದ್ದೆನೆ ? ನಮಗೆ ಸಹಾಯ ದೊರಕಬೇಕಾದರೆ ನಿಮ್ಮಿಂದಲೇ. ಬೇರೆ ಯಾರು ನಮಗೆ ಸಹಾಯ ಮಾಡ್ತಾರೆ? ಚಿಕ್ಕಮ್ಮ ಹೆಂಗಸು. ಯಾರಾದರೂ ಜಬರ್ದಸ್ತು ಮಾಡಿದರೆ ಬಹುಶಃ ಒಪ್ಪಿಕೊಳ್ಳಬಹುದು."

"ಜಬರ್ದಸ್ತಿ ಮಾಡ್ತಾರೆ? ಯಾರು ಜಬರ್ದಸ್ತಿ ಮಾಡೋರು? ಈ ಕೊಡಲಿ ನೋಡು. ನೋಡಿದೆ ತಾನೇ? ಒಂದೇ ಏಟಿಗೆ ಎರಡು ತುಂಡು ಮಾಡಿಬಿಡ್ತೀನಿ. ಆ ಜಿಪುಣನ ಹತ್ತಿರ ಸ್ವಲ್ಪ ದುಡ್ಡಿದೆ. ಅದಕ್ಕಾಗಿ ನಿನ್ನನ್ನು ಬಲತ್ಕಾರ ಮಾಡಿ ಕರೆದುಕೊಂಡು ಹೋಗ್ತಾನೆಯೇ? ಹಾಗಾದರೆ ನಾನು ಬದುಕೇ ಇಲ್ಲ. ಸತ್ತು ಹೋಗಿದ್ದೇನೆ ಅಲ್ವೇ?"

ತರಾಳ ಮುಖದಲ್ಲಿ ಮಂದಹಾಸ ಮಿಂಚಿತು. ಆಕೆಯ ಮನಸ್ಸಿನಲ್ಲಿ ಆಶೆ ಅಂಕುರಿಸಿತು. ಆಕೆಗೆ ಗುಲಬ್ ಆಶ್ರಯ ನೀಡಿ ರಕ್ಷಿಸುತ್ತಾನೆ. ಗುಲಬ್ ಆಶ್ರಯದಲ್ಲಿದ್ದರೆ ಆಕೆಗೆ ಯಾರ ಭಯವೂ ಇಲ್ಲ.

ಕುಳಿತಿದ್ದವಳು ಎದ್ದು ಹೇಳಿದಳು - "ನೀವು ಕೋಪಿಸಿಕೊಳ್ಳಬೇಡಿ ಅಣ್ಣಾ. ನಿಮ್ಮ ಜೊತೆಯಲ್ಲಿ ಹೇಳಬೇಕು ಅಂತ ದಿನಾಲೂ ನಾನು ಯೋಚಿಸ್ತೀನಿ. ಆದರೆ ಒಂಟಿಯಾಗಿ ನೀವು ಸಿಗೊಲ್ಲ. ಚಿಕ್ಕಮ್ಮನ ಎದುರುಗಡೆ ನಾನು ಈ ಮಾತು ಹೇಗೆ ತಿಳಿಸಲಿ? ಕುಳಿತುಕೊಳ್ಳಿ. ನಾನು ಸ್ವಲ್ಪ ಟೀ ಮಾಡ್ತೀನಿ. ನೀವು ಊಟ ಮಾಡಿದ್ದೀರಾ?"

"ಹೂಂ -"

ತರಾ ಅಡಿಗೆ ಕೋಣೆಗೆ ಹೋದಳು.

ಏನೋ ಯೋಚಿಸುತ್ತಾ ಗುಲಬ್ ಕುಳಿತೇ ಇದ್ದ. ನನ್ನೊಡನೆ ಹೇಳಲು ಆಕೆಗೆ ಸಮಯ ಸಿಕ್ಕಿಲ್ಲ. ಸರಿ. ಆದರೆ ಕಪಾಹಿ ಇಲ್ಲಿಯವರೆಗೆ ನನಗೆ ಈ ವಿಷಯ ಯಾಕೆ ತಿಳಿಸಲಿಲ್ಲ? ಹಣಕ್ಕೆ ಕೈಯೊಡ್ಡಿ ತರಾಳನ್ನು ಆ ಮೂಗನಿಗೆ ಮಾರಾಟ ಮಾಡುವುದರಲ್ಲಿ ಅರ್ಥವೇನು? ಹೆಂಗಸರ ಮನಸ್ಸನ್ನು ಅರಿಯುವುದು ಕಷ್ಟ. ಹಣ ಕಂಡರೆ ಕುರುಡಾಗುತ್ತಾರೆ.

"ತರಾ ....." - ಆತ ಕೂಗಿದ.

"ಏನಣ್ಣ ಅದು?"

"ನೀನು ಎಳ್ಳಷ್ಟೂ ಹೆದರಬೇಕಾಗಿಲ್ಲ. ಒಂದು ವೇಳೆ ಅಕ್ಕ ಸಹ ಹಣದ ಆಸೆಗೆ ಬಲಿಯಾಗಿ ನಿನ್ನನ್ನು ಸಫಿಯತ್‌ನ ಮಗ ಮೂಗನಿಗೆ ಕೊಟ್ಟು ಮದುವೆ ಮಾಡೋದೆ ಆದರೆ ನಿನ್ನ ಚಿಕ್ಕಮ್ಮನನ್ನು ಕತ್ತರಿಸಿ ಹಾಕ್ತೀನಿ. ಏನಾಗುತ್ತೋ ಆಗಲಿ."

ತರಾ ಏನೂ ಉತ್ತರ ಕೊಡಲಿಲ್ಲ.

ಈಗ ತರಾಳಷ್ಟು ಸುಖಿ ಮತ್ತ್ಯಾರೂ ಇಲ್ಲ. ಇಂದು ಆಕೆ ಒಬ್ಬಳೇ ಜಗತ್ತಿನೊಂದಿಗೆ ಹೋರಾಡಬಲ್ಲಳು. - ಆಕೆ ಇನ್ನು ಸೋಲುವುದಿಲ್ಲ. ಜೊತೆಗೆ ಗುಲಬ್ ಇದ್ದಾನೆ!

ಒಂದು ಬಟ್ಟಲಿನಲ್ಲಿ ಹೊಸ ಬತ್ತದ ಅವಲಕ್ಕಿ ತುಂಬಿಕೊಂಡು ಬಂದು ತರಾ ಗುಲಬ್‌ನ ಮುಂದಿಟ್ಟಳು. ಹಾಲು ಮತ್ತು ಬೆಲ್ಲ ಸಹ ಕೊಟ್ಟಳು. ಅನಂತರ ಒಂದು ಲೋಟ ಟೀ. ಇಂದು ಗುಲಬ್‌ನ ಬಳಿ ಆಕೆ ಸುತರಾಂ ನಿರ್ಭಯಳಾಗಿದ್ದಾಳೆ. ಅವಳಿಗೆ ಯಾವ ಭಯವೂ ಇಲ್ಲ; ಸಂಶಯವೂ ಇಲ್ಲ. ಇಂದು ಬಿಚ್ಚು ಮನಸ್ಸಿನಿಂದ ತನ್ನ ಮನಸ್ಸಿನಲ್ಲಿದ್ದ ವಿಚಾರವನ್ನು ಆಕೆ ಗುಲಬ್‌ನಿಗೆ ತಿಳಿಸಿದ್ದಾಳೆ.

ಅವಲಕ್ಕಿ ತಿನ್ನುತ್ತಾ ಗುಲಬ್ ಹೇಳಿದ - "ನೀನು ಎಳ್ಳಷ್ಟೂ ಚಿಂತಿಸಬೇಡ. ತರಾ ನಿನಗೆ ಗೊತ್ತೇ ಇದೆ ನನ್ನ ಮನೆ ಕಟ್ಟಿ ಆಗಲಿ. ನಿಮ್ಮನ್ನು ನನ್ನ ಮನೆಗೆ ಕರೆದುಕೊಂಡು ಹೋಗ್ತೀನಿ. ಈ ರೀತಿ ಬೇರೆಯವರ ಮಾತು ಕೇಳಿಕೊಂಡು ಇಲ್ಲಿರೂ ಅಗತ್ಯವಿಲ್ಲ. ಸ್ವಲ್ಪ ಜಮೀನು ಸಹ ಅಬಾದು ಮಾಡಿದ್ದೇನೆ. ನನ್ನವರು ಅಂತ ಬೇರೆ ಯಾರಿದ್ದಾರೆ?"

ಇಂದು ಗುಲಬ್‌ನ ಬಗ್ಗೆ ತರಾಳಲ್ಲಿ ಸ್ನೇಹಭಾವ ಮೂಡಿತು.

ಸರಿ, ಇಂದು ಒಂದು ರೀತಿಯಲ್ಲಿ ಗುಲಬ್ ಎಣಿಸಿದ್ದೆಲ್ಲ. ಫಲಿಸಿತು. ಇನ್ನೊಂದು ರೀತಿಯಲ್ಲಿ ಏನೂ ಫಲಿಸಲಿಲ್ಲ. ಇಂದು ಆತನೂ ಒಬ್ಬನೇ. ಆಕೆಯೂ ಒಬ್ಬಳೇ.

ಆಕೆ ಚಿಕ್ಕಮ್ಮನ ಜೊತೆಯಲ್ಲಿದ್ದಾಳೆ. ಅದರಿಂದ ಸ್ವಲ್ಪ ಧೈರ್ಯ. ಇಲ್ಲದಿದ್ದರೆ ಅವಳಿಗೆ ಧೈರ್ಯ ಎಲ್ಲಿಂದ ಬರಬೇಕು?

ಏನೂ ಉತ್ತರ ದೊರೆಯದ ಕಾರಣ ತರಾ ಹೇಳಿದಳು - "ಇನ್ನೂ ಸ್ವಲ್ಪ ಅವಲಕ್ಕಿ ಕೊಡಲೇ?"

"ಬೇಡ, ಇದ್ದರೆ ಒಂದು ಬೀಡ ಕೊಡು."

ತರಾ ತಾಂಬೂಲದ ಪೆಟ್ಟಿಗೆಯಿಂದ ಒಂದು ಬೀಡಾ ತೆಗೆದುಕೊಟ್ಟಳು. ಬೀಡಾ ಬಾಯಿಗೆ ಹಾಕಿಕೊಂಡು ಗುಲಬ್ ತರಾ ಕಡೆ ನೋಡಿ ಹೇಳಿದ - "ನಾನು ನಿನ್ನನ್ನು ಪ್ರೀತಿಸ್ತೀನಿ, ತರಾ. ಈ ಹಳ್ಳಿಯಲ್ಲಿ ಬೇರೆ ಯಾರ ಮನೆಗೂ ಹೋಗುವುದಿಲ್ಲ. ಕೇವಲ ನಿಮ್ಮ ಮನೆಗೆ ಮಾತ್ರ ಬರ್ತೀನಿ."

ಇದಕ್ಕಿಂತ ಇನ್ನೂ ಚೆನ್ನಾಗಿ ತನ್ನ ಪ್ರೀತಿಯನ್ನು ಅಭಿವ್ಯಕ್ತಗೊಳಿಸುವ ಕಲೆ ಅವನು ಕಲಿತಿಲ್ಲ.

ಪ್ರೀತಿಯಿಂದಾಗಿ ತರಾಳ ಕಣ್ಣು ಹನಿಗೂಡಿದುವು.

"ನಾನು ನಿಮ್ಮನ್ನು ಬಹಳ ಪ್ರೀತಿಸ್ತೀನಿ" ತರಾ ಹೇಳಿದಳು.

ಮಧ್ಯಾಹ್ನದ ಹೊತ್ತೇ ಇದಕ್ಕೆ ಸಾಕ್ಷಿಯಾಗಿತ್ತು. ಗುಲಬ್ ಮತ್ತು ತರಾ ಸುಳ್ಳು ಹೇಳಲಿಲ್ಲ.

"ನಾನು ಈಗ ಹೊರಟೆ. ನೀನು ಏನು ಯೋಚಿಸಬೇಡ. ಮನೆ ಕಟ್ಟಿ ಮುಗಿಸಿದ ಮೇಲೆ

ನಿಮ್ಮನ್ನು ಅಲ್ಲಿಗೆ ಕರೆದುಕೊಂಡು ಹೋಗ್ತೀನಿ."

ತರಾ ತುಸು ಹೊತ್ತಿನವರೆಗೆ ಸ್ವಲ್ಪ ಯೋಚಿಸಿದಳು. ಅನಂತರ ಹೇಳಿದಳು - "ನನ್ನ ಹತ್ತಿರ ಇನ್ನೂ ಆರು ರೂಪಾಯಿ ಇದೆ?"

"ಇರಲಿ. ಒಳ್ಳೆಯದೇ. ನೀನೇ ಇಟ್ಟುಕೋ. ಹೇಗೆ ಸಂಪಾದಿಸಿದೆ?"

"ಬಟ್ಟೆ ನೇಯ್ದು ಮಾರಿದ್ದೆ. ಅದರಲ್ಲಿ ಸ್ವಲ್ಪ ಹಣ ಬಂತು. ಮತ್ತು ಹಾಲಿನ ಮಾರಾಟದಲ್ಲಿ ಒಂದೆರೆಡು ರೂಪಾಯಿ ಸಿಕ್ಕಿತು."

"ಜೋಪಾನವಾಗಿಡು. ಕಷ್ಟಕಾಲಕ್ಕೆ ಬೇಕಾಗುತ್ತೆ."

"ನನಗೆ ಬೇಡ. ನೀವೆ ತೆಗೆದುಕೊಂಡು ಹೋಗಿ."

"ನಾನು? ನಾನೇಕೆ ತೆಗೆದುಕೊಳ್ಳಲಿ? ನನ್ನದು ಅಲೆದಾಟ. ದುಡ್ಡು ಎಲ್ಲಿ ಇಟ್ಟುಕೊಳ್ಳಲಿ?"

"ಇಟ್ಟುಕೊಳ್ಳೋ ಅಗತ್ಯವಿಲ್ಲ. ಬತ್ತ ಬೆಳೆಯೋದು, ಮನೆಗೆ ತರೋದು, ಜಮೀನು ಆಬಾದು ಮಾಡುವುದು, ಮನೆ ಕಟ್ಟೋದು - ಅಂತ ನೀವು ಒಬ್ಬರೆ ಎಷ್ಟು ಕೆಲಸ ಕಾರ್ಯ ಮಾಡಲು ಸಾಧ್ಯ. ದುಡ್ಡು ತೆಗೆದುಕೊಂಡು ಹೋಗಿ. ಯಾರ ಕೈಯಲ್ಲಾದರೂ ಕಂಬ-ತೊಲೆ ಕೆತ್ತಿಸೋ ಕೆಲ್ಸ ಮಾಡಿಸಿ. ಒಬ್ಬನೇ ಮನುಷ್ಯ ಎಲ್ಲಾ ಕೆಲಸವನ್ನೂ ಮಾಡಲು ಸಾಧ್ಯವೇ?"

ತರಾ ಹಣ ತರಲು ಒಳಗೆ ಹೋಗಲು ತಿರುಗಿದಳು.

"ತರಾ" - ಗುಲಬ್ ಜೋರಾಗಿ ಕೂಗಿದ.

ಆಕೆ ಹಿಂದಿರುಗಿ ನೋಡಿದಳು.

"ಹುಚ್ಚಿಯಂತೆ ಆಡಬೇಡ. ನಾನೇ ಸ್ವತಃ ಮಾಡಲಾಗದಿದ್ದರೆ ಬೇರೆಯವರನ್ನು ನೇಮಿಸ್ತೀನಿ. ದುಡ್ಡಿನ ವ್ಯವಸ್ಥೆಯನ್ನೂ ನಾನೇ ಮಾಡ್ತೀನಿ. ಆದರೆ ನಿನ್ನ ದುಡ್ಡಿನ ಅಗತ್ಯವಿಲ್ಲ. ನೀನೇ ಇಟ್ಟಕೊ. ಇದ್ದ ಹಣ ಬೇರೆಯವರಿಗೆ ಕೊಟ್ಟು ಬರಿಗೈ ಮಾಡಿಕೊಳ್ಳಬಾರದು."

ತರಾ ಹೇಳಿದಳು - "ನಿಮ್ಮ ಕಷ್ಟ ನೋಡಿ ಕೊಡಬೇಕು ಅನ್ನಿಸಿತು. ನೀವು ಸ್ವೀಕರಿಸಲು ಒಪ್ಪದೆ ಹೋದರೆ ನಾನೇನು ಮಾಡಲು ಸಾಧ್ಯ; ಹತ್ತಿರದಲ್ಲಿದ್ದರೆ ಅಗತ್ಯ ಬಿದ್ದಾಗ ನಿಮಗೆ ಸಹಾಯ ಮಾಡ್ತಿದ್ದೆ. ಆದರೆ ನೀವು ಧನಶಿರಿಯಿಂದ ಆ ಕಡೆ ದೂರದಲ್ಲಿದ್ದೀರಿ."

ತರಾಳ ಕೆನ್ನೆಯ ಮೇಲೆ ಮೆತ್ತಗೆ ತಟ್ಟಿ ಗುಲಬ್ ಹೇಳಿದ - "ಬಹಳ ಸಹಾಯ ಮಾಡೋಳು ಸಿಕ್ಕಿದ್ದಾಳೆ. ಏನು ಸಹಾಯ ಮಾಡಬಲ್ಲೆ? ಕಂಬ ಕೆತ್ತಬಲ್ಲೆಯಾ?"

ತರಾ ನಕ್ಕಳು.

ಗುಲಬ್ ಹೇಳಿದ - "ಈ ಹೊತ್ತು ಮರ ಕಡಿಯೋಕೆ ಆಗಲಿಲ್ಲ. ನಿನ್ನ ಜೊತೆಯಲ್ಲಿ ಮಾತಾಡ್ತಾ ಕುಳಿತುಕೊಂಡೇ ಕಾಲ ಕಳದೆ. ಸರಿ, ನಾನು ಬರ್ತೀನಿ."

"ನಿಮ್ಮ ಕೆಲಸಕಾರ್ಯಕ್ಕೆ ಅಡ್ಡಿ ಆಗೋದಾದರೆ ಯಾಕೆ ಬರ್ತೀರಿ? ಬರಬೇಡಿ."

ತರಾ ಹೇಳಿದಳು.

"ಬರದೆ ಹೇಗಿರಲಿ?" - ಗುಲಬ್ ಜೋರಾಗಿ ನಕ್ಕು ಹೇಳಿದ.

ಹೊರಡೋ ಸಮಯದಲ್ಲಿ ತರಾ ಹೇಳಿದಳು - "ಅಣ್ಣಾ, ನೀವು ಆಗಿಂದಾಗ್ಗೆ ಬರ್ತೀರಿ. ಸಫಿಯತ್ ಏನು ಮಾಡ್ತಾನೋ ಹೇಳೋಕೆ ಆಗೋಲ್ಲ. ಚಿಕ್ಕಮ್ಮನ ಮನಸ್ಸನ್ನು ಸಹ ಅರ್ಥ ಮಾಡಿಕೊಳ್ಳಲಾಗಲಿಲ್ಲ. ನನ್ನನ್ನು ಯಾವುದೋ ಒಂದು ಕಡೆ ಒಪ್ಪಿಸಿ, ನಿಶ್ಚಿಂತಳಾಗಲು ಬಯಸಿದ್ದಾಳೆ."

"ಎಲ್ಲರನ್ನೂ ಕತ್ತರಿಸಿ ತುಂಡುತುಂಡು ಮಾಡಿ ಬಿಡ್ತೀನಿ. ನೀನು ಹೆದರಬೇಡ. ನಾನು ಬರ್‍ತಾ ಇರ್‍ತೀನಿ. ಆ ಮೂಗನ ಇನ್ನೊಂದು ಕಣ್ಣನ್ನು ಸಹ ಕಿತ್ತು ಹಾಕಿದರೆ! ಸರಿ. ನಾನು ಬರ್‍ತೀನಿ."

"ಆ-ಗ-ಲಿ-" - ಎಂದು ತರಾ ಧ್ವನಿ ಎಳೆದು ಹೇಳಿದಳು.

ಗುಲಬ್‌ನನ್ನು ಇನ್ನೂ ಸ್ವಲ್ಪ ಹೊತ್ತು ಇರಿ ಎಂದು ಹೇಳಬೇಕೆನಿಸಿತು. ಆದರೆ ಹಾಗೆ ಹೇಳಲಿಲ್ಲ. ಹೇಳದೆ ಹೋದರೆ ಏನಾಗುತ್ತೆ? ಕಾಡಿಗೆ ಹೋಗಿ ಒಂದು ಕಂಬವನ್ನಾದರೂ ಕಿತ್ತಿ ಸಿದ್ಧ ಮಾಡುತ್ತಾನೆ.

ಒಬ್ಬಂಟಿಗನಾಗಿರುವ ಗುಲಬ್‌ನ ಬಗ್ಗೆ ಆಕೆಯಲ್ಲಿ ಪ್ರೀತಿ ಮೂಡಿತು.

# ಹತ್ತು

ಮಾರ್ಗಶಿರ ಮಾಸ. ದಿನಾಂಕ ಇಪ್ಪತ್ತೆಂಟರಂದು ಸಿಪರಿಯಾ ಹಳ್ಳಿಯ ಮೋಲೋಕಾನ ಮಗ ಕೆಲಾಈ ಜೊತೆಯಲ್ಲಿ ಚೇನಿಮಾಇಯ ವಿವಾಹ ನೆರವೇರಿತು. ಚೇನಿಮಾಇ ಸಫೀಯತ್‌ನ ತಮ್ಮನ ಮಗಳು. ಗುಲಬ್‌ನ ಜೊತೆಯಲ್ಲಿ ಪರಾರಿಯಾಗಿದ್ದ ದಿನದಿಂದ ಇಂದಿನವರೆಗೂ ಚೇನಿಮಾಇ ವಿವಾಹ ಬೇರೆಯವರೊಡನೆ ನೆರವೇರಿಸುವ ವ್ಯವಸ್ಥೆ ಮಾಡಿರಲಿಲ್ಲ. ಕಳಂಕಿನ ಹೆಣ್ಣನ್ನು ಮದುವೆಯಾಗಿ ಯಾರು ಸದಾ ಜನರ ನಿಂದೆ ಕೇಳ ಬಯಸುತ್ತಾರೆ? ಆದರೂ ಮೂರು ನಾಲ್ಕು ಮಂದಿ ಸಾಹಸ ಮಾಡಿ ಮುಂದೆ ಬಂದಿದ್ದರು. ಒಬ್ಬ ವಿಧುರನಾದರೆ ಮತ್ತೊಬ್ಬ ಕುರುಡ. ಚೇನಿಮಾಇ ತಂದೆ ಅವರಿಗೆ ಕೊಟ್ಟು ಮದುವೆ ಮಾಡಲು ಒಪ್ಪಲಿಲ್ಲ. ಓಡಿ ಹೋಗಿದ್ದರ ಓಡಿ ಹೋಗಿದ್ದಳು. ರಾತ್ರಿ ಓಡಿ ಹೋಗಿದ್ದಳು. ಬೆಳಗ್ಗೆ ಕರೆದುಕೊಂಡು ಬಂದೆ. ಅವಳಿಗೆ ಅಕ್ರಮ ಸಂತಾನವಾಗಲಿಲ್ಲವಲ್ಲಾ? ಗುಲಬ್‌ನ ಜೊತೆಯಲ್ಲಿ ಹೋಗಿದ್ದ ಮಾತ್ರಕ್ಕೆ ನಮ್ಮ ಹುಡುಗಿ ಕೆಲಸಕ್ಕೆ ಬಾರದವಳಾದಳೇ?

ಈ ವಿಷಯದಲ್ಲಿ ಸಫಿಯತ್‌ಗೆ ಹೆಚ್ಚು ಯೋಚನೆಯಿಲ್ಲ. ಚೇನಿಮಾಇ ತಂದೆ ದೀದಾರತ್‌ಗೆ ಬಹಳ ಚಿಂತೆ. ಹುಡುಗಿ ಸಹ ಅದೇ ಚಿಂತೆಯಲ್ಲಿ ಸ್ವಲ್ಪ ಕಪ್ಪಾಗಿದ್ದಾಳೆ. ಆದರೆ ಅವಳು ಹೊಲಗದ್ದೆಯಲ್ಲಿ ಕೆಲಸ ಮಾಡಲಿಲ್ಲ ಅನ್ನುವಂತಿಲ್ಲ. ಇದಲ್ಲದೆ ಹಳ್ಳಿಯ ಬಹುಮಂದಿ ಹೆಂಗಸರೂ ಚೇನಿಮಾಇಯಂತೆ ಮೊದಲಿಗೆ ಪರಾರಿಯಾಗಿದ್ದರು. ಆದ್ದರಿಂದ ಚೇನಿಮಾಇ ಬಗ್ಗೆ ಹೆಚ್ಚು ಟೀಕೆಟಿಪ್ಪಣಿ ಮಾಡುತ್ತಿರಲಿಲ್ಲ.

ದೀದಾರತ್ ಒಮ್ಮೊಮ್ಮೆ ಪಶ್ಚಾತ್ತಾಪ ಪಡುತ್ತಾನೆ. ಗುಲಬ್‌ನ ಜೊತೆಯಲ್ಲಿ ಹೊರಟುಹೋಗಿದ್ದಳು. ಆತನಿಗೆ ಕೊಟ್ಟು ಮದುವೆ ಮಾಡಬೇಕಾಗಿತ್ತು. ವ್ಯರ್ಥವಾಗಿ ಅವನ ಮನಸ್ಸಿಗೂ ನೋವಾಯಿತು ಮತ್ತು ಹುಡುಗಿ ಜೀವನ ಸಹ ಹಾಳಾಯಿತು.

ಈಗ ನನ್ನ ಕೊರಳಿಗೆ ನೇತು ಬಿದ್ದಿದ್ದಾಳೆ.

ಕೊನೆಗೆ ಸಫಿಯತ್‌ನೇ ಹೇಗೋ ಮಾಡಿ ಮೋಲೋಕನ ಮಗನೊಡನೆ ಚೇನಿಮಾಇಯ ಮದುವೆ ನಿಶ್ಚಿತ ಮಾಡಿದ. ಅವರದು ಬಡ ಕುಟುಂಬ. ಕೆಲಾಈಗೂ ಸಹ ಸುಮಾರು

ಮೂವತ್ತು ವರ್ಷ. ಅವನು ಬಹಳ ದಿನಗಳಿಂದಲೂ ಗೂರಲು ರೋಗದಿಂದ ನರಳುತ್ತಿದ್ದಾನೆ. ಅದನ್ನೇ ಕೆಲವರು ಅವನಿಗೆ ದಮ್ಮು ಬರುತ್ತೆ ಎಂದು ಹೇಳುತ್ತಾರೆ. ಕೆಲವರು ಅವನಿಗೆ ಅಸ್ತಮಾ ಎನ್ನುತ್ತಾರೆ. ಒಮ್ಮೆ ಗೋಲಾಘಾಟ್‌ಗೆ ಹೋಗಿ ತೋರಿಸಿದ್ದರು. ಆತನಿಗೆ ಕ್ಷಯ ಆಗಿಲ್ಲ ಎಂದು ವೈದ್ಯರು ಹೇಳಿದ್ದರು..

ಅಲೋಪತಿ ಚಿಕಿತ್ಸೆ ಪಡೆಯುವ ಶಕ್ತಿ ಆತನಿಗಿರಲಿಲ್ಲ. ಹಳ್ಳಿಯಲ್ಲಿ ಆ ರೀತಿ ಚಿಕಿತ್ಸೆ ಯಾರೂ ಮಾಡುವುದಿಲ್ಲ. ಒಂದು ಬಾರಿ ದೇವಿ ಹಾಕಲು ಡಾಲಿಮ್ ಹಳ್ಳಿಗೆ ಬಂದ ವ್ಯಕ್ತಿ ಹೊಡೆತ ತಿನ್ನದೆ ಹೇಗೋ ತಪ್ಪಿಸಿಕೊಂಡು ಪರಾರಿಯಾದ.

ಹಳ್ಳಿಯ ನಾಟಿ ಔಷಧ ಕೊಡುವವರಿಂದ ಚಿಕಿತ್ಸೆ ಪಡೆದು ಇಲ್ಲಿಯವರೆಗೆ ಹೇಗೋ ಕೆಲಾಈ ಬದುಕಿದ್ದಾನೆ. ಕಾಯಿಲೆ ಜಾಸ್ತಿಯಾಗದಂತೆ ತಡೆಗಟ್ಟಲು ಕೆಲಾಈ ಗಾಂಜಾ ಕುಡಿಯುತ್ತಾನೆ. ಅದನ್ನು ಕುಡಿದರೆ ಕೆಮ್ಮು ಸ್ವಲ್ಪ ಕಡಿಮೆಯಾಗುತ್ತೆ.

ಕೆಲಾಈಗೆ ತಾಯಿ ಇಲ್ಲ. ತಂದೆ ಮೋಲೋಕ ಬದುಕಿದ್ದಾನೆ. ಒಬ್ಬ ತಮ್ಮ ಇದ್ದಾನೆ. ಮೂರು ಜನರ ಕುಟುಂಬ.

ಕೆಲಾಈ ಬೆಳ್ಳಗಿಲ್ಲ; ಶ್ಯಾಮಲ ವರ್ಣ. ಆದರೆ ಕಾಯಿಲೆಯಿಂದಾಗಿ ರಕ್ತ ಕಡಿಮೆ. ಆದುದರಿಂದ ಸ್ವಲ್ಪ ಬಿಳಿಚಿಕೊಂಡಿದ್ದಾನೆ. ಸಾಧಾರಣವಾಗಿ ಎತ್ತರವಾದ ವ್ಯಕ್ತಿ. ಕಾಯಿಲೆಯಿಂದ ಬಡಕಲಾಗಿ ತೀರಾ ತೆಳ್ಳಗೆ ಆಗಿದ್ದಾನೆ. ಆದುದರಿಂದ ಇನ್ನೂ ಎತ್ತರವಾಗಿ ಕಾಣುತ್ತಾನೆ.

ತುಟಿಗಳ ಬಣ್ಣ ಹಳದಿ. ಕಣ್ಣುಗಳಲ್ಲಿ ರಕ್ತವಿಲ್ಲ. ಕೈಕಾಲು ಸಣ್ಣ. ಮಾತನಾಡಲು ಶಕ್ತಿಯಿಲ್ಲ. ರಾತ್ರಿಯೆಲ್ಲಾ ನಿದ್ದೆಯಿಲ್ಲ. ಮಲಗಿದರೆ ಕೆಮ್ಮು ಬರುತ್ತೆ. ಸಾಸಿವೆ ಎಣ್ಣೆ ತಿಕ್ಕಿ ತಿಕ್ಕಿ ಶರೀರದ ಮೇಲೆ ಮಚ್ಚೆಯಾಗಿದೆ. ವರ್ಷಕ್ಕೆ ಮೂರು ಅಥವಾ ನಾಲ್ಕು ಸಾರಿ ಮಾತ್ರ ಸ್ನಾನ ಮಾಡುತ್ತಾನೆ. ಸ್ನಾನ ಮಾಡಿದರೆ ಕೆಮ್ಮು ಬರುತ್ತೆ.

ಕಾಯಿಲೆಗೆ ತುತ್ತಾಗಿ ಸಣಕಲಾದ ಕಾರಣ ಕೆಲಾಈ ಬಹಳ ವಿನಯದಿಂದ ಮಾತನಾಡುತ್ತಾನೆ. ಎಂದೂ ಆತ ಸಿಟ್ಟಾಗುವುದಿಲ್ಲ. ಗಾಂಜಾ ಕುಡಿದರೂ ಹೆಚ್ಚು ಮತ್ತೇರುವುದಿಲ್ಲ. ಒಂದು ರೀತಿ ಅವನ ಜೀವನ ವ್ಯರ್ಥ. ಗದ್ದೆ ಕೆಲಸ ಮಾಡಲಾರ. ಮನೆಯ ಒಳಗೆ-ಹೊರಗೆ ಸಹ ಯಾವ ಗಡುಸಾದ ಕೆಲಸ ಮಾಡಲಾರ. ಆತನ ಆರೋಗ್ಯ ಚೆನ್ನಾಗಿದ್ದಾಗ ಒಲೆ ಮುಂದೆ ಕುಳಿತುಕೊಂಡು ಅಡಿಗೆ ಮಾಡುವುದು. ಬಿಸಿಲು ಬಂದರೆ ಅಂಗಳದಲ್ಲಿ ಕುಳಿತುಕೊಂಡು ಬುಟ್ಟಿ ಮೊದಲಾದವುಗಳನ್ನು ಹೆಣೆಯುವುದು. ದನಕರುಗಳನ್ನು ಮೇಯಿಸುವುದು - ಮೊದಲಾದ ಕೆಲಸ ಕಾರ್ಯ ಮಾಡುತ್ತಿದ್ದ. ಅಮಾವಾಸ್ಯೆ ಮತ್ತು ಹುಣ್ಣಿಮೆಯಲ್ಲಿ ಆತನಿಗೆ ಕೆಮ್ಮು ಜಾಸ್ತಿಯಾಗುತ್ತೆ. ಆ ಸಮಯದಲ್ಲಿ ಬಿಸಿ ಬೂದಿಯ ಶಾಖ ಕೊಟ್ಟುಕೊಂಡು ಒಂದು ಕಡೆ ಬಿದ್ದಿರುತ್ತಾನೆಯೇ ಹೊರತು ಯಾವ ಕೆಲಸಕಾರ್ಯ ಸಹ ಮಾಡಲಾರ.

ಗುಲಬ್‌ಗೆ ಕೆಲಾಈ ಚೆನ್ನಾಗಿ ಗೊತ್ತು. ಪಾಹಿಯಲ್ಲಿರುವ ಗುಲಬ್‌ನ ಜಮೀನು ಸಿಪರಿಯಾ ಹಳ್ಳಿಯ ನೈಋತ್ಯಕ್ಕಿದೆ. ಪಾಹಿಯಲ್ಲಿರುವ ಆತನ ಮನೆಯಿಂದ ಕೆಲಾಈ ಮನೆ ಒಂದು ಮೈಲಿಗಿಂತ ಹೆಚ್ಚಿಗೆ ದೂರವಿಲ್ಲ. ಮೋಲೋಕಾನ ಗದ್ದೆ ಸಹ ಪಾಹಿಯಲ್ಲಿದೆ. ಆಗಿಂದಾಗ್ಗೆ ಗುಲಬ್‌ನಿಗೆ ಹೊಲಗದ್ದೆ ಹತ್ತಿರ ಮೋಲೋಕಾನ ಭೇಟಿ ಆಗುತ್ತೆ. ಒಮ್ಮೆ ಆತ ಕೆಲಾಈಯಿಂದ

ಮೀನು ಹಿಡಿಯುವ ಒಂದು ಗಾಳ ತಂದಿದ್ದ. ಕೆಲಾಈ ಮರಗೆಲಸ ಚೆನ್ನಾಗಿ ಮಾಡುತ್ತಾನೆ.

ಆದರೆ ಕೆಲಾಈಯನ್ನು ನೋಡಿದಾಗಲೆಲ್ಲಾ ಇಷ್ಟು ಬಡಕಲಾಗಿದ್ದಾನೆ, ಯಾವ ಗಳಿಗೆಯಲ್ಲಾದರೂ ಪ್ರಾಣ ಹೋಗಬಹುದು ಅಂತ ಗುಲಬ್‌ಗೆ ಅನ್ನಿಸುತ್ತೆ. ಸಾಸಿವೆ ಎಣ್ಣೆ ತಿಕ್ಕಿದ್ದ ಆತನ ಶರೀರದಿಂದ ಬರೋ ವಾಸನೆ ಹಾಗೂ ಗಾಂಜಾದ ವಾಸನೆಯಿಂದ ಗುಲಬ್‌ಗೆ ಅಸಹ್ಯವಾಗುತ್ತೆ. ಆತ ತರುಣ, ಸ್ವಲ್ಪ ಚೊಕ್ಕಟವಾಗಿರೋದಕ್ಕೆ ಆಗೋದಿಲ್ವೇ?

ಕೆಲಾಈ ಜೊತೆಯಲ್ಲಿ ಚೇನಿಮಾಇ ವಿವಾಹ ನೆರವೇರಿದ ಸಂಗತಿ ಚಂದ್ರ ಮತ್ತು ಕಪಾಹಿ ಮೂಲಕ ಗುಲಬ್‌ನಿಗೆ ಗೊತ್ತಾಯಿತು. ಆ ಸುದ್ದಿ ಆತನಿಗೆ ಅರಿವಿಲ್ಲದಂತೆಯೇ ಸ್ವಲ್ಪ ಆಘಾತವನ್ನುಂಟು ಮಾಡಿತು. ಅವನ ಉತ್ಸಾಹ ಕೊಂಚ ತಣ್ಣಗಾಯಿತು.

ಆತನ ಮನಸ್ಸಿನ ಸ್ಥಿತಿಯನ್ನು ಬಹುಶಃ ಊಹಿಸಿಯೇ ಒಂದು ದಿನ ಕಪಾಹಿ ಹೇಳಿದಳು - "ಚೇನಿಮಾಇಯ ಮದುವೆ ಆದ ವಿಷಯ ತಿಳಿದು ನೀನು ಹತಾಶನಾಗಿದ್ದೀಯೆ ಅಂತ ಕಾಣುತ್ತೆ. ವಯಸ್ಸಿಗೆ ಬಂದ ಹೆಣ್ಣು ಮದುವೆ ಆಗದೆ ಮನೆಯಲ್ಲೇ ಕುಳಿತಿರೋಕೆ ಆಗುತ್ತದೆಯೇ? ನಿನಗೆ ಅವಳನ್ನು ಮದುವೆಯಾಗಲು ಇಷ್ಟ ಇದ್ದಿದ್ದರೆ ಸ್ವಲ್ಪ ಪ್ರಯತ್ನ ಪಡಬೇಕಾಗಿತ್ತು....."

ವಿರಕ್ತಿ ಮತ್ತು ಆಕ್ಷೇಪ ಭಾವದಿಂದ ಗುಲಬ್ ಹೇಳಿದ - "ಚೇನಿಮಾಇ ಮದುವೆ ಆದ ವಿಷಯ ತಿಳಿದು ನನಗೆ ಬೇಜಾರಿಲ್ಲ. ಆದರೆ ಕೆಲಾಈ ಗೂರಲು ರೋಗದವನು. ಅವನ ಜೊತೆಯಲ್ಲಿ ಆಕೆ ಹೇಗೆ ಜೀವನ ಸಾಗಿಸ್ತಾಳೆ? ನನಗೆ ಅವನನ್ನು ನೋಡಿದಾಗಲೆಲ್ಲಾ ಈಗಲೋ-ಆಗಲೋ ಸತ್ತು ಹೋಗ್ತಾನೆ ಅನ್ನಿಸುತ್ತೆ."

ಕಪಾಹಿ ಹೆಚ್ಚಿಗೆ ತಮಾಷೆ ಮಾಡೋ ಗೋಜಿಗೆ ಹೋಗಲಿಲ್ಲ. ವಯಸ್ಸಿಗೆ ಬಂದ ಹೆಣ್ಣೊಬ್ಬಳನ್ನು ಈ ರೀತಿ ದೌರ್ಭಾಗ್ಯದ ಕಡೆ ತಳ್ಳೋ ವಿಷಯವನ್ನು ಕುರಿತು ಕುಚೋದ್ಯ ಮಾಡುವುದು ಕಲ್ಲೆದೆಯ ಕೆಲಸ. ಕಪಾಹಿ ಮನಸ್ಸಿನಲ್ಲಿ ಸಹ ಚೇನಿಮಾಇ ಬಗ್ಗೆ ಸಹಾನುಭೂತಿ ಮೂಡಿತು.

ಆದರೆ ಆಗ ಏನು ಮಾಡುವುದಕ್ಕೂ ಸಮಯವಿರಲಿಲ್ಲ. ಯಾರದೋ ಮದುವೆ, ಯಾರೋ ಮಾಡ್ತಾ ಇದ್ದಾರೆ. ಅದರಲ್ಲಿ ಗುಲಬ್ ಮತ್ತು ಕಪಾಹಿ ಮಾತಿಗೆ ಕಿವಿಗೊಡುವುದಿಲ್ಲ.

ಬಾಯಿಬಿಟ್ಟು ಗುಲಬ್ ಏನೂ ಹೇಳದಿದ್ದರೂ ಅವನಿಗೊಂದು ತೀವ್ರ ಅನುಭವ ಉಂಟಾಯಿತು. ಚೇನಿಮಾಇಯ ಈ ದುರ್ದೆಶೆಗೆ ನಾನೇ ಕಾರಣ. ಒಂದು ವೇಳೆ ನಾನು ಆಕೆಯನ್ನು ಕದ್ದು ಕರೆದುಕೊಂಡು ಹೋಗದಿದ್ದರೆ ಅವಳಿಗೆ ಅಪಕೀರ್ತಿ ಬರುತ್ತಿರಲಿಲ್ಲ. ಆಗ ಯಾರಾದರೂ ಒಬ್ಬ ಒಳ್ಳೆಯ ತರುಣನೊಡನೆ ಆಕೆಯ ಮದುವೆ ಆಗುತ್ತಿತ್ತು.

ಬಹಳವಾಗಿ ಯೋಚನೆ ಮಾಡಿ ತನಗೆ ತಾನೇ ಸಮಾಧಾನ ಮಾಡಿಕೊಂಡ. ಒಂದು ವೇಳೆ ನಾನೇ ದೋಷಿ ಎಂದು ಹೇಳುವುದಾದರೆ ಸಂಪೂರ್ಣವಾಗಿ ನಾನೇ ದೋಷಿ ಅಲ್ಲ. ನಾನು ಅವಳನ್ನು ಕದ್ದು ಕರೆದುಕೊಂಡು ಹೋಗಿದ್ದು ಅವಳನ್ನು ಮದುವೆ ಆಗೋದಕ್ಕೆ. ಆದರೆ ನಮ್ಮ ಮುದುಕ ಮತ್ತು ಅವರಪ್ಪ ಈ ಸಂಬಂಧಕ್ಕೆ ಕಲ್ಲು ಹಾಕಿದರು. ನನ್ನದೇನು ದೋಷ?

ಆದಾಗ್ಯೂ ಚೇನಿಮಾಇ ಬಗ್ಗೆ ಆತನಿಗೆ ದುಃಖವಾಯಿತು. ಗಾಂಜಾ ಕುಡಿಯೋನು ಮತ್ತು ಚಿರಂತನ ರೋಗಿ ಜೊತೆಯಲ್ಲಿ ಆ ಬಡಪಾಯಿ ಜೀವನ ಸಾಗಿಸಬೇಕಾಯಿತು.

ಗುಲಬ್‌ನಿಗೆ ನಾನೇ ದೋಷಿ ಅನ್ನಿಸಿತು. ಅನಿರ್ವಚನೀಯ ಅಂತರ್ವೇದನೆಯೊಂದು ಆತನನ್ನು ಬಾಧಿಸತೊಡಗಿತು.

ಅದರ ಜೊತೆ-ಜೊತೆಯಲ್ಲೇ ಕೆಲಾಈ ಬಗ್ಗೆ ಸಹ ದಯೆ ಮೂಡಿತು. ಆತ ತರುಣ. ಆದರೆ ಬಡಪಾಯಿಗೆ ಯೌವನಾವಸ್ಥೆಯಲ್ಲಿಯೇ ಎಂಥ ರೋಗ? ಅವನ ಪ್ರಾಣ ಹಿಂಡಿ ಬಿಟ್ಟಿದೆ. ಅವನು ವಿನಯಿ, ಶಾಂತ ಸ್ವಭಾವದವನು. ಆತನ ಹಳದಿ ಬಣ್ಣದ ಮುಖ ನೆನೆದು ಅವನ ಬಗ್ಗೆ ಗುಲಬ್‌ನಿಗೆ ಕನಿಕರ ಉಂಟಾಯಿತು.

ಮದುವೆ ಮುಗಿದು ಹೋದರೆ ಚೇನಿಮಾಇಯಿಂದ ಕೆಲಾಈಗೆ ಸ್ವಲ್ಪ ಆರಾಮ ದೊರೆಯಬಹುದು.

ತನ್ನ ಮನಸ್ಸಿನ ಅಭಿಪ್ರಾಯವನ್ನು ಕಪಾಹಿಯ ಮುಂದೆ ಬಹಿರಂಗಪಡಿಸಲು ಬಯಸಿದ - "ಚೇನಿ ನನಗೆ ಶಾಪ ಹಾಕುತ್ತಾಳೆಯೇ? ನಾನಾಗಿಯೇ ಅವಳನ್ನು ಬಿಡಲಿಲ್ಲ. ಅವರಪ್ಪನಿಂದಲೇ ಅವಳ ನನ್ನ ಸಂಬಂಧ ಕಿತ್ತುಹೋಯಿತು."

ಕಪಾಹಿ ಹೇಳಿದಳು - "ಸರಿ, ಆದದ್ದು ಆಯಿತು. ಬೇರೆಯವರ ವಿಷಯ ತಲೆಗೆ ಹಚ್ಚಿಕೊಳ್ಳೋ ಅಗತ್ಯವಿಲ್ಲ. ಮಾರ್ಗಶಿರ ಮಾಸ ಮುಗಿದಿದೆ. ಮಾಘಮಾಸದಲ್ಲೇ ನೀನು ಸಂಸಾರ ಹೂಡು. ಮನೆ ಕಟ್ಟಿ ಆಯಿತೇನು?"

ಗುಲಬ್ ಇಷ್ಟು ಹೊತ್ತು ಚೇನಿಮಾಇ ಬಗ್ಗೆ ಯೋಚಿಸುತ್ತಿದ್ದ. ಆತ ಹೇಳಿದ - "ಕೆಲಾಈ ಮನೆಯವರಿಗೆ ನನ್ನ ಎಲ್ಲ ವಿಷಯವೂ ಗೊತ್ತಿಲ್ಲ ಅಂತ ಕಾಣುತ್ತೆ. ಗೊತ್ತಿದ್ದರೆ ಮದುವೆ ಮಾಡಿಕೊಳ್ಳಲು ಒಪ್ಪುತ್ತಿರಲಿಲ್ಲ."

"ಆ ವಿಷಯ ಎಷ್ಟು ಜನರಿಗೆ ಗೊತ್ತು? ಅದೆಲ್ಲವನ್ನೂ ಯಾರು ಕೆದಕಿಕೊಂಡು ತಿರಗ್ತಾರೆ? ಡಾಲಿಮ್ ಹಳ್ಳಿಯವರಿಗೆ ಬೇರೆ ಕೆಲ್ಸ ಇಲ್ಲ. ಆ ಮಾತನ್ನು ಕೆದಕಿಕೊಂಡು ತಿರಗ್ತಾರೆ. ಸಿಪರಿಯಾ ಹಳ್ಳಿಯವರಿಗೆ ಏನು ದರದು?"

ಸುಳ್ಳೋ ಅಥವಾ ನಿಜವೋ -ಕಪಾಹಿಯ ಮಾತು ಗುಲಬ್‌ನಿಗೆ ಸ್ವಲ್ಪ ಧೈರ್ಯ ನೀಡಿತು. ಚೇನಿಮಾಇಗೆ ಬಂದಿರೊ ಅಪಕೀರ್ತಿ ಮೋಲೋಕಾನಿಗೆ ಗೊತ್ತಾಗದಿದ್ದರೆ ಸರಿ. ಇಲ್ಲದಿದ್ದರೆ ಆಕೆ ಬೈಗುಳು ಕೇಳ್ತಾ ಇರಬೇಕಾಗುತ್ತದೆ. ಆ ಚಿರಂತನ ರೋಗಿ ಸಹ ಅವಳಿಗೆ ಕಿರುಕುಳ ಕೊಡ್ತಾ ಇರ್‍ತಾನೆ.

ಒಂದು ವೇಳೆ ಆ ವಿಷಯ ಅವರಿಗೆ ಗೊತ್ತಾಗದೆ ಹೋದರೆ ಆತ ತಾನೇ ಆಗಿಂದಾಗ್ಗೆ ಅಲ್ಲಿಗೆ ಹೋಗಿ ಆಕೆಯ ಸಮಾಚಾರ ತಿಳಿದು ಬರಬಲ್ಲ. ಅವನ ಮನೆಯಿಂದ ಚೇನಿಮಾಇಯ ಮನೆ ಜಾಸ್ತಿ ದೂರ ಇಲ್ಲ. ಆ ಹಳ್ಳಿಗೆ ಆಗಿಂದಾಗ್ಗೆ ಹೋಗಿ ಬರಬಹುದು. ಅವಳನ್ನು ನೋಡಿದರೆ ಆತನ ಮನಸ್ಸಿಗೆ ಸ್ವಲ್ಪ ನೆಮ್ಮದಿ ಸಿಗಬಹುದು.

ಚೇನಿಮಾಇ ಮದುವೆ ಮುಗಿದು ಹೋದ ಮೇಲೂ ಅನೇಕ ದಿವಸಗಳವರೆಗೂ ಗುಲಬ್‌ನ ಮನಸ್ಸಿಗೆ ಏನೋ ಕಸಿವಿಸಿ. ಗದ್ದೆಯಲ್ಲಿ ಬತ್ತ ಕೊಯ್ಯುವ ಸಮಯದಲ್ಲೂ ಆತ ಚೇನಿಮಾಇಯನ್ನು ಮರೆಯಲಾಗಲಿಲ್ಲ. ಆ ಬಡಪಾಯಿ ಜೀವನ ಹಾಳಾಯಿತು. ಹಾಳಾಗುತ್ತೆ. ಆ ರೋಗಿಯ ಸೇವೆ ಹೊರತು ವೈವಾಹಿಕ ಜೀವನದ ಯಾವುದೇ ಆನಂದ, ಯಾವುದೇ ತೃಪ್ತಿಯನ್ನೂ ಆಕೆ ಆಸ್ವಾದಿಸಲಾರಳು. ಕೆಲಾಈ ಬದುಕಿರೋ ತನಕ ಆ ಮೃತಪ್ರಾಯ ಮನುಷ್ಯನೊಡನೆ ಜೀವನ ಕಳೆಯಬೇಕು.

ಆತ ಅನೇಕ ಸಾರಿ ತನ್ನಷ್ಟಕ್ಕೆ ತಾನೇ ಹೇಳಿಕೊಂಡ - "ನಾನೇ ಅವಳಿಗೆ ಅನ್ಯಾಯ ಮಾಡಿದೆ. ನನ್ನಿಂದಲೇ ಈವೊತ್ತು ಚೇನಿಗೆ ಈ ಗತಿ ಬಂತು. ಚೇನಿ ನಿಜಕ್ಕೂ ನನ್ನನ್ನು ಕ್ಷಮಿಸಲಾರಳೇ."

ಒಂದು ವೇಳೆ ನಾನು ಬೇನಿ ಭೇಟಿ ಮಾಡಲು ಹೋದರೆ ಆಕೆ ನನಗೆ ಅವಮಾನ ಮಾಡಿ ಓಡಿಸಿದರೆ ಅದರಲ್ಲಿ ಆಶ್ಚರ್ಯವೇನೂ ಇಲ್ಲ.

"ನಾನೇ ದೋಷಿ " - ಆತ ಅಂದುಕೊಂಡ.

"ದೋಷಿ ನಾನೇ - ನಾನೇ."

# ಹನ್ನೊಂದು

ಪುಷ್ಯಮಾಸದ ಅಂತ್ಯದಲ್ಲಿ ಬತ್ತದ ಕಟಾವು ಮುಗಿಯುತ್ತೆ. 'ಮಾಘ ಬಿಹು' ಬಹಳ ದಿವಸಗಳಿಲ್ಲ. ಗುಲಚ್‌ನಿಗಿರುವ ಜಮೀನು ಸ್ವಲ್ಪ. ಆದುದರಿಂದ ಸ್ವಲ್ಪ ತರಾತುರಿ ಮಾಡಿ ಕಟಾವು ಕೆಲಸ ಬೇಗ ಮುಗಿಸಿದ. ಏಕೆಂದರೆ ಆತ ಮನೆ ಕಟ್ಟಬೇಕು.

ಸ್ವಲ್ಪ ದಿನಗಳಲ್ಲೇ ಆತ ಮನೆ ಕಟ್ಟಿ ಪೂರೈಸಿದ. ಅದಕ್ಕೆ ಮರದ ಕಂಬ ಮತ್ತು ತೊಲೆ ಹಾಕಿದ್ದಾನೆ. ಆದರೆ ಮನೆ ಚಿಕ್ಕದು. ಮೂರೇ ರೂಮುಗಳು. ಚಿಕ್ಕಚಿಕ್ಕ ರೂಮುಗಳು. ಅದರ ಎದುರುಗಡೆ ಒಂದು ದೊಡ್ಡ ಮನೆ ಕಟ್ಟಿದ. ಅದರಲ್ಲೊಂದು ಅಂಗಳ ಇದೆ. ಅವಕಾಶ ಸಿಕ್ಕಿದರೆ ಬಹಳ ಕೆಲಸ ಮಾಡಬಹುದು. ಆದರೆ ತಾನು ನೆಡಬೇಕೆಂದಿದ್ದ ಹೂವಿನ ಗಿಡಗಳನ್ನು ಹುಡುಕಿದರೂ ಆತನಿಗೆ ಹತ್ತಿರದಲ್ಲಿ ಎಲ್ಲೂ ಸಿಗಲಿಲ್ಲ. ಆದುದರಿಂದ ಅನಂತರ ನೆಡಲು ಯೋಚಿಸಿದ. ಜೋಳ ಮತ್ತು ಬತ್ತ ಇಡಲು ಒಂದು ದೊಡ್ಡ ಮಳಿಗೆ ಬೇಕು. ಆದುದರಿಂದ ಮುಂದಿನ ವರ್ಷ ಮಳಿಗೆ ಕಟ್ಟುತ್ತಾನೆ. ಈ ವರ್ಷ ಒಂದೇ ಒಂದು ಕಣಜ ಕಟ್ಟಿದ. ಆತನ ಹತ್ತಿರ ಎಷ್ಟು ಬತ್ತ ತಾನೇ ಇದೆ? ಮೊದಲು ಇದ್ದ ಹಜೀರ ಕಿತ್ತುಹಾಕಿ, ಅದನ್ನು ಒಂದು ಕೊಟ್ಟಿಗೆ ಮಾಡಿದ. ಈಗ ಅದರ ಅವಶ್ಯಕತೆಯಿಲ್ಲದಿದ್ದರೂ ಮಳೆ ಬಿದ್ದ ಮೇಲೆ ದನಕರುಗಳನ್ನು ತಗೊಂಡು ಬರುತ್ತಾನೆ. ಹಸು-ಎತ್ತು -ಎಮ್ಮೆಯಿಲ್ಲದ ಒಕ್ಕಲುತನ ಎಂಥದ್ದು? ಕೋಳಿ ಮತ್ತು ಬಾತುಕೋಳಿ ಸಾಕಲು ಏನಾದರೂ ಒಂದು ವ್ಯವಸ್ಥೆ ಮಾಡಬೇಕು. ಎಲ್ಲಿಯತನಕ ಮನೆಯಲ್ಲಿ ಮಕ್ಕಳುಮರಿ ಇರುವುದಿಲ್ಲವೋ, ಕೊಟ್ಟುಗೆಯಲ್ಲಿ ದನಕರು ಇರೋದಿಲ್ಲವೋ ಅಲ್ಲಿಯತನಕ ಅಂಗಳ ಬಿಕೋ ಅನ್ನಿಸುತ್ತೆ. ಆದರೆ ಕೋಳಿ ಮತ್ತು ಬಾತುಕೋಳಿಗಳಿಗೆ ಈಗಲೇ ಏನೂ ವ್ಯವಸ್ಥೆ ಮಾಡದೆಯಿದ್ದರೂ ಪರವಾಗಿಲ್ಲ. ಮಲಗೋ ಮನೆಯ ಒಂದು ಮೂಲೆಯಲ್ಲಿ ಪಂಜರದಲ್ಲಿ ಕವಚಿ ಹಾಕಿದರೂ ನಡೆಯುತ್ತೆ. ಇತ್ತೀಚೆಗೆ ನರಿ ಅಥವಾ ಬೇರೆ ಪ್ರಾಣಿಗಳು ಸಹ ಹೆಚ್ಚಿಗೆ ಬರೋದಿಲ್ಲ.

ಮಲಗೋಕೆ ಒಂದೆರಡು ಚೌಕಿ ಅವಶ್ಯಕತೆಯಿದೆ. ಮೂರನೆಯದರ ಅವಶ್ಯಕತೆ ಬಿದ್ದರೆ? ಒಂದರಲ್ಲಿ ತರಾ ಮತ್ತು ಆತ ಮಲಗಿಕೊಳ್ಳುತ್ತಾರೆ. ಇನ್ನೊಂದರಲ್ಲಿ ಕಪಾಹಿ ಮಲಗಿಕೊಳ್ಳುತ್ತಾಳೆ. ನೆಂಟರಿಷ್ಟರು ಬಂದರೆ ಮೂರನೆಯದರ ಅವಶ್ಯಕತೆ ಬೀಳುತ್ತೆ. ಹಾಗೇನೇ ನೆಲದ ಮೇಲೆ ಮಲಗಿಕೊಳ್ಳಬಹುದು. ಆದರೆ ಮದುವೆ ಮಾಡಿಕೊಂಡು ಮನೆಗೆ ಹುಡುಗಿ ಕರೆದುಕೊಂಡು ಬಂದ ಮೇಲೆ ನೆಲದ ಮೇಲೆ ಮಲಗಿಕೊಳ್ಳುತ್ತಾರೆ. ಮಲಗಲಿ ಬಿಡು. ಅವರು ಸಿರಿವಂತರು. ನಮಗೂ ಒಂದು ಕಾಲ ಬರುತ್ತೆ.

ಡಾಲಿಮ್ ಹಳ್ಳಿಯ ಮನೆಯಲ್ಲಿ ಎರಡು ಚೌಕಿಗಳಿವೆ. ಒಂದು ಸ್ವಲ್ಪ ಹಳೆಯದು; ಅದರ ಕಾಲುಗಳು ಸ್ವಲ್ಪ ಸಡಿಲಾಗಿವೆ. ಇನ್ನೊಂದು ಹೊಸದು. ಆರು ರೂಪಾಯಿ ಕೊಟ್ಟು ಆತನೇ ಕೊಂಡುಕೊಂಡಿದ್ದ. ಎರಡನ್ನೂ ತರಬೇಕಾಗುತ್ತೆ. ಇಲ್ಲಿಯತನಕ ತರೋದು ಸ್ವಲ್ಪ ಕಷ್ಟದ ಕೆಲಸ. ಗಾಡಿ, ದೋಣಿ ಅಥವಾ ಹೆಗಲಿನ ಮೇಲೆ - ಹೇಗೋ ತರಲೇಬೇಕು. ಒಂದು ಹೊಸ ಸಂಸಾರ ಹೂಡುವಾಗ ಸ್ವಲ್ಪ ಕಷ್ಟಪಡಲೇ ಬೇಕಾಗುತ್ತೆ.

ಕೇವಲ ಒಂದೇ ಒಂದು ಅನನುಕೂಲಕ್ಕೆ ಪರಿಹಾರ ಗುಲಚ್‌ನಿಗೆ ಸಿಗಲಿಲ್ಲ. ಹತ್ತಿರದಲ್ಲಿ ಎಲ್ಲೂ ಕೊಳ ಇಲ್ಲ. ನದಿ ಮನೆಗೆ ದೂರ. ಸುಮಾರು ಒಂದೂವರೆ, ಎರಡು ಫರ್ಲಾಂಗು ಆಗಬಹುದು. ನೀರು ತರೋದರಲ್ಲೇ ಬಡಪಾಯಿ ಬೆವರಿನಿಂದ ಒದ್ದೆಯಾಗುತ್ತಾಳೆ; ಮನೆಗೆ ತಳಹದಿ ಹಾಕುವಾಗ ನೀರಿಗಾಗಿ ತೋಡಿದ್ದ ಗುಂಡಿಯನ್ನು ಇನ್ನೂ ಸ್ವಲ್ಪ ಆಳವಾಗಿ ತೋಡಿದರೆ ಅದರಲ್ಲಿ ನೀರು ಬರುತ್ತೆ. ಆದರೆ ಆತ ಒಬ್ಬನೇ ಕಟ್ಟೋದು. ಬಾವಿ ತೋಡೋದು ಬಹಳ ಕಷ್ಟ. ಆದರೆ ಮನೆಗೆ ಹತ್ತಿರದಲ್ಲೇ ನೀರು ಇರಬೇಕು.

ಮನೆಯ ಪಕ್ಕದಲ್ಲೇ ನದಿಯಿರಬೇಕೆಂದು ಬಯಸುತ್ತಾನೆಂದು ಇದರ ಅರ್ಥ ಅಲ್ಲ. ನದಿ ಎಷ್ಟೇ ದೂರ ಆದರೂ ಆಗಲಿ. ಅವನ ಜಮೀನಿಗೆ ನದಿ ನೀರಿನಿಂದ ನಷ್ಟವಾಗದಿದ್ದರೆ ಸರಿ. ಅದೇ ಅವನ ಬಯಕೆ. ಧನಶಿರಿಯ ಬಗ್ಗೆ ಸ್ನೇಹವಿರುವುದರಿಂದಲೇ ಆತ ನದಿಯ ಹತ್ತಿರವೇ ತನ್ನ ಸಂಸಾರ ಹೂಡುತ್ತಿದ್ದಾನೆ. ಧನಶಿರಿ ಈಗ ಅವನೊಡನೆ ಹಗೆತನ ಸಾಧಿಸುತ್ತಾಳೆಯೇ?

ಬತ್ತದ ಗದ್ದೆ ಮಧ್ಯದ ದಾರಿಯಲ್ಲೇ ಹೊರಟು ಗುಲಚ್ ಒಂದು ದಿನ ಮೋಲೋಕಾನ ಮನೆ ಹತ್ತಿರ ಹೋದ. ಆದರೆ ಮೋಲೋಕಾನ ಮನೆಗೆ ಹೋಗಲಿಲ್ಲ. ಮೋಲೋಕಾನ ಕಿರಿಯ ಮಗ ತಿಖಿರ್ ಅವನಿಗೆ ದಾರಿಯಲ್ಲೇ ಸಿಕ್ಕಿ ಮಾತನಾಡಿದ.

"ಅಣ್ಣಾ, ಎಲ್ಲಿಗೆ ಬಂದಿದ್ದೆ?" - ಆತ ಕೇಳಿದ.

"ಸ್ವಲ್ಪ ಬಿದಿರುಗಳು ಬೇಕಾಗಿತ್ತು. ಜರಧ್ ಮನೆಯಲ್ಲಿ ಸಿಗುತ್ತೆ ಅಂತ ತಿಳಿದೆ. ಮನೆಯಲ್ಲಿ ಎಲ್ಲಾ ಚೆನ್ನಾಗಿದ್ದಾರೆ ತಾನೇ ?"

"ಚೆನ್ನಾಗಿದ್ದಾರೆ, ಪರವಾಗಿಲ್ಲ. ಆದರೆ ನಮ್ಮ ಅಣ್ಣನ ಆರೋಗ್ಯವೇ ಅಷ್ಟು ಚೆನ್ನಾಗಿಲ್ಲ. ಅಣ್ಣಾ, ನಿಮ್ಮ ಮನೆ ಕಟ್ಟಿ ಆಯಿತೇ ?"

"ಮನೆಯೇನೋ ಕಟ್ಟಿದ್ದೇನೆ; ಒಬ್ಬಂಟಿಗ."

"ಬಾ ಅಣ್ಣ, ಸ್ವಲ್ಪ ಹೊತ್ತು ಕುಳಿತಿದ್ದು ಹೋಗು" - ತಿಖಿರ್ ಹೇಳಿದ.

"ಈಗ ಆಗೋಲ್ಲ. ಸಾಕಷ್ಟು ಹೊತ್ತಾಗಿದೆ. ಸಾಧ್ಯವಾದರೆ ಈಗ ಜರಧ್ ಮನೆಯಿಂದ 'ಗಳ' ತೆಗೆದುಕೊಂಡು ಹೋಗ್ತೀನಿ. ಯಾವೊತ್ತಾದರೂ ಇನ್ನೊಂದು ದಿನ ಬರ್ತೀನಿ."

"ಸರಿ, ನಾನು ನಿಮ್ಮ ಮನೆ ಕಡೆ ಬರಬೇಕು ಅಂತ ಯೋಚಿಸ್ತಿದ್ದೆ. ನಿಮಗೆ ಸ್ವಲ್ಪ ಸಹಾಯ ಮಾಡಿದ್ದರೆ ಚೆನ್ನಾಗಿರುತ್ತಿತ್ತು. ಒಳ್ಳೆಯದು, ಒಂದು ದಿನ ಬರ್ತೀನಿ."

ಕೇಳಲೋ ಬೇಡವೋ ಅಂತ ಯೋಚಿಸಿ ಗುಲಚ್ ಕೇಳಿದ - "ನಿಮ್ಮ ಅತ್ತಿಗೆ ಹೇಗಿದ್ದಾಳೆ."

"ಹೂಂ, ಚೆನ್ನಾಗಿದ್ದಾಳೆ. ನಿನಗೆ ಗೊತ್ತಿಲ್ವೆಣ್ಣಾ, ಅತ್ತಿಗೆ ಬರಲಾಗಿ ನಾನು ಬಚಾವಾದೆ. ಅಡಿಗೆ ಮಾಡಿ ಮಾಡಿ ಸೊಂಟ ಬಿದ್ದೋಗಿತ್ತು."

ಗುಲಚ್ ಮತ್ತೇನೂ ಕೇಳಲಿಲ್ಲ. 'ಗಳ' ಹುಡುಕಲು ಆತ ಹಳ್ಳಿಯ ಒಳಗಡೆ ಹೋದ. ಹಳ್ಳಿಯ ಒಂದು ತುದಿಯಲ್ಲಿ ಮತ್ತು ಊರೊಳಗಡೆ ಹೋಗೋ ದಾರಿಯಲ್ಲೇ ಮೊದಲಿಗೆ

ಮೋಲೋಕಾನ ಮನೆ ಸಿಗುತ್ತೆ.

ತಿಖರ್ ಅಂಥ ಕೆಟ್ಟೋನು ಅಲ್ಲ. ಅವನ ಆರೋಗ್ಯ ಸಹ ಚೆನ್ನಾಗಿದೆ. ಆದರೆ ಆತನ ಬಣ್ಣ ಕಪ್ಪು. ನಮ್ರತೆಯಿಂದ ಮಾತುಕತೆ ಆಡುತ್ತಾನೆ. ಅಡಿಗೆ ಮತ್ತು ನೀರು ತುಂಬೋ ಕೆಲಸ ಮಾಡಿ ಮಾಡಿ ಆತನದು ಹೆಣ್ಣಿಗನ ಸ್ವಭಾವವಾಗಿತ್ತು. ಸದಾ ತಾನೇ ಅಡಿಗೆ ಮಾಡಿ ಬೇಕಾದುದನ್ನು ಆರಿಸಿಕೊಂಡು ತಿಂದು ಆತ ಸ್ವಲ್ಪ ಹೊಟ್ಟೆಬಾಕ ಮತ್ತು ದಪ್ಪಗಾಗಿದ್ದ. ಆತ ಸಹ ತರುಣ. ವಯಸ್ಸು 23 ಅಥವಾ 24 ಇರಬಹುದು.

ಗುಲಚ್ ಯೋಚಿಸಿದ - "ಮನೆಗೆ ಛಾವಣಿ ಹೊದಿಸೊ ದಿನ ತಿಖರ್‌ಗೆ ಬರಹೇಳಬೇಕು. ಛಾವಣಿ ಬಿಗಿಯೋ ಕೆಲ್ಸ ಆತನಿಂದ ಆಗಿದಿದ್ದರೂ ಛಾವಣಿ ಹುಲ್ಲು ಹೊದಿಸುವಾಗ ಅದನ್ನು ಮೇಲಕ್ಕೆ ಎತ್ತಿ ಎಸೆಯಬಲ್ಲ. ಕೊಂಚ ಸಹಾಯ ಮಾಡಬಲ್ಲ. ಛಾವಣಿಗೆ ಹುಲ್ಲು ಹೊದಿಸುವ ಕಾರ್ಯ ಒಬ್ಬನಿಂದಲೇ ಆಗುವುದಿಲ್ಲ. ಸಿಪರಿಯಾ ಹಳ್ಳಿಯ ಒಬ್ಬಿಬ್ಬ ತರುಣರನ್ನು ಬರಹೇಳಬೇಕಾಗುತ್ತೆ. ಈಗಂತೂ ಚಂದ್ರ ಎಲ್ಲಿ ಅಲೆಯುತ್ತಿದ್ದಾನೋ ಗೊತ್ತಿಲ್ಲ. ಅವನು ಸಿಕ್ಕಿದರೆ ಅವನಿಂದ ಸಾಕಷ್ಟು ಸಹಾಯ ಆಗುತ್ತೆ. ಆದರೆ ಆತ ಸುಮ್ಮನೆ ಅವರಿವರನ್ನು ಬೈಯುತ್ತಾ ತಿರುಗುತ್ತಿರುತ್ತಾನೆ.

ಮದುವೆ ಆದ ಮೇಲೆ ಚೇನಿಮಾಇಯ ಮುಖ ಹೇಗೆ ಆಗಿದೆ ಎಂಬುದನ್ನು ನೋಡಲು ಗುಲಚ್‌ನಿಗೆ ಬಹಳ ಕುತೂಹಲ ಉಂಟಾಯಿತು. ಆದರೆ ಅವರ ಮನೆ ಮುಂದೆ ಹೋದ ಕೂಡಲೇ ಆತ ಎದೆಗುಂದಿದ. ಆತನಿಗೆ ಕೆಲಾಈ ಪರಿಚಯವಿದೆ ಮತ್ತು ಅವನ ಜೊತೆಯಲ್ಲಿ ಮಾತುಕತೆ ಸಹ ಆಡಿದ್ದಾನೆ. ಮೋಲೋಕಾನನನ್ನು ಸಹ ಆತ ಅನೇಕ ಸಾರಿ ಭೇಟಿ ಮಾಡಿದ್ದಾನೆ. ತಿಖರ್ ಸಹ ಆತನಿಗೆ ಅಪರಿಚಿತನಲ್ಲ. ಆದರೆ ತಾನೇ ಬಂದು ಚೇನಿಮಾಇ ಬಗ್ಗೆ ವಿಚಾರಿಸಿದರೆ ಯಾರು ಏನು ಅನ್ನುತ್ತಾರೋ, ಯಾರಿಗೆ ಗೊತ್ತು? ಚೇನಿಮಾಇ ಸಹ ಏನು ಅಂದುಕೊಳ್ಳುತ್ತಾಳೋ. ಅವಳು ಮೊದಲೇ ಮಿತಭಾಷಿಣಿ. ಆಕೆಯ ಮನಸ್ಸಿನಲ್ಲಿ ದುಃಖವಿದ್ದರೂ ಅದನ್ನು ಬಾಯಿಬಿಟ್ಟು ಹೇಳುವುದಿಲ್ಲ. ಇಷ್ಟಾದರೂ ಆಕೆ ತನ್ನ ತಂದೆ ಜೊತೆಯಲ್ಲೂ ಏನೂ ಹೇಳೋದಿಲ್ವೇ? ಈ ಚಿರಂತನ ರೋಗಿ ಕತ್ತಿಗೆ ಕಟ್ಟಲು ಮಾತುಕತೆ ನಡೆಯುತ್ತಿದ್ದಾಗಲೂ ಏನೂ ಹೇಳಲಿಲ್ಲವೇ? ಮಾತನಾಡದಿರುವುದೇ ಅವಳಿಗಿರೋ ರೋಗ.

ಅಂಗಳದಲ್ಲಿ ಕುಳಿತು 'ಗಳ' ಕಡಿಯುತ್ತಾ ಚೇನಿಮಾಇ ಬಗ್ಗೆ ಗುಲಚ್ ಯೋಚಿಸತೊಡಗಿದ. ಅವಳಿಗೆ ತಾಯಿ ಇಲ್ಲ. ಮಲತಾಯಿ ಇದ್ದಾಳೆ. ಅವಳ ನಾಲಗೆ ಹರಿತ. ಅವರ ತಂದೆ ಮತ್ತು ದೊಡ್ಡಪ್ಪ ಯಮದೂತರಂತೆ ಇದ್ದಾರೆ. ಮಕ್ಕಳು ಅವರನ್ನು ಹುಲಿಯಂತೆ ಭಾವಿಸಿದ್ದಾರೆ. ಇಂಥ ಒಂದು ಕುಟುಂಬದಲ್ಲಿ ಬೆಳೆದ ಚೇನಿಮಾಇ ಮ ವವಾಗಿ ಮುಂಜಾನೆಯಿಂದ ಸಂಜೆಯವರೆಗೆ ಮನೆಯ ಎಲ್ಲ ಕೆಲಸವನ್ನೂ ಕಲಿತಿದ್ದಾಳೆ. ಬತ್ತ ಕುಟ್ಟುವುದು, ನೀರು ತುಂಬುವುದು, ನಾಟಿ-ಕೊಯ್ಲು ಕೆಲಸ, ಮುಗಾ ಸಿಲ್ಕಿನಿಂದ ದಾರ ತೆಗೆಯುವುದು, ಬಟ್ಟೆ ನೇಯುವುದು - ಎಲ್ಲಾ ಕೆಲಸ ಮಾಡುತ್ತಾಳೆ. ಅವಳ ಕೈಗಳಿಗೆ ಪುರುಸೊತ್ತಿಲ್ಲ. ಮಾತನಾಡುವುದಕ್ಕೂ ಆಕೆಗೆ ಸಮಯವಿಲ್ಲ.

ಈ ರೀತಿ ಬಿಡುವೇ ಇಲ್ಲದ ಕೆಲಸಕಾರ್ಯಗಳ ಮಧ್ಯೆ ಗುಲಚ್‌ನಿಗೆ ಅವಳ ಪರಿಚಯವಾಗಿತ್ತು. ಗುಲಚ್ ಸಹ ಮಿತಿಭಾಷಿ. ಆದರೆ ಯೋಚಿಸುವುದು ಬಹಳ. ಆತನ ತಾಯಿ ಸಹ ಬಹಳ ಕೆಲಸ ಮಾಡುತ್ತಾಳೆ. ಆತ ತನ್ನ ತಂದೆ ಜೊತೆಯಲ್ಲಿದ್ದಾಗ ಕೆಲಸಕಾರ್ಯ

ಮಾಡುತ್ತಿದ್ದವರು ಬೇರೆಯವರೇ. ಆತ ಊಟ ಮಾಡೋ ಸಮಯದಲ್ಲಿ ಮಾತ್ರ ಮನೆಗೆ ಬರುತ್ತಿದ್ದ. ಅನಂತರ ಗದ್ದೆ, ಬಯಲು, ಕಾಡು, ನದಿಯ ಘಟ್ಟ ಹಾಗೂ ದಡ - ಮುಂತಾದ ಜಾಗದಲ್ಲೆಲ್ಲಾ ಸುತ್ತಾಡುತ್ತಿದ್ದ. ಜನಗಳಿಂದ ದೂರವಿದ್ದ ಕಾರಣದಿಂದಲೇ ಬಹುಶಃ ಆತನ ಮನಸ್ಸು ಕೋಮಲವಾಗಿದೆ. ಜನಗಳ ಜೊತೆಯಲ್ಲಿ ಆತ ಕೋಪ ಮಾಡಿಕೊಳ್ಳೋದಿಲ್ಲ ಎನ್ನುವಂತಿಲ್ಲ. ಆದರೆ ಬಾನಿನ ಕಡೆ ನೋಡಿದಾಗ, ಕಾಡಿನ ಗಿಡಮರಗಳನ್ನು ಕಂಡಾಗ, ನದಿಯ ಕಡೆ ದೃಷ್ಟಿ ಹಾಯಿಸಿದಾಗ ಆತ ಹಸುಗೂಸಿನಂತಾಗುತ್ತಾನೆ. ಆತನ ಮನಸ್ಸು ಕರಗುತ್ತದೆ. ಆತ ಒಂದೇ ಸಮನೆ ನೋಡುತ್ತಿರುತ್ತಾನೆ. ಊಟ-ತಿಂಡಿ ಮರೆಯುತ್ತಾನೆ.

ಮಳೆಗಾಲದಲ್ಲಿ ಧನಸಿರಿಯಲ್ಲಿ ಪ್ರವಾಹ ಬಂದಾಗ ಆತ ದಡದ ಮೇಲೆ ಖುಷಿಯಿಂದ ನೆಗೆದಾಡುತ್ತಿದ್ದ. ಫಾಲ್ಗುಣ ಮಾಸದಲ್ಲಿ ಮಂದ ಮಂದವಾಗಿ ಬೀಸುವ ಮಾರುತವನ್ನು ಕಂಡು ಒಬ್ಬನೇ ಸಂತೋಷದಿಂದ ಕುಣಿದಾಡುತ್ತಿದ್ದ. ಅಷ್ಟೇ ಅಲ್ಲದೆ ಶ್ರಾವಣ ಮಾಸದಲ್ಲಿ ತುಂಬು ಪ್ರವಾಹ ಬಂತು ಅಂದರೆ ಆತ ಮನೆಯಲ್ಲಿ ಇರುತ್ತಿರಲಿಲ್ಲ. ಹೊರಗಡೆಯೇ ಕಾಲ ಕಳೆಯುತ್ತಿದ್ದ. ಮಳೆಯಲ್ಲಿ ನೆಂದು ಒದ್ದೆಯಾದರೆ ಅದೇ ಅವನಿಗೆ ಸ್ನಾನ. ಕಿಲಕಿಲ ಅಂತ ನಗೋದೇ ಕೆಲಸ.

ತನ್ನಷ್ಟಕ್ಕೆ ತಾನೇ ಮನಸ್ಸಿನಲ್ಲೆ ಹಾಡು ಹೇಳುತ್ತಿದ್ದ. ಆರಂಭ-ಅಂತ್ಯವಿಲ್ಲದ ಹಾಡು. ತನಗೇ ತಾನೇ ಎಷ್ಟೋ ಕತೆ ಸಹ ಹೇಳಿಕೊಳ್ಳುತ್ತಿದ್ದ. ತನ್ನ ಮನಸ್ಸಿನ ಆಶೆ-ನಿರಾಶೆಯ ಕತೆ. ದುಃಖ-ನಿರಾನಂದದ ಕತೆ. ಆತ ಒಬ್ಬನೇ ಅಲೆದಾಡುತ್ತಿದ್ದ. ಆತನದೇ ಒಂದು ಲೋಕ.

ಇಂಥ ಸ್ಥಿತಿಯಲ್ಲೇ ಚೇನಿಮಾಇ ಪರಿಚಯ ಆಗಿತ್ತು. ಚೇನಿಮಾಇಗೆ ಅವನು ತುಂಬಾ ಹಿಡಿಸಿದ. ಚೇನಿಮಾಇ ಸಹ ಆತನನ್ನು ತುಂಬಾ ಪ್ರೀತಿಸುತ್ತಿದ್ದಳು. ಇಷ್ಟು ಮಾತ್ರ ನಿಜ. ಆ ಪ್ರೀತಿಯನ್ನು ಅಭಿವ್ಯಕ್ತಗೊಳಿಸುವ ಕಲೆ ಅವಳಿಗೆ ಗೊತ್ತಿರಲಿಲ್ಲ. ಅವಳ ಮನಸ್ಸು ಬೆರೆಯಿತು. ಇಬ್ಬರೂ ಕೂಡಿ ಸಂಸಾರ ಹೂಡುವ ಕನಸು ಕಂಡರು. ಇದರ ಬಗ್ಗೆ ಕುಸುಕುಸು ಮಾತು ನಡೆದಿತ್ತು. ಆದರೆ ಎರಡು ಕುಟುಂಬದ ಯಜಮಾನರಲ್ಲಿ ಸ್ವಲ್ಪ ಮನಸ್ತಾಪವಿತ್ತು. ಗುಲಬ್‌ನ ಜೊತೆಯಲ್ಲಿ ಚೇನಿಮಾಇ ಮದುವೆ ಮಾಡಲು ಒಪ್ಪಲಿಲ್ಲ.

ಒಂದು ರಾತ್ರಿ ಇಬ್ಬರೂ ಪರಾರಿಯಾಗಿದ್ದರು. ಆ ರಾತ್ರಿ ಗುಲಬ್ ತನ್ನ ಬಾಹುದ್ವಯಗಳಿಂದ ಚೇನಿಮಾಇಯನ್ನು ಆಲಂಗಿಸಿಕೊಂಡು ಅವಳ ಅಂತರಂಗದ ಪ್ರೀತಿಯ ಸವಿಯನ್ನು ಸವಿದ. ಆದರೆ ಅದೇ ಮೊದಲು ಮತ್ತು ಅದೇ ಕೊನೆ.

ಚೇನಿಮಾಇ ಏನು ಹೇಳಲಿಲ್ಲ.

ಗುಲಬ್ ಬೇರೆಯವರ ವಿರುದ್ಧವಾಗಿ ಪ್ರತಿವಾದ ಮಾಡಲಾರದ ಕಾರಣ ತನ್ನ ತಂದೆ ಮನೆ ಬಿಟ್ಟುಬಿಟ್ಟ. ಯಾರು ಗೆದ್ದರು? ಯಾರು ಸೋತರು? ಯಾರಿಗೂ ಅರ್ಥವಾಗಲಿಲ್ಲ.

ಚೇನಿಮಾಇ ವಿವಾಹ ಕೆಲಾಈ ಜೊತೆಯಲ್ಲಿ ನೆರವೇರಿತು. ಬಹುಶಃ ಗುಲಬ್ ಸಹ ಒಬ್ಬ ಹುಡುಗಿ ತರ್ತ್ತಾನೆ. ಇಬ್ಬರೂ ಜೊತೆಜೊತೆಯಲ್ಲೇ ಇರುತ್ತಾರೆ. ಆದರೆ ಎರಡು ಸಂಸಾರ. ಇಬ್ಬರು ಪರಸ್ಪರ ಅಪರಿಚಿತರಾಗಿ. ಮೊದಲಿನ ಪರಿಚಯ ಅವರು ಮರೆಯಬೇಕಾಗುತ್ತದೆ. ಗುಲಬ್ ಸಹ, ಚೇನಿಮಾಇ ಸಹ.

ಗುಲಬ್‌ನ ಮನಸ್ಸು ಬಹಳ ಭಾರವಾದಂತೆ ಭಾಸವಾಯಿತು.

# ಹನ್ನೆರಡು

ನದಿಯ ದಡದಲ್ಲಿನ ಬೂರುಗದ ಮರದಲ್ಲಿ ಕೆಂಪು ಬಣ್ಣದ ಹೂವು ಬರುವ ಕಾಲವಾಗಿತ್ತು. ಎಲೆಗಳು ಉದುರಿ ಹೋಗಿದ್ದ ಮರಗಳು ಹೊಸ ಚಿಗುರು ಬರುವ ಕಾಲವನ್ನು ಕಾಯುತ್ತಿದ್ದವು.

ಧನಸಿರಿ ಬತ್ತಿಹೋಗಿತ್ತು. ಅದರಲ್ಲಿದ್ದ ನೀರು ನೀಲಿ ಬಣ್ಣಕ್ಕೆ ತಿರುಗಿತ್ತು. ನೀರಿಲ್ಲ. ಇಕ್ಕೆಲಗಳು ಒಣಗಿ ನಿಂತಿವೆ. ಇವುಗಳಿಗೆ ಬಹಳ ಬಾಯಾರಿಕೆ. ಒಮ್ಮೆ ಧನಸಿರಿ ತುಂಬಿ ಹರಿದೇ ಹರಿಯುತ್ತೆ. ಅದರ ಬತ್ತಿದ ಎದೆ ತೋಯುತ್ತದೆ.

ನೀರಿಗಾಗಿ ಹುಡುಕಿಕೊಂಡು ಬರುವ ಕಾಡು ಜಿಂಕೆಗಳ ಗೊರಸುಗಳ ಗುರುತು ನದಿಯ ಮರಳಿನ ಮೇಲೆ ಇದೆ. ಅವು ಹಿಂಡು ಹಿಂಡಾಗಿ ಬರುತ್ತವೆ. ನೀರು ಕುಡಿಯುತ್ತವೆ. ಹೊರಟು ಹೋಗುತ್ತವೆ. ರೆಕ್ಕೆಗಳನ್ನು ಬಡಿಯದೆಯೇ ಹದ್ದುಗಳ ಸಾಲು ಆಕಾಶದಲ್ಲಿ ಹಾರಾಡುತ್ತವೆ. ಅವುಗಳ ದೃಷ್ಟಿ ಕೆಳಗಡೆಯೇ ಮರಳಿನ ಮೇಲಿದೆ. ಎಲ್ಲಿಯಾದರೂ ಆಹಾರ ಸಿಕ್ಕೀತೇ!

ಕಾಡಿನಲ್ಲಿ ವಾಸಿಸುವ ಹಕ್ಕಿಗಳು ಸಂತೋಷದಿಂದ ಹಾಡುತ್ತಾ ಹಾರಾಡುತ್ತಿವೆ. ಅವುಗಳ ಕಂಠದಲ್ಲಿ ವಸಂತ ಋತುವಿನ ಸ್ವಾಗತ ಸಹಜೋತ್ಸಾಹದಿಂದ ಸೂಸುತ್ತಿದೆ. ಶಾಂತವಾದ ಮಧ್ಯಾಹ್ನದ ಸಮಯದಲ್ಲಿ ಕಾಡುಪಾರಿವಾಳಗಳ ಜೋಡಿ ಕಲವರ ಗೈಯುತ್ತಿವೆ. ಈ ಜಗತ್ತಿನಲ್ಲಿ ತಮ್ಮಿಬ್ಬರನ್ನು ಬಿಟ್ಟು ಬೇರೆ ಯಾರು ಇಲ್ಲವೇನೋ ಎಂಬಂತೆ ಬಿಹೂ ವಿಹ್ವಲ ತರುಣ ಯಾವುದೋ ವನಗೀತೆಯನ್ನು ಗುಂಯ್‌ಗುಟ್ಟುತ್ತಾನೆ. ತನ್ನ ಕರುಣ ಕಥೆಯನ್ನು ಹೇಳುತ್ತಾನೆ. ಬೆಂದೆದೆಯ ಕಥೆಯನ್ನು ಹೇಳುತ್ತಾನೆ. ಅವನ ಗೀತೆಗಳು ವಿಹ್ವಲ ಸ್ವರದಿಂದ ಕೂಡಿವೆ.

ಹೊಸ ಬೆಳೆ ಊಟ ಮಾಡಿ ಕೆಂಪಗೆ ಚೆಲುವಾಗಿರುವ ಯುವತಿಯರು ಕಿಲಕಿಲನೆ ನಗುತ್ತಾರೆ. ಅವರ ನಗುವಿನಲ್ಲಿ ಫಾಲ್ಗುಣ ಮಾಸದ ಪ್ರಭಾವ ಇನ್ನೂ ಹಸಿಯಾಗಿದೆ. ಅವರ ಮನಸ್ಸಿನಲ್ಲಿ ಅಪಾರ ಉತ್ಸಾಹವಿದೆ. ಅವರ ದೇಹ ಮತ್ತು ಮನಸ್ಸು ಹಾತೊರೆಯುತ್ತಿವೆ. ಒಂದು ಮತ್ತೊಂದನ್ನು ಪೀಡಿಸುತ್ತದೆ. ಒಂದು ಮತ್ತೊಂವನ್ನು ಜಿಗುಟುತ್ತದೆ. ಚಕ್ಕಲಗುಲಿಯಿಡುತ್ತದೆ. ಹಳ್ಳಿಯ ಬೋಡುಬಾಯಿಯ ಮುದುಕರೊಡನೆ ಕೆಂಪಗೆ ಚೆಲುವಾಗಿರುವ ಯುವತಿಯರ ಸಂಬಂಧವನ್ನು ಕಲ್ಪಿಸಿ ಗೇಲಿ ಮಾಡುತ್ತಾರೆ. ಸಂತೋಷ ಸಾಗರದಲ್ಲಿ ಮಿಂದೇಳುತ್ತಾರೆ. ಮನಸ್ಸಿನಲ್ಲಿ ತುಂಬಿ ತುಳುಕಾಡುವ ಆನಂದದಿಂದಾಗಿ ಅವರ ಕಣ್ಣುಗಳಲ್ಲಿ ಕಾಂತಿ ಮಿನುಗುತ್ತದೆ. ತುಟಿಗಳಲ್ಲಿ ನಗೆಯ ನರ್ತನೆ.

ಗುಲಬ್‌ನ ಮನಮಯೂರ ನರ್ತಿಸುತ್ತದೆ. ಆತನ ಮನಸ್ಸು ಏನೋ ಹೇಳತೊಡಗುತ್ತದೆ. ಅವನ ಅಂತರಂಗದಲ್ಲಿ ಸಪ್ತ ಬಿಹುವಿನ ವೀಣೆ ಮಿಡಿಯುತ್ತದೆ.

ಆತ ಚೇನಿಮಾಇ ವಿಷಯ ಕುರಿತು ಯೋಚಿಸುವುದಿಲ್ಲ. ಕಪಾಹಿ ಮತ್ತು ತರಾಳ ವಿಷಯ ಸಹ ಕುರಿತು ಯೋಚಿಸುವುದಿಲ್ಲ. ಆತನ ಅಶಾಂತ ಮನಸ್ಸು ಏನನ್ನೂ ಯೋಚಿಸದಿದ್ದರೂ ಎಲ್ಲ ವಿಷಯಗಳ ಬಗ್ಗೆ ಚಿಂತನ ಮಾಡಬಯಸುತ್ತದೆ.

ಹದ್ದಿನ ಬಿಳಿಯ ರೆಕ್ಕೆಗಳಲ್ಲಿ ಆತ ತನ್ನ ಅಶಾಂತ ಮನಸ್ಸಿನ ಕಂಪನದ ಛಾಯೆಯನ್ನು ಕಾಣುತ್ತಾನೆ. ಧನಶಿರಿಯ ದಡದಲ್ಲಿ ಒಬ್ಬನೇ ಕುಳಿತು ತಾನು ಕುಳಿತಿರುವ ನದೀ ಘಟ್ಟದ ಕಡೆ ಯಾರೋ ಅಸ್ತಗಿರಿಯ ವ್ಯಾಪಾರಿಯ ದೋಣಿ ಬರುತ್ತಿರುವಂತೆ ಕನಸು ಕಾಣುತ್ತಾನೆ. ಆ ವ್ಯಾಪಾರಿಯ ದೋಣಿಯಲ್ಲಿ ಸಪ್ತರಾಜರ ಭಂಡಾರದ ವಜ್ರವೈಡೂರ್ಯ ತುಂಬಿದೆ. ''ವಜ್ರವೈಡೂರ್ಯ ಬೇಕಾದವರು ಬಂದು ಶೇಖರಿಸಿಕೊಳ್ಳಿ.''

ಧನಜಡಜಾತಿಯ ಮರದ ಕಾಂಡದೊಡನೆ ಮಧ್ಯಾಹ್ನದ ಬೆಚ್ಚನೆಯ ಬಿಸಿಲು ಸ್ನೇಹ ಬೆಳಸುತ್ತಿದೆ. ಸಾಯಂಕಾಲದ ಮಂಜು, ಹುಲ್ಲುಸೊಪ್ಪಿನ ಬುಡಗಳಿಗೆ ಜೋಗುಳ ಹೇಳುತ್ತಿದೆ. ಕಾಂತಿಹೀನ ತಾರೆ ರಾತ್ರಿಯಲ್ಲಿ ಧನಶಿರಿಯ ಮಡಿಲಿನಲ್ಲಿ ಜಲದೇವತೆಯ ತಾಣವನ್ನು ಹುಡುಕುತ್ತಿದೆ. ಅಂಗಳದೆದುರಿನಲ್ಲಿ ಒಣಹುಲ್ಲಿನ ಬಣವೆ ಮೇಲೆ ಬಿಸಿಲು ಬೀಳುತ್ತಿದೆ. ಅದರ ಶಾಖ ಹುಲ್ಲಿನಲ್ಲೇ ಉಳಿಯುತ್ತಿದೆ.

ಡಾಲಿಮ್ ಹಳ್ಳಿ ಸಿಪರಿಯಾ ಹಳ್ಳಿ ಮತ್ತು ಧನಶಿರಿಯ ದಡದಲ್ಲಿ ಹೊಸದಾಗಿ ಮಾಡಿರುವ ಜಮೀನಿನ ಮೇಲೆ ಚಳಿಗಾಲದ ಅಂತ್ಯದ ಶೈತ್ಯದಿಂದ ಕೂಡಿದ ಮಂದಮಾರುತ ಬೀಸುತ್ತಿದೆ.

ಹಾಲು ಕುಡಿಯುವ ಕರುಗಳ ಬಾಯಲ್ಲಿ ನೊರೆ ಹೊರ ಬರುತ್ತಿದೆ. ಅವುಗಳ ತಾಯಂದಿರು ತಮ್ಮ ಕರುಗಳ ರೋಮವನ್ನು ನೆಕ್ಕಿ ಅಸ್ತವ್ಯಸ್ತ ಮಾಡುತ್ತಿವೆ. ಕರುಗಳು ಬಾಲವನ್ನು ಎತ್ತಿಕೊಂಡು ಅತ್ತಿತ್ತ ಓಡಾಡುತ್ತಿವೆ.

ಗುಲಚ್‌ನ ಮನಸ್ಸು ಸಹ ಗರಿಗೆದರಿದೆ.

ಆತನಿಗೆ ತನ್ನ ಅಂಗಳದ ಧೂಳು ಸಹ ಪ್ರಿಯವಾಗಿ ಕಾಣುತ್ತಿದೆ.

ಒಮ್ಮೊಮ್ಮೆ ಇಡೀ ದಿನ ಇದೇ ರೀತಿ ಕಳೆಯುತ್ತದೆ. ಆಸಕ್ತಿ ಇಲ್ಲದಾಗ ಕೆಲಸ ಮಾಡಿ ಪ್ರಯೋಜನವಿಲ್ಲವಷ್ಟೇ? ನಾವು ಯಾರಿಗಾದರೂ ಗುಲಾಮರಾಗಿದ್ದೇವೆಯೇ? ತರಾ ಮತ್ತು ಅವರ ಕುಟುಂಬದವರು ಬಂದಮೇಲೆ ಆತ ಅಡಿಗೆ ಮನೆಗೂ ಕಾಲಿಡುವುದಿಲ್ಲ. ತಾಯಿ ಇದ್ದಾಗ ಆತ ಅಡಿಗೆ ಮಾಡಬೇಕಾದ ಅಗತ್ಯವಿರಲಿಲ್ಲ. ಆದರೆ ಅನ್ನ ಕುದಿಯತೊಡಗಿದಾಗ ನೋಡೋಕೆ ಅದು ಬಹಳ ಚೆನ್ನಾಗಿರುತ್ತಿತ್ತು. ಕೊತ ಕೊತನೆ ಶಬ್ದಮಾಡುತ್ತಿತ್ತು. ಘಮಘಮ ಸುವಾಸನೆ ಮೂಗಿಗೆ ತಟ್ಟುತ್ತಿತ್ತು. ಬಸಗಂಜಿ ಮಡಕೆ ಮೇಲೆ ಉಕ್ಕಿ ಒಲೆಯ ಒಳಗಡೆ ಸುರಿಯುತ್ತಿತ್ತು. ಅದನ್ನು ನೋಡಿ ಗುಲಚ್ ಹಿರಿಹಿರಿ ಹಿಗ್ಗುತ್ತಿದ್ದ.

ಎಲ್ಲಾ ಕೆಲಸಕಾರ್ಯಗಳನ್ನು ಬೇಗ ಮಾಡಿ ಮುಗಿಸಬೇಕೆಂದು ಆತನಿಗೆ ಮನಸ್ಸಾಗುತ್ತದೆ. ಏನೂ ಮಾಡದೆ ಹಾಗೆಯೇ ಸುತ್ತಾಡಿಕೊಂಡಿರಲೂ ಇಷ್ಟವಾಗುತ್ತೆ.

ಆತ ಚಂದ್ರನನ್ನು ಹುಡುಕಿಕೊಂಡು ಒಮ್ಮೆ ಡಾಲಿಮ್‌ಗೆ ಹೋದ.

ಚಂದ್ರ ಮನೆಯಲ್ಲಿರಲಿಲ್ಲ. 'ಗೊಲಾ'ಗೆ ಹೋಗಿದ್ದ. ಆತ ಹೋಗಿ ಮೂರು ದಿನಗಳಾಗಿದ್ದವು. ಈ ಮಧ್ಯೆ ಆತ ಸಭೆಸಮಿತಿಗಳನ್ನು ಸೇರಿಸಿ ಹಳ್ಳಿಯ ಹುಡುಗಿಯರು ಸಹ ಓದುಬರಹ ಕಲಿಯಬೇಕೆಂದು ಪ್ರಚಾರ ಮಾಡುತ್ತಿದ್ದ. ಅವನಿಗೆ ನಾಚಿಕೆಯಿಲ್ಲ. ಹುಡುಗರು ಒಂದನೆಯ ಅಥವಾ ಎರಡನೆಯ ತರಗತಿಯ ಓದುಬರಹ ಮುಗಿಸುತ್ತಾರೆ. ಇದು ಒಳ್ಳೆಯದೇ. ಆದರೆ ಹುಡುಗಿಯರು ಎಲ್ಲಿಯಾದರೂ ಓದುತ್ತಾರೆಯೇ? ಚಂದ್ರನ ಮೇಲೆ ಪಟ್ಟಣದ ಗಾಳಿ ಬೀಸಿದೆ. ಹಳ್ಳಿಯ ಸ್ಥಿತಿ ಏನು ಮಾಡ್ತಾನೋ? ಹೇಳೋಕ್ಕಾಗಲ್ಲ.

ಹಳ್ಳಿಯ ರಸ್ತೆಗಳನ್ನು ಸಹ ಸರಿಪಡಿಸಲು ಸರಕಾರ ವಹಿಸಿಕೊಳ್ಳುವಂತೆ ಆತ ಮನವಿ

ಮಾಡಿಕೊಂಡಿದ್ದಾನೆ. ಅಂಚೆ ಕಛೇರಿಯ ಅವಶ್ಯಕತೆಯನ್ನು ತಿಳಿಸಿದ್ದಾನೆ. ಹಳ್ಳಿಗೊಂದು ಆಸ್ಪತ್ರೆ ಬೇಕು. ಇನ್ನೂ ಏನೇನೊ ಹೇಳಿದ್ದಾನೆ. ಅವನಿಗೆ ತಲೆ ಕೆಟ್ಟಿದೆ. ಆದರೆ ಅವನಲ್ಲಿ ಸಾಹಸವಿದೆ. ಇನ್ನೂ ಕೆಲವು ಹಳ್ಳಿಯ ತರುಣರನ್ನು ಕಲೆ ಹಾಕಿದ್ದಾನೆ. ಥಿಯೇಟರ್ ಕಟ್ಟಿಸುವ ವಿಚಾರವನ್ನು ಹೋಳಿ ಹಬ್ಬದ ದಿನ ತಿಳಿಸಿದ. ಇದು ಹಳ್ಳಿಯಲ್ಲಿ ಸಾಧ್ಯವಾಗದಿರುವ ಮಾತು. ಗೋಸಾಇ ಅಥವಾ ಮಠಾಧೀಶರು ಡಾಲಿಮ್ ಹಳ್ಳಿಗೆ ಬಂದಾಗ 'ಮಾಓನಾ' (ನಾಟಕ) ಆಡುತ್ತಾರೆ. ಮಾಓನಾ ನಡೆಯದಿದ್ದಾಗ ಹುಡುಗರು ಜೋರಾಗಿ ಅದರ ಸಂಭಾಷಣೆಯನ್ನೇ ಹೇಳುತ್ತಾರೆ!

"ದುರಾಚಾರಿ ನೀನು ಯಾರು? ಈ ಸಾರಿ ನಿನಗೆ ರಕ್ಷಣೆಯಿಲ್ಲ."

ಆದರೆ ಥಿಯೇಟರ್?

ಚಂದ್ರನಿಗೆ ಹುಚ್ಚು ಹಿಡಿಯದಿದ್ದರೆ ಸಾಕು.

ಒಬ್ಬಳೋ ಅಥವಾ ಇಬ್ಬರೋ ಹುಡುಗಿಯರು ಸಹ ಆತನ ಜೊತೆ ಸೇರಿದ್ದಾರೆಂದು ಸುದ್ದಿ ಹಬ್ಬಿದೆ. ಇಡೀ ಜಗತ್ತೇ ಮುಳುಗಿ ಹೋಗುತ್ತೆ.

ಗುಲಬ್‌ಗೆ ಚಂದ್ರ ಸಿಗಲಿಲ್ಲ.

ಆದರೆ ಚಂದ್ರನ ಮನೆಯಲ್ಲಿ ಒಬ್ಬ ಬಹಾದ್ದೂರ್ ಓಝಾ (ಮಂತ್ರವಾದಿ) ಭೇಟಿಯಾಯಿತು. ಓಝಾ ಕಾಯಿಲೆಗೆ ಚಿಕಿತ್ಸೆ ನೀಡುತ್ತಾನೆ. ಭೂತ-ಪ್ರೇತಗಳನ್ನು ಬಿಡಿಸುತ್ತಾನೆ. ಜ್ಯೋತಿಷ್ಯ ವಿದ್ಯೆಯ ಸಹಾಯದಿಂದ ಕಳೆದುಹೋಗಿರುವ ವಸ್ತುಗಳನ್ನು ಪತ್ತೆ ಹಚ್ಚುತ್ತಾನೆ. ಹಸ್ತ ರೇಖೆಗಳನ್ನು ನೋಡಿ ಭವಿಷ್ಯ ತಿಳಿಸುತ್ತಾನೆ. ಗುಲಬ್ ಸಹ ಓಝಾಗೆ ಅಂಗೈ ತೋರಿಸಲು ನೀಡಿ ಆತನ ಮುಂದೆ ಕುಳಿತ :

"ನಿನಗೇನಾಗಿದೆ?" - ಬಹಾದ್ದೂರ್ ಓಝಾ ಪ್ರಶ್ನೆ ಮಾಡಿದ.

ಚಂದ್ರನ ತಾಯಿ ಹೇಳಿದಳು - "ತರುಣ. ಇನ್ನೇನಾಗಿದೆ? ಆಗಬೇಕಾಗಿದ್ದ ಮದುವೆ ನಿಂತು ಹೋಯಿತು. ಈಗ ವಿಧುರನಾಗಿದ್ದಾನೆ. ಆತ ಹೊಸ ಸಂಸಾರ ಯಾವಾಗ ಹೂಡ್ತಾನೆ ನೋಡಿ."

"ಎರಡು ಆಣೆ ಕೊಡಬೇಕಾಗುತ್ತೆ" - ಓಝಾ ಹೇಳಿದ.

ಗುಲಬ್‌ನ ಮುಖ ಸ್ವಲ್ಪ ಸಪ್ಪಗಾಯಿತು. ಅವನ ಹತ್ತಿರ ದುಡ್ಡಿರಲಿಲ್ಲ. ಆತ ಸ್ವಲ್ಪ ಪೇಚಾಟಕ್ಕೆ ಸಿಕ್ಕಿಬಿದ್ದ.

"ಸರಿ, ನೋಡಿ, ನೀವು ಹೇಳೋದು ನಿಜ ಎಂದು ಕಂಡು ಬಂದರೆ ನಾನೇ ನಾಲ್ಕಾಣೆ ಕೊಡ್ತೀನಿ" ಚಂದ್ರನ ತಾಯಿ ಹೇಳಿದಳು.

ಗುಲಬ್‌ನ ಮುಖದಲ್ಲಿ ನಗೆ ಸೂಸಿತು. ಚಂದ್ರನ ತಾಯಿ ಬಹಳ ಒಳ್ಳೆಯವಳು.

ಓಝಾ ಹಸ್ತರೇಖೆಗಳನ್ನು ಬಹಳ ಹೊತ್ತಿನವರೆಗೂ ಗಂಭೀರವಾಗಿ ನೋಡಿ ಹೇಳಿದ - "ನಿನ್ನ ಅದೃಷ್ಟ ಕಡಿಮೆಯೇನೂ ಅಲ್ಲ. ಏನಾದರೂ ಸ್ವಲ್ಪ ಸಾಧಿಸಿ ತೋರಿಸೋ ಛಲ ಇರುವಂತಿದೆ. ಮನೆಮಠ ಕಟ್ಟಿ ಸಂಸಾರ ಹೂಡುತ್ತೀಯೆ, ತಿಳೀತೆ? ನೋಡು, ಈ ರೇಖೆ ಪ್ರಕಾರ ಮದುವೆ ಆದಷ್ಟು ಬೇಗ ಆಗುತ್ತೆ. ಹುಡುಗಿಯೋ ಲಕ್ಷ್ಮಿ. ಆದರೆ ಸ್ವಲ್ಪ ಎಚ್ಚರ ವಹಿಸಬೇಕು. ಎಲ್ಲಿಯೂ ಮೋಸ ಹೋಗಬೇಡ. ಸರಿ, ಸರಿ, ಹೆದರಬೇಕಾಗಿಲ್ಲ. ಒಳ್ಳೆಯ ದಿನ ಕಾದಿದೆ, ಒಳ್ಳೆಯ ದಿನ. ಆಸ್ತಿಪಾಸ್ತಿ ಫಲ ಸಮೃದ್ಧಿಯಾಗಿದೆ."

ಓಝಾ ಇನ್ನೂ ಏನೇನೋ ಹೇಳಿದ. ಗುಲಬ್‌ಗೆ ಸಂತೋಷವಾಯಿತು. ಆದರೆ ಓಝಾ ಏನು ಹೇಳುತ್ತಿದ್ದಾನೆಂದು ಅವನಿಗೆ ಸ್ಪಷ್ಟವಾಗಿ ಅರ್ಥವಾಗಲಿಲ್ಲ. ಓಝಾ ಮಾತಿನ ಧಾಟಿ

ಸಹ ಅದೇ ಆಗಿತ್ತು.

ಚಂದ್ರನ ತಾಯಿ ಕೇಳಿದಳು - "ಈತನಿಗೆ ಮದುವೆ ಯಾವಾಗ ಆಗುತ್ತೆ?"

ಓರ್ಝೂ ನಗುತ್ತಾ ಹೇಳಿದ - "ವಯಸ್ಸಿಗೆ ಬಂದಿರೋ ಹುಡುಗನ ಮದುವೆ ! ಹುಡುಗಿ ಹುಡುಕಿ ಕರೆ ತಂದಾಗ ಮದುವೆ ಆಗುತ್ತೆ. ಯಾಕೆ ಯೋಚನೆ?"

ಗುಲಬ್‌ನಿಗೆ ನಾಚಿಕೆಯಾಯಿತು.

ಹುಡುಕಿ ಕರೆದುಕೊಂಡು ಬಂದಾಕ್ಷಣವೇ ಮದುವೆ ಆಗುತ್ತದೆಯೇ? ಸರಿ. ಅದೂ ನಿಜ. ಮದುವೆ ಆಗತ್ಯ ತಾನೇ ಏನು? ಹುಡುಗಿ ಕರೆದುಕೊಂಡು ಒಂದು ಮನೆಯಲ್ಲಿಟ್ಟಕೊಂಡರೆ ಸಾಕು ಎಲ್ಲಾ ಕೆಲಸ ಪೂರೈಸಿದ ಹಾಗೆಯೇ.

ಅಲ್ಲಿ-ಇಲ್ಲಿ ಸುತ್ತಾಡಿಕೊಂಡು ಸಂಜೆಯ ವೇಳೆಗೆ ಆತ ಕಪಾಹಿ ಮನೆಗೆ ಹೋದ.

ತಾಯಿಮಗಳು ಮನೆಯಲ್ಲಿದ್ದರು. ತರಾ ಹಚ್ಚಡ ನೇಯುವ ಕೆಲಸ ಆರಂಭಿಸಿದ್ದಾಳೆ. ಸಾಯಂಕಾಲದವರೆಗೂ ನೆಯ್ದು ಈಗ ತಾನೇ ಮಗ್ಗ ಬಿಟ್ಟು ಬಂದಿದ್ದಳು. ಗುಲಬ್‌ನನ್ನು ನೋಡಿ ಒಳಗಡೆಯಿಂದ ಬಂದು ತರಾಳೇ ಮೊದಲು ಮಾತನಾಡಿಸಿದಳು - "ಅಣ್ಣಾ, ಎಲ್ಲಿಗೆ ಹೋಗಿ ಬಂದ್ರಿ?"

"ಎಲ್ಲಿಗೆ ಹೋಗ್ತೀನಿ? ಈ ಕೆಲಸಕಾರ್ಯದಲ್ಲಿ ಎಲ್ಲಿಯಾದರೂ ಬಿಡುವು ಸಿಗುತ್ತದೆಯೇ? ನೀವು ಚೆನ್ನಾಗಿದ್ದೀರಿ ತಾನೇ?"

"ಹೂಂ. ಹೇಗೋ ಇದ್ದೀವಿ " - ಕಪಾಹಿ ಕೇಳಿದಳು - "ನಿನ್ನ ಮನೆ ಕಟ್ಟಿ ಆಯಿತೇ?"

"ಆಗೋದರಲ್ಲಿದೆ. ತರಾ ಸ್ವಲ್ಪ ನೀರು ಕೊಡ್ತೀಯೋ? ಈವೊತ್ತು ಬಹಳ ಸುತ್ತಾಡಿಕೊಂಡು ಬಂದಿದ್ದೇನೆ."

ಕಪಾಹಿ ಹೇಳಿದಳು - "ತರಾ, ನಿಮ್ಮ ಅಣ್ಣನಿಗೂ ಅಡಿಗೆ ಮಾಡು. ರಾತ್ರಿಗೆ ಇಲ್ಲೇ ಊಟ ಮಾಡ್ತಾನೆ."

ತರಾಳಿಗೆ ಇನ್ನೂ ಸ್ವಲ್ಪ ಹೊತ್ತು ಅಲ್ಲೇ ಕುಳಿತುಕೊಳ್ಳಲು ಅವಕಾಶ ಸಿಗಲಿಲ್ಲ. ದೀಪ ಹೊತ್ತಿಸಿ ಅದನ್ನು ದೀಪಸ್ತಂಭದ ಮೇಲಿಟ್ಟು ಅಡಿಗೆ ಮನೆಗೆ ಹೋದಳು.

ಕಪಾಹಿ ಒಂದು ಲೋಟ ನೀರು ತಂದು ಗುಲಬ್‌ಗೆ ಕೊಟ್ಟಳು. ಕುಳಿತುಕೊಳ್ಳಲು ಅವನಿಗೆ ಒಂದು ಮಣೆ ಕೊಟ್ಟು ಮತ್ತೊಂದು ಮಣೆಯ ಮೇಲೆ ತಾನೂ ಅವನ ಪಕ್ಕದಲ್ಲೇ ಕುಳಿತುಕೊಂಡಳು.

"ಮನೆ ಕಟ್ಟಿ ಆಯಿತೇ?"

"ಗೋಡೆ ಮೊದಲಾದ ಕೆಲ್ಸ ಮುಗಿದಿದೆ. ಕೇವಲ ಛಾವಣಿ ಹೊದಿಸೋ ಕೆಲ್ಸ ಉಳಿದಿದೆ. ಸ್ವಲ್ಪ ದಿವಸಗಳಲ್ಲೇ ಆ ಕೆಲ್ಸ ಸಹ ಮುಗಿಯುತ್ತೆ. "

"ಬತ್ತ, ಕಾಳುಕಡ್ಡಿ ಎಲ್ಲಾ ಮನೆಗೆ ಬಂತೋ?"

"ಬಂತು!" - ಕಪಾಹಿ ಮನೆಯ ಒಳಭಾಗದ ಕಡೆ ನೋಡಿ ಹೇಳಿದಳು - "ಗಾಡಿ ಮತ್ತೆ ಈ ಕಡೆ ಬರುತ್ತೋ?"

"ಗಾಡಿ? ಬರುತ್ತೆ. ನಮ್ಮ ಮನೆಯಲ್ಲಿ ಎರಡು ಚೌಕಿ ಮತ್ತು ಸಣ್ಣಪುಟ್ಟ ಸಾಮಾನುಗಳಿಲ್ವೇ? ಅವುಗಳನ್ನು ತೆಗೆದುಕೊಂಡು ಹೋಗಬೇಕು. ಇಲ್ಲೇ ಇಟ್ಟುಬಿಟ್ಟರೆ ಹಾಳಾಗಿ ಹೋಗುತ್ತವೆ."

"ಗದ್ದೆಯ ಬತ್ತವನ್ನು ಮೂಟೆಯಲ್ಲೇ ಕಟ್ಟಿ ಹಾಕಿದ್ದೇನೆ. ಗಾಡಿಯಲ್ಲಿ ತುಂಬಿಕೊಂಡು ಹೋಗಿ ಮೊದಲೇ ಹಾಕಿ ಬರ್‍ತೇನೆ."

ಗುಲಬ್‌ನ ಮನಸ್ಸು ಹಿರಿಹಿರಿ ಹಿಗ್ಗಿತು. ಕಪಾಹಿ ಬಗ್ಗೆ ಹೊಸ ಸ್ನೇಹ ಮೂಡಿತು "ಮತ್ತೇನಾದರೂ ವಿಷಯ?"

"ಇಲ್ಲೂ ಸಹ ಸಣ್ಣಪುಟ್ಟ ಸಾಮಾನುಗಳಿವೆ. ಭರ್ತಿಯಾಗಿ ಒಂದು ಗಾಡಿ ಆಗುತ್ತವೆ. ಸಾಮಾನುಗಳನ್ನು ಸಾಗಿಸಿ ಬಿಟ್ಟರೆ ನಮ್ಮಿಬ್ಬರಿಗೂ ಹೆಚ್ಚಿನ ಚಿಂತೆ ಯಾವುದೂ ಇಲ್ಲ."

ಗುಲಬ್ ಮೌನವಾಗಿದ್ದ.

ಗೋಡೆಯ ಆಚೆ ಕಡೆಯಿಂದ ಅವರ ಮಾತುಕತೆಯನ್ನು ತರಾ ಸಹ ಕೇಳಿಸಿಕೊಂಡಿರಬಹುದು. ಆ ಕಡೆಯಿಂದ ಯಾವುದೇ ರೀತಿಯ ಸದ್ದು ಆಗುತ್ತಿರಲಿಲ್ಲ.

ಗುಲಬ್‌ನಿಗೆ ಈ ಸಾರಿಯೂ ಏನೂ ಉತ್ತರ ಹೊಳೆಯಲಿಲ್ಲ.

ಆತ ನಿಶ್ಚಿತವಾದ ಒಂದು ನಿರ್ಣಯ ಕೈಗೊಂಡಿದ್ದಾನೆ. ಆದರೆ ಕಪಾಹಿ ಮತ್ತು ತರಾ ಬಗ್ಗೆ ಚಿಂತೆಯಿತ್ತು. ಆ ಚಿಂತೆಯೂ ಈಗ ದೂರವಾಯಿತು. ಸಮಯ ಕಾದು ಕಪಾಹಿ ಮತ್ತು ತರಾಳನ್ನು ತನ್ನ ಮನೆಗೆ ಕರೆದುಕೊಂಡು ಹೋಗುವುದೇ ಮೇಲು.

ಇಬ್ಬರೂ ಅನೇಕ ವಿಷಯಗಳನ್ನು ಕುರಿತು ಮಾತನಾಡಿದರು. ತರಾ ಅವರ ಮಾತುಕತೆಯಲ್ಲಿ ಭಾಗವಹಿಸಲಿಲ್ಲ. ಅವಳಿಗೆ ನಾಚಿಕೆ.

ಆದರೆ ತರಾ ಒಂದು ಮಾತು ಮಾತ್ರ ಗಮನಿಸಿದ್ದಳು. ಈಗ್ಗೆ ಕೆಲವು ದಿನಗಳಿಂದ ಗುಲಬ್ ಮತ್ತು ಕಪಾಹಿಯ ವರ್ತನೆ ಬೇರೆ ರೀತಿ ಕಂಡು ಬರುತ್ತಿತ್ತು. ಮೊದಲಿನಂತೆ ಕಪಾಹಿಯನ್ನು ಗುಲಬ್ 'ಅಕ್ಕ' ಎಂದು ಸಂಬೋಧಿಸುತ್ತಿರಲಿಲ್ಲ. ಇತ್ತೀಚೆಗೆ ಕಪಾಹಿ ಸಹ ಗುಲಬ್‌ನನ್ನು 'ನೀನು, ನೀವು' ಅಂತ ಕರೆಯುತ್ತಿರಲಿಲ್ಲ. ಅವನ ಹೆಸರು ಹಿಡಿದು ಸಹ ಕರೆಯುತ್ತಿರಲಿಲ್ಲ. ಆಕೆ ಒಂದು ರೀತಿಯ ಮಧ್ಯವರ್ತಿ ಭಾಷೆಯಲ್ಲಿ ಮಾತನಾಡುತ್ತಿದ್ದಳು. ಅವರ ಪರಸ್ಪರ ಸಂಬಂಧದಲ್ಲಿ ಏರುಪೇರು ಆಗಬಹುದು. ಅದರಿಂದಲೇ ಸಂಬೋಧನೆಯಲ್ಲೂ ಈ ರೀತಿಯ ಬದಲಾವಣೆ ಕಂಡು ಬರುತ್ತಿದೆ.

ತರಾಗೆ ಒಳ್ಳೆಯದೇ ಅನ್ನಿಸಿತು.

ಅವಳಿಗೆ ನಾಚಿಕೆ ಸಹ ಆಯಿತು. ಗುಲಬ್‌ನನ್ನು ಅಣ್ಣಾ ಎಂದು ಕರೆಯಲು ಅವಳಿಗೂ ಸಂಕೋಚವಾಗುತ್ತಿದೆ! ಆದರೆ ಆತನನ್ನು ಬೇರೆ ಯಾವ ರೀತಿ ಕರೆಯೋದು?

ಊಟ ಬಡಿಸುವಾಗ ಗುಲಬ್‌ನ ಮುಖವನ್ನು ಒಮ್ಮೆ ತರಾ ದಿಟ್ಟಿಸಿ ನೋಡಿದಳು. ಆತನ ಮುಖ ಅರಳಿದೆ. ಸರಿ. ಮದುವೆಗೆ ಮುನ್ನ ಮನಸ್ಸಿನ ಸ್ಫೂರ್ತಿಯಿಂದಾಗಿ ಈ ರೀತಿ ಆಗುತ್ತೆ. ಆದರೆ ಆತ ಆಕೆಯೊಡನೆ ಬಹಳ ಗಂಭೀರವಾಗಿ ವರ್ತಿಸುತ್ತಾನೆ. ಅದೂ ಸರಿ. ಚಿಕ್ಕಮ್ಮನ ಎದುರಿನಲ್ಲಿ ಲಘುವಾಗಿ ತಮಾಷೆ ಮಾಡೋದು ಸಹ ಸರಿಯಲ್ಲ.

ಪಾತ್ರೆಗಳನ್ನು ತೊಳೆಯಲು ತರಾ ಹಿತ್ತಲ ಬಾಗಿಲಿನ ಕಡೆ ಹೋದಳು. ಕಪಾಹಿ ಗುಲಬ್‌ನ ಕಡೆ ಬಂದು ಪಿಸುಮಾತಿನಲ್ಲಿ ಹೇಳಿದಳು - "ಸಾಮಾನುಗಳನ್ನು ಮೊದಲೇ ಇಲ್ಲಿಂದ ಸಾಗಿಸಬೇಕು. 'ಬಿಹು' ಅನಂತರ ಹಳ್ಳಿಯ ಮಸೀದಿನಲ್ಲಿ ಔತಣದ ಏರ್ಪಾಟಿದೆ. ಆ ಸಮಯದಲ್ಲೇ ಈ ಕಡೆ ಜನ ಬರೋದು-ಹೋಗೋದು ಕಡಿಮೆಯಾಗುತ್ತದೆ. ನಾವು ಹೋಗೋ ವಿಷಯ ಯಾರಿಗೂ ಗೊತ್ತೇ ಆಗೋದಿಲ್ಲ."

ಗುಲಚ್ ಚುಟುಕದಲ್ಲೇ ಉತ್ತರಿಸಿದ - "ಆಗಲಿ, ಸರಿ."

ಅನಂತರ ಆತ ಧೈರ್ಯಮಾಡಿ ಕೇಳಿದ - "ತರಾಗೆ ಈ ವಿಷಯ ಗೊತ್ತೋ ಅಥವಾ ಇಲ್ಲವೋ?"

"ಅವಳಿಗೆ ಗೊತ್ತಾದರೇನು ಅಥವಾ ಆಗದಿದ್ದರೇನು? ಅದರಿಂದ ಏನಾಗುತ್ತೆ? ಈ ಕಾಲದ ಹುಡುಗಿ, ಗೊತ್ತಾಗದೆ ಇರುತ್ತದೆಯೇ? ಆ ವಿಷಯದ ಬಗ್ಗೆ ಯೋಚಿಸಬೇಕಾದ ಅಗತ್ಯವಿಲ್ಲ."

ತಲೆಯೆತ್ತಿ ಗುಲಚ್ ಕಪಾಹಿಯ ಮುಖ ನೋಡಿದ.

ಕಪಾಹಿ ಸುಂದರವಾಗಿ ಕಾಣಿಸಿದಳು. ಅವಳ ಮುಖ ಗುಲಾಬಿಯಂತೆ ಕೆಂಪಗೆ ಇದೆ. ಅವಳ ಎದೆ ಸಹ ಸುಂದರವಾಗಿ ಕಂಡಿತು.

ಕಪಾಹಿ ಸ್ವಲ್ಪ ಮುಂದಕ್ಕೆ ಬಗ್ಗಿ ತನ್ನ ಮುಖವನ್ನು ಗುಲಚ್‌ನ ಮುಖದ ಹತ್ತಿರಕ್ಕೆ ತಂದು ನಗುತ್ತಾ ಕೇಳಿದಳು - "ಏನು ನೋಡೋದು?"

ಅನಂತರ ತನ್ನ ಕೈಯಿಂದ ಆತನ ಕಣ್ಣುಗಳನ್ನು ಮುಚ್ಚಿ ಹೇಳಿದಳು - "ತರಾ ಬರೋ ಹೊತ್ತಾಯಿತು. ಈವೊತ್ತು ಹೋಗು. ಕೇವಲ ನನ್ನ ಮುಖ ನೋಡ್ತಾ ಕುಳಿತಿರ ಬೇಕಾಗಿಲ್ಲ."

ತನ್ನ ಕಣ್ಣನ್ನು ಮುಚ್ಚಿದ್ದ ಕಪಾಹಿ ಕೈ ದೂರ ಸರಿಸುತ್ತಾ ಗುಲಚ್ ಮತ್ತೆ ಆಕೆಯ ಮುಖವನ್ನು ನೋಡುತ್ತಾ ಹೇಳಿದ - " ಹಾಗಾದರೆ ಭಾರಿ ಔತಣದ ದಿವಸ?"

"ಅಹುದು. ರಾತ್ರಿ ಸ್ವಲ್ಪ ಕತ್ತಲಾದರೆ ಮೇಲು."

ತರಾ ಬಂದಳು.

ಅವಳಿಗೆ ಬರ್‍ತೀನಿ ಅಂತ ಹೇಳಿ ಗುಲಚ್ ಹೊರಟ.

ಸ್ವಲ್ಪ ಧೈರ್ಯ ಮಾಡಿ ತರಾ ಹೇಳಿದಳು - "- ಸಾಧ್ಯವಾದರೆ 'ಬಿಹು'ಗೆ ಮೊದಲೇ ಒಂದು ಸಾರಿ ಬಾ ಅಣ್ಣಾ."

"ಯಾಕೆ?"

"ಸ್ವಲ್ಪ ಮಾತಾಡಬೇಕಾಗಿದೆ. ಬಂದಮೇಲೆ ಹೇಳ್ತೀನಿ."

ಗುಲಚ್ ಇಷ್ಟೇ ಹೇಳಿದ - "ಆಗಲಿ, ನಾನು ಈಗ ಬರಲೇ?"

## ಹದಿಮೂರು

ಮಾಘ - ಬಿಹುವಿಗಿಂತ ಮೂರು ದಿನಗಳು ಮೊದಲೇ ಮಳೆಯಾಯಿತು.

ಆರಂಭದಲ್ಲಿ ಜೋರಾಗಿ ಮಳೆ ಬಿತ್ತು. ಅನಂತರ ಕಡಿಮೆಯಾಯಿತು. ರಾತ್ರಿ-ಹಗಲು ಒಂದೇ ಸಮನೆ ಜಡಿಮಳೆ ಶುರುವಾಯಿತು. ವಿಪರೀತ ಚಳಿ. ಕುಳಿರ್‌ಗಾಳಿ ಬೀಸುತ್ತಿತ್ತು. ಗಡಗಡ ಅಂತ ನಡುಗಿಸುತ್ತಿತ್ತು. ಕೊನೆಯ ದಿನಗಳ ಚಳಿಯ ಕೊರತೆ ಬೆಂಕಿ ಮುಂದೆ ಕುಳಿತುಕೊಂಡರೆ ಮಾತ್ರ ಕಡಿಮೆಯಾಗುತ್ತಿತ್ತು.

ಈ ಮಧ್ಯೆ ಗುಲಚ್ ಮನೆಗೆ ಛಾವಣಿ ಹೊದಿಸಿದ. ಆತನಿಗಂತೂ ಅತ್ಯಂತ ಆನಂದ.

ಮಳೆಗಾಲಕ್ಕೆ ಮೊದಲೇ ಮನೆ ಕಟ್ಟಿ ಮುಗಿಸದಿದ್ದರೆ ಬಹಳ ಕಷ್ಟವಾಗುತ್ತಿತ್ತು. ಮನೆಯ ತಳಹದಿ ವಸ್ತಿ ಹಿಡಿದು ನೀರಾಡತೊಡಗುತ್ತಿತ್ತು. ಚಳಿಯಲ್ಲಿ ನಡುಗುತ್ತಾ ನಡುಗುತ್ತಾ ದೀಪದ ಬೆಳಕೇ ಇಲ್ಲದೆ ಛಾವಣಿಯ ಕೆಳಗೆ ಕಾಲ ಕಳೆಯ ಬೇಕಾಗುತ್ತಿತ್ತು.

ಉದ್ದನೆಯ ಹಚ್ಚಡವನ್ನು ಹೊದ್ದುಕೊಂಡು ಗುಲಬ್ ಕುಳಿತಿದ್ದ. ಸಿಪರಿಯಾ ಹಳ್ಳಿಯಿಂದ ಚಂದ್ರ ಬಂದ. ಅವನ ಜೊತೆಯಲ್ಲಿ ತಿಖರ್ ಇದ್ದ.

ಇಬ್ಬರೂ ಜಡಿಮಳೆಯಲ್ಲಿ ಒದ್ದೆಯಾಗಿ ಬಂದಿದ್ದರು.

ಗುಲಬ್ ಧಗಧಗ ಅಂತ ಬೆಂಕಿ ಹೊತ್ತಿಸಿದ. ಮೂರು ಮಂದಿಯೂ ಬೆಂಕಿ ಸುತ್ತಲೂ ಕುಳಿತುಕೊಂಡರು. ಕೈಕಾಲು ಕಾಯಿಸಿಕೊಂಡರು.

"ನೀನು ಒಂದು ದಿನ ನನ್ನನ್ನು ಹುಡುಕಿಕೊಂಡು ಬಂದಿದ್ದೆಯಾ?" - ಚಂದ್ರ ಕೇಳಿದ.

"ಒಂದು ದಿನ ಯಾಕೆ? ಎಷ್ಟೋ ದಿನ ಬಂದಿದ್ದೆ. ಇತ್ತೀಚೆಗೆ ನಿನಗೆ ರೆಕ್ಕೆ ಬಂದಿವೆಯೇ? ನಿನ್ನ ನೆರಳು ಸಹ ಕಾಣಿಸೋದಿಲ್ಲ. ಎಲ್ಲಿಗೆ ಹೋಗಿದ್ದೆ? ಈಗ ಎಲ್ಲಿಂದ ಬಂದೆ?"

"ಪಟ್ಟಣಕ್ಕೆ ಹೋಗಿದ್ದೆ. ಮೆನಿ ವರ್ಕ್ಸ್ ಹೈ - ಗೊತ್ತಾಯಿತೇ? ಬಹಳ ಕೆಲ್ಸವಿದೆ. ಡಾಲಿಮ್ ಘಟ್ಟದಲ್ಲಿ ಈ ವರ್ಷವೇ ಒಂದು ಸೇತುವೆ ಕಟ್ಟಿಸಬೇಕು ಅಂತ ಪಿ.ಡಬ್ಲ್ಯೂಗೆ ಹೇಳಿ ಬಂದಿದ್ದೇನೆ. ನದಿಯ ಈ ಕಡೆ ಮತ್ತು ಆ ಕಡೆ ಇರೋದು ಒಂದೇ ಹಳ್ಳಿ. ಒನ್ ವಿಲೇಜ್. ಮಧ್ಯೆ ನದಿ ಹರಿಯುವುದರಿಂದ ಎರಡು ಹಳ್ಳಿಗಳಾಗಿವೆ. ಸೇತುವೆ ಕಟ್ಟಿದರೆ ಒಂದೇ ಹಳ್ಳಿ ಆಗುತ್ತೆ. ಡಾಲಿಮ್ ಮತ್ತು ಸಿಪರಿಯಾ - ಒನ್ ವಿಲೇಜ್. ಆಗೇನು ಕಡಮೆ ಲಾಭ ಆಗುತ್ತದೆಯೇ?"

"ಆ ಕೆಲಸ ಆಗುತ್ತದೆಯೇ?"

"ಹೇಳಿದ ಮಾತ್ರಕ್ಕೆ ಆಗೋಗುತ್ತದೆಯೇ? ಸಾವಿರಾರು ಉಪಾಯ ಮಾಡಬೇಕಾಗುತ್ತೆ. ಏನು ಸಣ್ಣಪುಟ್ಟ ಸೇತುವೆಯೇ! ನಾನು ಬಿಡೋ ಮನುಷ್ಯ ಅಲ್ಲ. ಈ ವರ್ಷ ಆಗದಿದ್ದರೆ ನೆಕ್ಸ್ಟ್ ಯಿಅರ್ ಆಗೇ ಆಗುತ್ತೆ. ನೀನು ಮನೆ ಕಟ್ಟಿ ಮುಗಿಸಿದೆಯಾ ?" - ಸುತ್ತಲೂ ಕಣ್ಣು ಹಾಯಿಸಿ ಚಂದ್ರ ಕೇಳಿದ.

ಆತ ಬೀಡಿ ತೆಗೆದು ಒಂದು ಬೀಡಿ ತಿಖರ್‌ನಿಗೂ ಮತ್ತೊಂದನ್ನು ಗುಲಬ್‌ನಿಗೂ ಕೊಟ್ಟ. ತಾನೂ ಒಂದು ಹಚ್ಚಿದ.

ಮೌನವಾಗಿ ಮೂವರೂ ಬೀಡಿ ಸೇದತೊಡಗಿದರು.

"ಸ್ವಲ್ಪ ಟೀ ಮಾಡ್ಕೊಂಡು ಬರಲೇ? ಬಹಳ ಚಳಿ" - ಗುಲಬ್ ಕೇಳಿದ.

"ಅಗತ್ಯವಾಗಿ ಮಾಡು. ನನಗೂ ತುಂಬಾ ಚಳಿಯಾಗುತ್ತೆ. ಟೀ ಸೊಪ್ಪು ಇದೆಯೇ?"

"ಇದೆ. ನೀನು ಬೆಲ್ಲದ ಟೀ ಕುಡಿತೀಯೇ ತಾನೇ?"

"ಬೆಲ್ಲದ ಟೀ ಕುಡಿಯದೆ ಇನ್ನೇನು ಕುಡಿಯಲಿ. ಸಕ್ಕರೆ ಟೀ ಕುಡಿಯೋಕೆ ಇದು ಹೋಟೆಲೇ?"

"ಹಳ್ಳಿಯಲ್ಲಿ ಸಕ್ಕರೆ ಟೀ ಕುಡಿಯೋದು ದೊಡ್ಡಸ್ತಿಕೆ. ಚಂದ್ರ ಇನ್ನೂ ಅಷ್ಟು ದೊಡ್ಡಸ್ತಿಕೆಗೆ ಹೋಗಲಿಲ್ಲ."

ತಿಖರ್ ಹೇಳಿದ - "ನಾನು ನಿನ್ನ ಮನೆ ತೋರಿಸೋಕೆ ಬಂದೆ. ಹಿಂದಿರುಗುವಾಗ ದನಕರುಗಳನ್ನು ಹುಡುಕಿ ಮನೆಗೆ ಅಟ್ಟಿಕೊಂಡು ಹೋಗ್ಬೇಕು."

"ಸ್ವಲ್ಪ ಕುಳಿತುಕೋ. ಮಳೆ ಬೀಳ್ತಿದೆ. ನೆನೆದು ಒದ್ದೆಯಾಗುತ್ತೀಯೆ."

ಆದರೆ ತಿಖಿರ್ ಹೊರಟ.

ಅವನು ಹೋದದ್ದು ಗುಲಬ್‌ನಿಗೆ ಒಳ್ಳೆಯದೇ ಆಯಿತು.

"ಆಗಿಂದಾಗ್ಗೆ ಬರ್ತಾ ಇರು" - ಗುಲಬ್ ಲೋಕಾಭಿರಾಮವಾಗಿ ಹೇಳಿದ.

"ಜಮೀನು ಎಷ್ಟು ಆಬಾದು ಮಾಡಿದ್ದೀಯೆ?" - ಚಂದ್ರ ಕೇಳಿದ. ಜಮೀನಿನ ಮಾತು ಕೇಳಿ ಗುಲಬ್ ನಕ್ಕ. ಆತ ಎಲ್ಲ ವಿಷಯವನ್ನು ತಿಳಿಸಿದ. ತಾನು ಆಬಾದು ಮಾಡಿರೋ ಜಮೀನು ಮತ್ತು ಅಕ್ಕಪಕ್ಕದ ಜಮೀನಿನ ಪೋಡು-ಪಟ್ಟೆ ತನ್ನ ಹೆಸರಿಗೆ ಮಾಡಿಸೋದು ಹೇಗೆ ಎಂಬುದರ ಬಗ್ಗೆ ಚಂದ್ರನ ಅಭಿಪ್ರಾಯ ಹಾಗೂ ಸಲಹೆ ಕೇಳಿದ.

ಚಂದ್ರ ಆಶ್ವಾಸನೆ ನೀಡಿದ - "ಯು ಡೋಂಟ್ ಕೇರ್. ನಾನು ಮಾಡಿಸ್ತೀನಿ. ಈ ವರ್ಷ ಪೋಡು-ಪಟ್ಟೆ ಮಾಡಿಸೋ ಅಗತ್ಯವಿಲ್ಲ. ಮಾಡಿಸಿದರೆ ಕಂದಾಯ ಕಟ್ಟಬೇಕಾಗುತ್ತೆ. ಮುಂದಿನ ವರ್ಷ ಇನ್ನೂ ಜಮೀನು ಹಸನು ಮಾಡಿಸ್ತೀನಿ. ಸರಿ. ಜಮೀನು ಆಯಿತು. ಮನೆ ಆಯಿತು. ಆದರೆ ಮದುವೆ ಬಗ್ಗೆ ಏನು ಯೋಚಿಸಿದ್ದೀಯೆ?"

ಗುಲಬ್ ನಕ್ಕ.

"ಅದಕ್ಕೋಸ್ಕರವೇ ನನ್ನನ್ನು ಹುಡುಕಿಕೊಂಡು ಬಂದಿದ್ದೆಯೊ?" ಉರಿಯುತ್ತಿದ್ದ ಸೌದೆ ಸ್ವಲ್ಪ ತಳ್ಳಿ ಬೆಂಕಿ ಸರಿಪಡಿಸಿ ಚಂದ್ರ ಸ್ವಲ್ಪ ಗಂಭೀರ ಮುದ್ರೆಯಿಂದ ಕುಳಿತ. ಇನ್ನೊಂದು ಬೀಡಿ ಹಚ್ಚಿದ. ಬನೀನಿನ ಜೇಬಿನಿಂದ ಬಾಚಣಿಗೆ ತೆಗೆದು ತಲೆಗೂದಲನ್ನು ಸರಿಪಡಿಸಿದ.

"ಹೂಂ. ಸರಿ ಮಾತಾಡು"

"ಒಂದು ಹೆಣ್ಣು ತರಲು ಯೋಚಿಸಿದ್ದೀನಿ"

"ಮದುವೆ ಮಾಡಿಕೊಳ್ತೀಯಾ?"

"ಉಹೂಂ. ಮದುವೆ ಹೇಗೆ ಮಾಡಿಕೊಳ್ಳಲಿ. ಹೆಣ್ಣು ತಾನಾಗಿಯೇ ಬರಲು ಬಯಸುತ್ತಿದ್ದಾಳೆ."

"ಹೋದ ಸಾರಿ ಆದಹಾಗೆ ಆಗೊಲ್ಲ ತಾನೇ?" - ಚಂದ್ರ ಕೇಳಿದ.

"ಆ ರೀತಿ ಆಗೋ ಸಾಧ್ಯತೆ ಇಲ್ಲ. ಒಳ್ಳೆಯ ಹುಡುಗಿ."

"ಹೆಣ್ಣು ಒಳ್ಳೆಯವಳೋ ಅಥವಾ ಕೆಟ್ಟವಳೋ ಅದು ಕಟ್ಟಿಕೊಂಡು ಏನು. ಗಾರ್ಡಿಯನ್ ಏನು ಹೇಳ್ತಾರೆ?"

"ಬೇರೆ ಯಾರೂ ಅಲ್ಲ " - ಚಂದ್ರನ ಮುಖದ ಕಡೆ ನೋಡಿ ಹೇಳಿದ.

ಬೀಡಿ ಒಂದು ದಂ ಎಳೆದು ಚಂದ್ರ ಸ್ವಲ್ಪ ಹೊತ್ತಿನವರೆಗೆ ಯೋಚಿಸತೊಡಗಿದ. ಮಳೆ ಬೀಳುತ್ತಿದೆಯೇ ಎಂದು ಒಮ್ಮೆ ಹೊರಗಡೆ ಗಮನ ಹರಿಸಿದ. ಮಳೆ ಇನ್ನೂ ನಿಂತಿಲ್ಲ. ಕುಳಿರ್‌ಗಾಳಿ ಬೀಸುತ್ತಿದೆ.

ಸ್ವಲ್ಪ ಹೊತ್ತಿನ ಮೇಲೆ ಚಂದ್ರ ಹೇಳಿದ - "ಸರಿ. ಒಳ್ಳೆಯದೇ ಮಾಡಿದ್ದೀಯೆ. ಒಂದು ಹೆಣ್ಣು ಕರೆಕೊಂಡು ಬರೋದು ತಪ್ಪಲ್ಲ. ಆದರೆ ಎಲ್ಲ ಕೆಲಸವನ್ನೂ ಯೋಚಿಸಿ ಎಚ್ಚರಿಕೆಯಿಂದ ಮಾಡಬೇಕು. ಥಿಂಕಿಂಗ್ ಗುಡ್. ಯಾವಾಗ ಕರೆದುಕೊಂಡು ಬರ್ತೀಯೆ?"

"ಇನ್ನೂ ತೀರ್ಮಾನಿಸಿಲ್ಲ. ಬಿಹು ಆದಮೇಲೆ ಡಾಲಿಮ್ ಹಳ್ಳಿಯಲ್ಲಿ ಭಾರಿ ಔತಣವಿದೆ. ಔತಣದ ದಿನವೇ ಕರೆದುಕೊಂಡು ಬರಲು ಯೋಚಿಸಿದ್ದೇನೆ."

"ಹೆಣ್ಣು ಏನು ಹೇಳುತ್ತೆ?"

"ಏನು ಹೇಳ್ತಾಳೆ? ಅವಳ ರಾಜಿ-ಖುಷಿ."

"ಡು ಒನ್ ಥಿಂಗ್. ಒಂದು ಕೆಲ್ಸ ಮಾಡು. ಇಲ್ಲಿ ಯಾರಾದರೂ ಮೌಲ್ವಿಗಳು ಇದ್ದಾರೋ, ಇಲ್ಲವೋ?"

"ಮೌಲ್ವಿ?" - ಗುಲಬ್ ಚಂದ್ರನ ಕಡೆ ನೋಡಿದ.

"ಅಂದಹಾಗೆ, ಒಬ್ಬ ಮೌಲ್ವಿಗೆ ಹೇಳಿ ಗೊತ್ತುಮಾಡಿಕೊ. ಬೇರೆ ಹುಡುಗಿ ಜೊತೆಯಲ್ಲಿ ಹಾಗೇನೇ ಸಂಸಾರ ಹೂಡ್ತೀಯಾ? ಮನೆಗೆ ಬಂದ ಕೂಡಲೇ ಮೌಲ್ವಿ ಕೈಯಲ್ಲಿ ನಿಕಾ ಮಾಡಿಸು. ಈ ರೀತಿ ಮಾಡಿದರೆ ಯಾರೂ ನಿನಗೆ ಏನೂ ತೊಂದರೆ ಮಾಡಲು ಸಾಧ್ಯವಿಲ್ಲ. ಚೇನಿಮಾಳ ಕರೆದುಕೊಂಡು ಬಂದ ಕೂಡಲೇ ನಿಕಾ ಮಾಡಿಸಿಬಿಟ್ಟಿದ್ದರೆ ಈ ರೀತಿ ಆಗುತ್ತಿರಲಿಲ್ಲ."

ಗುಲಬ್‌ನ ಮುಖದಲ್ಲಿ ಕಾಂತಿ ಹೊಮ್ಮಿತು. ಈ ವಿಷಯ ಆತನ ಮನಸ್ಸಿಗೆ ಹೊಳೆದೇ ಇರಲಿಲ್ಲ. ನಿಕಾ ಮಾಡಿಸಿಬಿಟ್ಟರೆ ಅವರ ಸಂಬಂಧ ಊರ್ಜಿತ ಆಗುತ್ತೆ.

"ಸರಿ. ನೀನು ಒಳ್ಳೆಯ ಮಾತು ಹೇಳಿದೆ. ನಮ್ಮಲ್ಲಿ ಮಝಪ್ಫರ್ ಮೌಲ್ವಿ ಇದ್ದಾರೆ. ಅವರಿಗೆ ತಿಳಿಸಿ ಗೊತ್ತು ಮಾಡ್ತೀನಿ."

"ಬ್ಯಾಡ. ಮಝಪ್ಫರ್‌ಗೆ ತಿಳಿಸಬ್ಯಾಡ. ಆತ ಅಷ್ಟು ನಂಬಿಕಸ್ಥ ಅಲ್ಲ. ನಾನು ಅವನನ್ನು ಚೆನ್ನಾಗಿ ಬಲ್ಲೆ. ಸಿಪರಿಯಾ ಹಳ್ಳಿಯ ಆಚೆ ಕೊನೆಯಲ್ಲಿ ಸಿದ್ದಿಕ್ ಮೌಲ್ವಿ ಇಲ್ವೇ?...........ಸಿಲಹಟ್‌ನವನು? ಅವನಿಗೆ ಹೇಳಿ ಬಂದೋಬಸ್ತು ಮಾಡು. ಮನೆಗೆ ಹುಡುಗಿ ಕರೆತಂದ ಕೂಡಲೇ ನಿಕಾ ಮಾಡ್ಸಿಬಿಡು."

"ನನಗೆ ಸಿದ್ದಿಕ್ ಪರಿಚಯ ಇಲ್ಲ. ನೀನೆ ಹೇಳಿ ಬಂದೋಬಸ್ತು ಮಾಡು, ಚಂದ್ರ."

"ನೀನೆಂಥ ಮೂರ್ಖ. ನಿನ್ನ ನಿಕಾ ಮಾಡೋ ಮೌಲ್ವಿಯನ್ನು ನಾನು ಬಂದೋಬಸ್ತು ಮಾಡಲೇ? ನಾನು ಹೇಳಿದರೆ ಬರ್ತಾನೆಯೇ? ಯು ಮ್ಯಾರೇಜ್! ಐ ನಿಕಾ!"

"ಹಾಗಲ್ಲ ಚಂದ್ರ, ತಮಾಷೆ ಮಾಡಬ್ಯಾಡ. ನೀನು ಹೇಳಿದರೆ ಮಾತ್ರ ಅವನು ಬರ್ತಾನೆ. ಬೇಕಾದರೆ ಮುಂಗಡವಾಗಿ ನಾಲ್ಕು ಆಣೆ ಕೊಟ್ಟು ಬಾ."

"ಸರಿ. ಏನಾದರೂ ಮಾಡ್ತೀನಿ. ನೀನಂತೂ ಅವಳನ್ನು ಕದ್ದು ಕರೆದುಕೊಂಡು ಬರ್ತೀಯೆ? ಮದುವೆ ಮಾಡಿಕೊಂಡಲ್ಲ. ಅಲ್ವೇ? ಸ್ವಲ್ಪ ಎಚ್ಚರಿಕೆಯಾಗಿರಬೇಕು. ಸರಿ, ಮುಖ್ಯವಾದ ವಿಷಯವನ್ನೇ ಕೇಳಲಿಲ್ಲ. ಆ ಹುಡುಗಿ ಯಾರು?"

"ನಿನಗೆ ಗೊತ್ತೇ ಇದೆ - ಆ ಕಪಾಹಿ -ಅವಳ -ನಿನಗೆ ಹೇಳಿರಲಿಲ್ಲವೇ?"

"ಅಹುದು. ತಿಳಿಯಿತು. ಅರ್ಥವಾಯಿತು. ಒಳ್ಳೆಯ ಹುಡುಗಿ. ಆದರೆ ಇಬ್ಬರನ್ನು ಕರೆದುಕೊಂಡು ಬರಬೇಕಾಗುತ್ತೆ ಅಲ್ವೇ?"

"ಹಾಗೆ ಮಾಡದಿದ್ದರೆ ಹೇಗೆ ನಡೆಯುತ್ತೆ. ಯಾರನ್ನು ಕರೆದುಕೊಂಡು ಬರಲಿ? ಯಾರನ್ನು ಬಿಡಲಿ?"

"ಎಷ್ಟು ಹೊತ್ತಾಯಿತು?"

"ಗೊತ್ತಿಲ್ಲ. ಆದರೆ ನನ್ನ ದೇಹದ ಪ್ರಕೃತಿಯ ಅಂದಾಜಿನ ಮೇಲೆ ಹೇಳೋದಾದರೆ ಸಾಯಂಕಾಲದ ವೇಳೆ ಆಗಿದೆ. ನಾನು ಬರ್ತೀನಿ. ಈ ರಾತ್ರಿ ಬಹಳ ಚಳಿಯಾಗುತ್ತೆ ಅಂತ

ಕಾಣುತ್ತೆ.''

''ನಾನೂ ಬರ್‍ತೀನಿ. ಡಾಲಿಮ್‌ಗೆ ಹೋಗಬೇಕಾಗಿದೆ. ಸ್ವಲ್ಪ ಕೆಲ್ಸವಿದೆ''- ಗುಲಬ್ ಹೇಳಿದ.

''ಬರೋದಾದರೆ 'ಮೇಕ್ ಹೇಸ್ಟ್'. ಈ ಪೊತ್ತೇ ಹಿಂದಿರುಗುತ್ತೀಯೋ - ಇಲ್ಲವೋ?''

''ಎಲ್ಲಿ ತಂಗಲಿ? ಹಿಂದಿರುಗಿ ಬರಲೇ ಬೇಕು. ಹೀಗೆಯೇ ಮನೆಮಠ ಬಿಟ್ಟು ಇರೋಕೆ ಆಗುತ್ತದೆಯೇ''

ಇಬ್ಬರೂ ಹೊರಟರು.

''ಒಂದು ವಿಷಯ ಚಂದ್ರ ''

''ಅದೇನು?''

''ಎರಡು ಕೆಲ್ಸ ಮಾತ್ರ ಪೂರೈಸೋಕೆ ಆಗಲಿಲ್ಲ.''

''ಯಾವ ಕೆಲಸ ಪೂರೈಸೋಕೆ ಆಗಲಿಲ್ಲ.''

''ಒಂದು ಕೊಳ. ಮತ್ತೊಂದು ಕೊಟ್ಟಣದ ಯಾತ.''

''ಆಗುತ್ತೆ. ಎಲ್ಲಾ ಆಗುತ್ತೆ. ಮೊದಲು ಮನೆಗೆ ಗೃಹಿಣಿ ಕರೆದುಕೊಂಡು ಬಾ. ಕೊಳ, ಕೊಟ್ಟಣದ ಯಾತ ಎಲ್ಲ ನಿಧಾನವಾಗಿ ಆಗುತ್ತೆ. ಅವುಗಳ ಯೋಚನೆಯಲ್ಲೇ ಈಗಿನಿಂದಲೇ ಕೊರಗಬೇಕಾದ ಅಗತ್ಯವಿಲ್ಲ.''

ಇಬ್ಬರೂ ಮುಂದೆ ಹೊರಟರು.

ಮಳೆ ಸ್ವಲ್ಪ ನಿಂತಿತ್ತು. ಆದರೆ ಪೂರ್ಣ ನಿಂತಿರಲಿಲ್ಲ. ರಾತ್ರಿಗೆ ಜೋರಾಗಿ ಮಳೆ ಬರಬಹುದು.

ರಸ್ತೆಯಲ್ಲಿ ಹೋಗುತ್ತಾ ಚಂದ್ರ ಬುದ್ಧಿವಂತನಂತೆ ಮಾತಾಡಿದ - ''ರಿಯಲೀ, ತಿಳಿದಿದ್ದೀಯಾ. ಹಳ್ಳಿಯವರಾದ ನಮಗೆ ಆರು ವಸ್ತುಗಳು ಅತ್ಯಂತ ಅಗತ್ಯವಾಗಿ ಬೇಕಾಗಿವೆ ಅಲ್ವೇ? ಬ್ಯಾಡಲಿ ರಿಕ್ವೇಯರ್ : ಗುದ್ದಲಿ, ಕೈಗೊಡಲಿ, ಬಿಂದಿಗೆ ಮತ್ತು ಕೊಟ್ಟಣದ ಯಾತ ಇವುಃ.ಡಬ್ಬ್ಯಾಗೆ ಕೆಲ್ಸ ನಡೆಯೋದೇ ಇಲ್ಲ.''

ಗುಲಬ್ ಹೇಳಿದ - ''ಎಲ್ಲಾ ಇವೆ. ಕೊಟ್ಟಣದ ಯಾತ ಒಂದು ಹಾಕಿದರೆ ಕೆಲ್ಸ ನಡೆಯತ್ತೆ. ಡಾಲಿಮ್ ಹಳ್ಳಿಯ ನಮ್ಮ ಮನೆಯಲ್ಲಿ ಒಂದು ಹಳೆಯಾತ ಇದೆ. ಅದನ್ನು ತರಬೇಕಾಗುತ್ತೆ ಅಲ್ವೇ?''

ಆತನ ಮಾತಿಗೆ ಉತ್ತರಿಸದೆ ಚಂದ್ರ ಹೇಳಿದ - ''ರಸ್ತೆ ಸರಿಪಡಿಸಿದರೆ ನಮ್ಮ ಹಳ್ಳಿಯ ಕಡೆಯೂ ಮೋಟಾರು, ಬಸ್ಸು ಬಂದುಹೋಗಲು ಸಾಧ್ಯ. ಅದೊಂದು ಆದರೆ ನಾವು ಕಾಲು ನಡಿಗೆಯಲ್ಲಿ ಪ್ರಯಾಣ ಮಾಡೋದು ತಪ್ಪುತ್ತೆ. ಬೇಕಾದರೆ ಒಂದು ರೈಸ್ ಮಿಲ್ ಇಡಬಹುದು. ನಾನು ಪಟ್ಟಣಕ್ಕೆ ಹೋದಾಗ ಆ ವಿಷಯದ ಬಗ್ಗೆ ಮಾತಾಡಿ ನೋಡ್ತೀನಿ.

ಒಟ್ಟಿಗೆ ಹೋಗುತ್ತಿದ್ದ ಇಬ್ಬರೂ ಈಗ ಒಬ್ಬೊಬ್ಬರೇ ಬೇರೆ ಬೇರೆ ಕಡೆ ಹೋಗುವ ಸಮಯ ಆಯಿತು.

ಗುಲಬ್ ಹೇಳಿದ - ''ಚಂದ್ರ ನೀನು ನನಗೆ ಸಹಾಯ ಮಾಡಲೇ ಬೇಕು. ನನಗೆ ನನ್ನವರು ಅಂತ ಯಾರಿದ್ದಾರೆ?'' ಹಣ - ಕಾಸೂ ಸಹ ಇಲ್ಲ. ಈ ಕೈಗಳಿಂದ ಇನ್ನೆಷ್ಟು ಸಂಪಾದಿಸಲು ಸಿಗುತ್ತೆ? ಸಿದ್ದಿಕ್ ಮೌಲ್ವಿಯನ್ನು ನೀನು ಕರೆದುಕೊಂಡು ಬಾ. ನನಗೆ ಎಲ್ಲಿ ಪುರಸೊತ್ತು ಸಿಗುತ್ತೆ?''

"ಸರಿ, ಆಗಬಹುದು. ನಿನ್ನ ಮದುವೆಗೆ ನಾನು ಸಹಾಯ ಮಾಡೋದಿಲ್ವೇ? ಆದರೆ ಯಾವೊತ್ತು ಅನ್ನೋದನ್ನು ಮೊದಲೇ ತಿಳಿಸಬೇಕು. ಐ ಹೆಲ್ಪ್ ಯು. ನೋ ಅಫ್ರೈಡ್."

ಚಂದ್ರ ಮನೆಗೆ ಹೊರಟು ಹೋದ. ಗುಲಬ್ ಸಹ ಹಚ್ಚಡವನ್ನು ತಲೆಯವರೆಗೂ ಎಳೆದುಕೊಂಡು ನಿಧಾನವಾಗಿ ಕಪಾಹಿಯ ಮನೆ ಕಡೆ ಹೊರಟ.

ಪಾಹಿಯಿಂದ ಹೊರಟಾಗಲೇ ಸಾಯಂಕಾಲವಾಗಿತ್ತು. ಈಗ ಕತ್ತಲಾಗಿದೆ. ಗುಲಬ್ ಅತ್ತ ಇತ್ತ ದೃಷ್ಟಿ ಹಾಯಿಸಿದ. ಚಳಿ ಮತ್ತು ಮಳೆಯಾಗುತ್ತಿದ್ದುದರಿಂದ ಎಲ್ಲರೂ ಮನೆ ಒಳಗಡೆ ಹೋಗುತ್ತಿದ್ದರು.

# ಹದಿನಾಲ್ಕು

ಮುದುಕ ಸಫಿಯತ್ ತಾನು ಬರೋದಿಲ್ಲ. ಇತ್ತೀಚೆಗೆ ಮಗ ಮೂಗನನ್ನೂ ಕಳುಹಿಸುವುದಿಲ್ಲ. ಬೇರೆಯವರ ಮೂಲಕ ಹೇಳಿ ಕಳುಹಿಸುತ್ತಾನೆ. ತರಾ ಮದುವೆ ಮುಗಿದ ಮೇಲೆ ಕಪಾಹಿಗಾಗಿ ಏನಾದರೊಂದು ವ್ಯವಸ್ಥೆ ಮಾಡುತ್ತೇನೆ ಎಂದು ಆಶ್ವಾಸನೆ ಸಹ ನೀಡಿದ್ದಾನೆ. ಯೌವ್ವನವಿರುವಾಗಲೇ ಈ ರೀತಿ ಅವಳು ವಿಧವೆಯಂತೆ ಕಷ್ಟ ಅನುಭವಿಸಬೇಕಾಗಿಲ್ಲ. ನಾಹರ್ ಸಹ ಮತ್ತೆ ಅವಳೊಡನೆ ಕೂಡಿ ಬಾಳಬಹುದು. ಅವನಿಗೆ ಮೊದಲಿನಂತೆ ರೋಷ ಇಲ್ಲ. ಒಂದು ವೇಳೆ ಆತ ಒಪ್ಪದೆ ಹೋದರೆ ಕಪಾಹಿಯಂಥ ಹೆಣ್ಣನ್ನು ಮದುವೆಯಾಗಲು ಯಾರು ಹಿಂಜರಿಯುತ್ತಾರೆ. ಅವಳ ರೂಪ ಮತ್ತು ಸೌಂದರ್ಯ ಎಲ್ಲ ನಿತ್ಯನೂತನ. ಈಗಲೂ ನೋಡೋಕೆ ಅವಳು ಹದಿನಾರು ಹದಿನೇಳು ವರ್ಷದ ಹುಡುಗಿಯಂತೆ ಕಾಣುತ್ತಾಳೆ. ಅವಳಿಗೆ ಸುಮಾರು ಮೂವತ್ತು ವರ್ಷ ಆಗಿದೆ ಅಂತ ಯಾರು ಹೇಳ್ತಾರೆ? ಈ ಕಾಲದಲ್ಲಿ ಮೂವತ್ತು ವರ್ಷ ಏನು ಮಹಾ? ಪಟ್ಟಣದ ಹುಡುಗಿಯರಿಗೆ ಗಂಡು ಹುಡುಕೋ ವಯಸ್ಸಿನಷ್ಟು ವರ್ಷ ಈಗ ತಾನೆ ಮುಗಿದಿದೆ. ಹಜಾರಿಕಾ ಸಾಹೇಬರ ಒಬ್ಬ ಮಗಳ ಮದುವೆ ಮೂವತ್ತಾರನೇ ವಯಸ್ಸಿನಲ್ಲಿ ನೆರವೇರಿತು.

ಮೊದಲು ತರಾ ಮದುವೆ ಮುಗಿಯಲಿ.

ಆಗಿಂದಾಗ್ಗೆ ಸಫಿಯತ್ ಕಪಾಹಿಗೆ ಬಂದು ಹೋಗಲು ಹೇಳಿಕಳುಹಿಸುತ್ತಾನೆ. ಕಪಾಹಿ ಹೋಗುತ್ತಿರುತ್ತಾಳೆ. ತಿಂಡಿ ತಿಂದು ಬರುತ್ತಾಳೆ. ಒಮ್ಮೊಮ್ಮೆ ಬತ್ತ ಕುಟ್ಟಿ ಅಕ್ಕಿ ವ್ಯವಸ್ಥೆ ಮಾಡಿಕೊಂಡು ಬರುತ್ತಾಳೆ. ಹೊರಡುವಾಗ ಒಮ್ಮೊಮ್ಮೆ ಅವಳಿಗೆ ಒಂದು ಆಣೆ ಸಹ ಕೊಡುತ್ತಾನೆ. ಈಗಂತೂ ಸಂಬಂಧ ಬೆಳಸಲು ಮಾರ್ಗ ಸುಗಮವಾದಂತೆ ತೋರುತ್ತದೆ.

ಕಪಾಹಿ ಎದುರಿನಲ್ಲಿ ಮೂಗನ ಪ್ರಶಂಸೆ ಮಾಡಿ ಏನೂ ಪ್ರಯೋಜನವಿಲ್ಲವೆಂಬುದು ಸಫಿಯತ್‌ಗೆ ಗೊತ್ತು. ಆದುದರಿಂದ ಆ ವಿಷಯದ ಬಗ್ಗೆ ಏನೂ ಮಾತನಾಡದೆ ತನ್ನ ಮನೆ-ಮಠದ ವಿಷಯ ಮಾತಾಡುತ್ತಾನೆ. ಜಮೀನಿದ್ದರೆ ಏನಾದರೂ ಬೆಳೆಸು ಬೆಳೆಯಬಹುದು ಎನ್ನುತ್ತಾನೆ.

ಕಪಾಹಿ ಯಾವುದಕ್ಕೂ ಇಲ್ಲಿಯವರೆಗೆ 'ಉಂಟು ಅಥವಾ ಇಲ್ಲ' ಏನೂ ಹೇಳಲಿಲ್ಲ.

ಅವಳು ಮನಸ್ಸಿನಲ್ಲೇ ಲೆಕ್ಕಾಚಾರ ಹಾಕುತ್ತಿದ್ದಾಳೆ. ತನ್ನ ಮನಸ್ಸಿನಲ್ಲಿರೋದನ್ನು ಬೇರೆಯವರಿಗೆ ತಿಳಿಸುವುದಿಲ್ಲ. ಸಮಯ ಕಾದು ತೀರ್ಮಾನ ಕೈಗೊಳ್ಳುತ್ತಾಳೆ. ತರಾಳಿಗೊಂದು ವ್ಯವಸ್ಥೆ ಮಾಡಿದರೆ ತನ್ನ ವ್ಯವಸ್ಥೆ ತಾನೇ ಮಾಡಿಕೊಳ್ಳಬಲ್ಲಳು.

ರಪಾಹಿಯ ಮನೆಗೆ ಗುಲಬ್ ಬಂದಾಗ ಅವಳು ಮನೆಯಲ್ಲಿರಲಿಲ್ಲ. ಮುದುಕ ಸಫಿಯತ್ ಬರಹೇಳಿಕಳುಹಿಸಿದ್ದ. ಅವಳು ಅಲ್ಲಿಗೆ ಮಧ್ಯಾಹ್ನದ ಮೇಲೆ ಹೋಗಿದ್ದಳು. ಹಿಂದಿರುಗಿ ಬರೋದು ಸ್ವಲ್ಪ ಹೊತ್ತಾಗಬಹುದು. ಇತ್ತೀಚೆಗಂತೂ ಊಟ- ತಿಂಡಿ ಮಾಡಿ ಮುಗಿಸಿದ ಮೇಲೆ ಕಳುಹಿಸುತ್ತಾನೆ. ಮುದುಕನ ಸ್ನೇಹ ದೊಡ್ಡದು.

"ಅಣ್ಣಾನೇ?"

"ಅಹುದು. ತರಾ ತುಂಬಾ ಚಳಿ. ಬೆಂಕಿಯನ್ನು ಸ್ವಲ್ಪ ಜಾಸ್ತಿ ಹೊತ್ತಿಸು. ನಿಮ್ಮ ಚಿಕ್ಕಮ್ಮ ಇಲ್ವೇ?"

ತರಾ ಹೇಳಿದಳು - "ಸಫಿಯತ್ ಮನೆಗೆ ಚಿಕ್ಕಮ್ಮ ಹೋಗಿದ್ದಾಳೆ. ಬೇಗ ಬರೋಲ್ಲ. ಬಂದರೂ ಹೆದರಬೇಕಾದ ಪ್ರಮೇಯ ಇಲ್ಲ. ಈ ಪೊತ್ತೋ ಅಥವಾ ನಾಳೆಯೋ ಜೊತೆಯಲ್ಲೇ ಇರ್‍ತೀವಿ."

"ರಾತ್ರಿ ಹೊತ್ತು ಯಾಕೆ ಹೋಗಿದ್ದಾಳೆ ?" - ಕೈಗಳನ್ನು ಬೆಂಕಿಯಲ್ಲಿ ಕಾಯಿಸಿಕೊಳ್ಳುತ್ತಾ ಗುಲಬ್ ಕೇಳಿದ.

"ತಡ ಮಾಡಿದರೆ ವಿಪತ್ತು ಒದಗೋ ಸಂಭವ ಇದೆ ಅಂತ ನಾನು ಹೇಳಿರಲಿಲ್ವೇ?"

"ನೀನು ಹೆದರಬೇಡ. ಇನ್ನು ತಡ ಮಾಡೋಲ್ಲ. 'ಬಿಹು' ಬಂದೇ ಬಿಟ್ಟಿತು. ಅದಾದ ಮೇಲೆ ಶುಕ್ರವಾರ ಔತಣ ಇಲ್ವೇ? ಇನ್ನೆಷ್ಟು ದಿನ ಉಳಿದಿದೆ?"

"ಚಿಕ್ಕಮ್ಮ ಸಹ ಬಾಯಿಬಿಟ್ಟು ಏನೂ ಹೇಳೋದಿಲ್ಲ. ನನಗಂತೂ ಬಹಳ ಹೆದರಿಕೆಯಾಗಿದೆ. ಹಾಗೇನೇ ಆಸೆ ಹುಟ್ಟಿಸುತ್ತಾಳೆ. ಅನಂತರ ಜಬರ್ದಸ್ತಿಯಾಗಿ ಏನು ಮಾಡ್ತಾಳೋ ಅಂತ ಹೆದರಿಕೆ."

"ಒಂದು ವೇಳೆ ಏನಾದರೂ ಮಾಡಿದರೂ ಅಂತಲೇ ಭಾವಿಸು. ನೀನು ಏನು ಮಾಡ್ತಿಯೇ?" -ತಮಾಷೆ ಮಾಡೋ ನೆವದಲ್ಲಿ ಗುಲಬ್ ಕೇಳಿದ.

ಕೋಪ ವ್ಯಕ್ತಪಡಿಸುತ್ತಾ ತರಾ ಹೇಳಿದಳು - "ಹಾಗೆ ಹೇಳೋಕೆ ನಿಮಗೆ ನಾಚಿಕೆ ಆಗೋದಿಲ್ವೇ? ಗಂಡಸರಿಗೇನು? ಹೇಳೋಕೆ! ನಾನು ಬೇರೆ ಹುಡುಗಿಯರ ಹಾಗಲ್ಲ. ನೀವು ಕರೆದುಕೊಂಡು ಹೋದರೆ ಬರ್‍ತೀನಿ. ಬೇರೆಯವರ ಜೊತೆಯಲ್ಲಿ ಹೋಗೋದೇ ಇಲ್ಲ. ಪ್ರೀತಿಯೂ ಇಲ್ಲ. ನೀವು ಕರೆದುಕೊಂಡು ಹೋಗದಿದ್ದರೆ ಬೇರೆಯವರೊಡನೆ ಹೋಗುವುದೂ ಇಲ್ಲ. ಎಲ್ಲಿದ್ದರೂ ನಿಮ್ಮವಳೇ ಆಗಿ ಇರ್‍ತೀನಿ."

ಗುಲಬ್ ತರಾಳನ್ನು ಹತ್ತಿರಕ್ಕೆ ಎಳೆದುಕೊಂಡ.

"ನಿನ್ನೊಡನೆ ನಾನು ಕೇವಲ ತಮಾಷೆ ಮಾಡಿದೆ ಅಷ್ಟೇ. ನೀನು ನನ್ನವಳಾಗದೆ ಬೇರೆಯವಳಾಗಲು ಸಾಧ್ಯವೇ? ಯಾವುದೇ ಕಾರಣದಿಂದ ನೀನು ಒಂದು ವೇಳೆ ನನ್ನವಳಾಗದೆ ಇದ್ದರೂ ನಾನು ಮಾತ್ರ ನಿನ್ನನ್ನೇ ಸದಾ ಪ್ರೀತಿಸುತ್ತಿರುತ್ತೇನೆ. ನಾನು ಮತ್ತಾರನ್ನಾದರೂ ಪ್ರೀತಿಸಿದ್ದೇನೆಯೇ?"

ಗುಲಬ್‌ನ ತೊಡೆಯ ಮೇಲೆ ತರಾ ತನ್ನ ತಲೆಯಿಟ್ಟಳು. ಗುಲಬ್ ಅವಳ ತಲೆ ಮತ್ತು

ಬೆನ್ನನ್ನು ನೇವರಿಸುತ್ತಾ ಪ್ರೀತಿಸಿದ.

"ನೀವು ಕೈ ಬಿಟ್ಟರೆ ನಾನಂತೂ ಬದುಕಿರಲಾರೆ. ನನ್ನನ್ನು ಧನಶಿರಿಯ ಗರ್ಭದಲ್ಲೇ ಹುದುಕಬೇಕಾಗುತ್ತೆ."

"ನೀನು ನನ್ನಿಂದ ದೂರವಿರಲು ಸಾಧ್ಯವಿಲ್ಲ. ನಾನು ಎಂದಿಗೂ ನಿನ್ನನ್ನು ಕೈ ಬಿಡೋದಿಲ್ಲ. ಏನು ಬೇಕಾದರೂ ಆಗಲಿ."

ತರಾಳನ್ನು ಗುಲಬ್ ಮತ್ತಷ್ಟು ಹತ್ತಿರಕ್ಕೆ ಎಳೆದುಕೊಂಡು ಪ್ರಯತ್ನಿಸಿದ.

ಅವನ ಕೈಯಿಂದ ಬಿಡಿಸಿಕೊಂಡು ತರಾ ಹೇಳಿದಳು - "ಈಗಲೇ ಹಾಗೆಲ್ಲ ಮಾಡಬಾರದು. ಈಗ ಚಿಕ್ಕಮ್ಮ ಬರೋ ಸಮಯ. ಎಲ್ಲಿ, ನನ್ನ ಮೈಮೇಲಿರೋ ಕೈ ಎತ್ತಿಕೊಳ್ಳಿ."

"ನಿನಗೆ ಸಿಟ್ಟು ಬಂತೇ?" ಕೆನ್ನೆಯ ಮೇಲೆ ಕೈಯಿಟ್ಟು ಗುಲಬ್ ಕೇಳಿದ.

'ಗುಲಬ್‌ನ ವಕ್ಷಸ್ಥಲದಲ್ಲಿ ಆರಾಮವಾಗಿ ಸ್ವಲ್ಪ ಹೊತ್ತು ವಿರಮಿಸಿ ತರಾಳಿಗೆ ತೃಪ್ತಿ ಲಭಿಸಿದೆ.

ಅನಂತರ ಗುಲಬ್ ಮೆಲುದನಿಯಲ್ಲಿ ಹೇಳಿದ - "ತರಾ, ನಾನು ಎಂದಿಗೂ ನಿನ್ನನ್ನು ಬಿಟ್ಟಿರೋದಿಲ್ಲಾ. ನೀನು ನನ್ನನ್ನು ಬಿಟ್ಟು ಹೊರಟು ಹೋಗ್ತೀಯಾ?"

ಆ ಪ್ರಶ್ನೆಗೆ ಉತ್ತರಿಸದೆ ತರಾ ಆ ಏಕಾಂತದ ಆವೇಶದಿಂದ ಆತನನ್ನು ಬಿಗಿದಪ್ಪಿಕೊಂಡಳು.

ಮನೆಯ ಛಾವಣಿಯ ಮೇಲೆ ಸೋನೆ ಮಳೆ ಬೀಳೋ ಸದ್ದು ಕೋಮಲ ಹಾಗೂ ಶಾಂತವಾಗಿ ಕೇಳಿಬರುತ್ತಿತ್ತು. ಗೋಡೆಗಳ ಸಂದುಗಳಲ್ಲಿ ಕುಳಿರ್‌ಗಾಳಿ ಬೀಸೋ ಸದ್ದು ಕೇಳಿ ಬರುತ್ತಿತ್ತು. ಬೆಂಕಿಯ ಗರ್ಭದಲ್ಲೊಂದು ಉತ್ತಾಪವಿದೆ.

ಎರಡೂ ಹೃದಯಗಳ ಮಿಡಿತ ಒಂದಾಗತೊಡಗಿದೆ.

ಎಲ್ಲೋ ನಿಧಾನವಾಗಿ ನರಿಯೊಂದು ಹೂವಾಂ, ಹೂವಾಂ ಎಂದು ಅರಚುತ್ತಾ ಓಡುತ್ತಿದೆ. ತರಾ ನಿಧಾನವಾಗಿ ಗುಲಬ್‌ನ ಹತ್ತಿರದಿಂದ ಸ್ವಲ್ಪ ದೂರ ಸರಿದಳು. ಬೆಂಕಿಯಲ್ಲಿ ಸ್ವಲ್ಪ ಸೌದೆ ಹಾಕಿದಳು. ನಾಚಿಕೆಗೊಂಡವಳಂತೆ ತಲೆ ತಗ್ಗಿಸಿಕೊಂಡು ಕುಳಿತಳು. ಅವಳ ಮುಖ ತೀರಾ ಕೆಂಪೇರಿತ್ತು.

ತರಾ ಕೇವಲ ಹದಿನಾಲ್ಕು ವರ್ಷದ ಹುಡುಗಿ. ಆದರೆ ಈ ವಯಸ್ಸಿನಲ್ಲೇ ಅವಳಲ್ಲಿ ಯೌವನ ತುಂಬಿ ತುಳುಕಾಡುತ್ತಿತ್ತು. ಕಟ್ಟುಮಸ್ತಾದ ಮೈಕಟ್ಟು ದಪ್ಪ ಹಾಗೂ ದುಂಡಗೆ ಅಂದವಾಗಿರೋ ಕೈಕಾಲು, ದಾಳಿಂಬೆ ಹೂವಿನಂಥ ತುಟಿಗಳು - ಸರಳ, ಗಂಭೀರ ಹಾಗೂ ಸುಂದರವಾದ ನೇತ್ರಗಳನ್ನು ಎಷ್ಟು ನೋಡಿದರೂ ಗುಲಬ್‌ನಿಗೆ ಪೂರ್ಣ ತೃಪ್ತಿಯಿಲ್ಲ. ಕಪಾಹಿಯೂ ಸುಂದರವಾಗಿದ್ದಾಳೆ. ಆದರೆ ಈ ತೆರನಾಗಿಲ್ಲ. ಇನ್ನೊಂದು ರೀತಿಯ ಸೌಂದರ್ಯ ಅವಳಲ್ಲಿದೆ. ಕಪಾಹಿಯನ್ನು ನೋಡಿದರೆ ಮೋಹಿಸಬೇಕೆನಿಸುತ್ತದೆ. ತರಾಳನ್ನು ನೋಡಿದರೆ ಪ್ರೀತಿಸಲು ಮನಸ್ಸಾಗುತ್ತದೆ. ಎದೆಗಪ್ಪಿಕೊಳ್ಳಬೇಕೆನಿಸುತ್ತದೆ. ಆಕೆಯ ಜೊತೆಯಲ್ಲಿ ಸುಮ್ಮನೆ ಏನಾದರೂ ಮಾತನಾಡಬೇಕೆಂದು ಮನಸ್ಸಾಗುತ್ತದೆ. ತರಾ ಬಹಳ ಚಿಕ್ಕ ಹುಡುಗಿ ಅನಿಸುತ್ತದೆ.

"ಇನ್ನು ನಾನು ಬರ್ತೀನಿ, ತರಾ!"

"ಊಟ ಮಾಡ್ಕೊಂಡು ಹೋಗಿ. - ಇಲ್ಲದಿದ್ದರೆ ಎಲ್ಲಿ ಊಟ ಮಾಡ್ತೀರಿ? ಇಷ್ಟು ಚಳಿಯಿದೆ."

"ಅಡಿಗೆಯಾಗಿದ್ದರೆ ಬಡಿಸು"

ಊಟಕ್ಕೆ ಕುಳಿತು ಗುಲಬ್ ಹೇಳಿದ - "ಔತಣದ ದಿನ, ರಾತ್ರಿ ಹೊತ್ತು, ಜ್ಞಾಪಕ ಇರುತ್ತೆ ತಾನೇ?"

"ಹೇಳೋದು ಮರೆಯದಿದ್ದರೆ ಸರಿ "-ತರಾ ಹೇಳಿದಳು.

ಊಟ ಮಾಡುತ್ತಿದ್ದ ಸಮಯದಲ್ಲೇ ಕಪಾಹಿ ಬಂದಳು. ಗೊರಸಲು ಹೊರಗಡೆ ಇಟ್ಟು ಕಪಾಹಿ ಒಳಗಡೆ ಬಂದಳು. " ಇಷ್ಟೊಂದು ಚಳಿ, ಹೇ ತರಾ, ನೋಡು, ಒಂದು ಲೋಟ ಬಿಸಿನೀರು ಕೊಡು." ಗುಲಬ್ ಊಟ ಮಾಡುತ್ತಿರುವುದನ್ನು ಅಕಸ್ಮಾತ್ತಾಗಿ ಕಂಡು ಕಪಾಹಿ ನಿಂತಳು.

"ಹೂಂ, ಇಲ್ಲೇ ಬಂದಿದ್ದೆ. ತರಾ ಊಟ ಮಾಡಿ ಹೋಗಿ ಅಂದಳು." ಗುಲಬ್ ವಿವರಣೆ ನೀಡಿದ.

"ಸಫಿಯತ್ ಹೇಳಿ ಕಳುಹಿಸಿದ್ದ. ರಾತ್ರಿ ಬಹಳ ಹೊತ್ತಾಗಿದೆ?" - ಬೆಂಕಿ ಹತ್ತಿರ ಕುಳಿತು ಕಪಾಹಿ ಹೇಳಿದಳು.

"ಯಾತಕ್ಕೆ ಬರಹೇಳಿದ್ದ?"

ಪ್ರಶ್ನೆಗೆ ನೇರವಾಗಿ ಉತ್ತರಿಸದೆ ಕಪಾಹಿ ಹೇಳಿದಳು - "ನಾನು ಅಲ್ಲೇ ಊಟ ಮುಗಿಸಿಕೊಂಡು ಹೊರಟೆ. ತರಾ, ನೀನು ಊಟ ಮಾಡು."

ಅನಂತರ ಹೇಳಿದಳು - "ಏನು ಮಾಡಲಿ? ಅರ್ಥವೇ ಆಗೋದಿಲ್ಲ."

"ಏನಾಯಿತು?"

"ಏನೋ ಆಗುತ್ತೆ. ಆದರೆ ಇಲ್ಲಿನ ವ್ಯವಸ್ಥೆ ಏನಾದರೂ ಆಗಿದೆಯೋ ಅಥವಾ ಇಲ್ಲವೋ?"

"ಆಗಿದೆ, ಎಲ್ಲ ಆಗಿದೆ. ಇಲ್ಲ ಎಲ್ಲವೂ ಸುವ್ಯವಸ್ಥಿತ."

ಕಪಾಹಿ ಹೇಳಿದಳು - "ಔತಣದ ದಿನ ಸಮೀಪಿಸಿತು. ಮೊದಲೇ ಸಾಮಾನು-ಸರಂಜಾಮು ಸಾಗಿಸಿದ್ದರೆ ಚೆನ್ನಾಗಿತ್ತು."

"ಗಾಡಿ ಬರುತ್ತೆ" - ಗುಲಬ್ ಹೇಳಿದ.

ಊಟ ಮಾಡಿ ಮುಗಿಸಿದ ಮೇಲೆ ಕಪಾಹಿ ಒಂದು ಸಲಹೆ ನೀಡಿದಳು. ಔತಣದ ದಿವಸ ಗುಲಬ್ ಈ ಕಡೆ ಬರದಿರುವುದೇ ಒಳ್ಳೆಯದು. ನಾವು ಗಾಡಿಯಲ್ಲಿ ಬರ್ತೀವಿ. ನದಿಯ ದಡ ತಲುಪಿದ ಮೇಲೆ ಅವರನ್ನು ಕರೆದುಕೊಂಡು ಹೋಗಲು ಯಾರಾದರೂ ಬಂದರೆ ಮೇಲು. ಇಲ್ಲದಿದ್ದರೆ ಹೇಗೋ ಗುಟ್ಟು ರಟ್ಟಾದೀತೆಂಬ ಭಯ.

ಸಿದ್ದಿಕ್ ಮೌಲ್ವಿಗೆ ಚಂದ್ರನಿಂದ ಹೇಳಿಸಿ ಹೇಗೋ ಬಂದೋಬಸ್ತು ಮಾಡಿದ್ದಾಗಿದೆ. ವಿಷಯವನ್ನು ಗುಲಬ್ ಸಂಪೂರ್ಣವಾಗಿ ತಿಳಿಸಿದ. ಒಳಗಡೆಯಿಂದಲೇ ತರಾ ಎಲ್ಲಾ ಮಾತುಗಳನ್ನೂ ಕಿವಿಗೊಟ್ಟು ಕೇಳುತ್ತಿದ್ದಳು. ಅವಳೇನೂ ಮಾತಾಡಲಿಲ್ಲ. ಆದರೆ ಆಕೆಯ ಚಿಕ್ಕಮ್ಮ ಒಳಗಿಂದೊಳಗೇ ಈ ಎಲ್ಲಾ ಬಂದೋಬಸ್ತು ಯಾಕೆ ಮಾಡುತ್ತಿದ್ದಾಳೆಂಬುದು ಅವಳಿಗೆ ಅರ್ಥವಾಗಲಿಲ್ಲ. ತರಾ ಒಂದು ವೇಳೆ ಒಪ್ಪಿ ಹೋಗದಿದ್ದರೆ ಬಲತ್ಕಾರವಾಗಿ ಯಾರೂ ಅವಳನ್ನು ಮೂಗನಿಗೆ ಕೊಟ್ಟು ಮದುವೆ ಮಾಡೋಕೆ ಆಗೊಲ್ಲ. ಒಂದು ವೇಳೆ ಆ ರೀತಿ ಆದರೆ ಅವಳು ನೇಣು ಹಾಕಿಕೊಂಡು ಸಾಯುತ್ತಾಳೆ. ಕಪಾಹಿ ಹೀಗೆ ಹೆದರಿಕೊಂಡು ಹೋಗೋ

ಅಗತ್ಯವಿಲ್ಲ. ಆದಾಗ್ಯೂ ತರಾ ಯೋಚಿಸಿದಳು - "ನನಗೋಸ್ಕರವೇ ಚಿಕ್ಕಮ್ಮ ಈ ಯೋಜನೆ ಮಾಡಿದ್ದಾಳೆಯೇ? ಗುಲಬ್‌ನೊಡನೆ ಚಿಕ್ಕಮ್ಮನ ಸ್ನೇಹ ಏನು ಕಮ್ಮಿಯೇ!"

ಹೊರಡುವಾಗ ಗುಲಬ್ ತರಾಳಿಗೆ ಹೇಳಲಿಲ್ಲ. ಮಳೆ ಜಾಸ್ತಿ ಬೀಳುತ್ತಿದ್ದುದರಿಂದ ಕಪಾಹಿ ಒಂದು ಗೊರಸಲು ತೆಗೆದುಕೊಂಡು ಹೊಗಲು ಹೇಳಿದಳು. ಗುಲಬ್‌ನ ಕೈಯಲ್ಲಿ ನೇಪಾಲಿ ಕುಡುಗೋಲಿತ್ತು. ಆತನಿಗೆ ಏನೂ ಭಯವಿಲ್ಲ.

ಒಬ್ಬನೇ ಹೋಗುತ್ತಿದ್ದಾಗ ಆತನ ಮನಸ್ಸಿನಲ್ಲಿ ಅನೇಕ ಭಾವನೆಗಳು ಉದ್ಭವಿಸತೊಡಗಿದವು. ಒಂದು ವೇಳೆ ತರಾ ಈವೊತ್ತು ಅವಳ ತಂದೆ ಜೊತೆಯಲ್ಲಿದ್ದರೆ ಆಕೆಯನ್ನು ಮದುವೆಯಾಗೋಕೆ ಇಷ್ಟು ಪ್ರಯತ್ನ ಮಾಡಬೇಕಾಗಿರಲ್ಲ. ಹುಡುಗ ನೇರವಾಗಿ ಹೋಗಿ ಹೆಣ್ಣು ಕೇಳಿ ಶಾಸ್ತ್ರೋಕ್ತ ರೀತಿಯಲ್ಲಿ ಮದುವೆ ಮಾಡಿಕೊಳ್ಳಬಹುದಾಗಿತ್ತು. ಈತ ಸಹ ಇಂದು ಒಬ್ಬಂಟಿಗ; ಬಡವ. ಆದುದರಿಂದ ಒಂದು ಹೆಣ್ಣಿಗಾಗಿ ಕಳ್ಳನಂತೆ ಇಷ್ಟೆಲ್ಲಾ ಮಾಡಬೇಕಾಗಿದೆ. ಆತನಿಗೆ ತನ್ನ ಬಗ್ಗೆಯೇ ತಿರಸ್ಕಾರ ಮೂಡಿತು.

ಆದರೆ ಆತನಿಗೆ ಸಂತೋಷವೂ ಆಯಿತು. ಹೆಮ್ಮೆ ಸಹ. ತನ್ನವರು ಅಂತ ಯಾರೂ ಇರದಿದ್ದರೂ ಆತ ಒಬ್ಬನೇ ಒಂದು ಮನೆ ಕಟ್ಟಿದ್ದಾನೆ. ಒಬ್ಬನೇ ಹನ್ನೆರಡು ಹದಿಮೂರು ಎಕರೆ ಜಮೀನು ಆಬಾದು ಮಾಡಿದ್ದಾನೆ. ಇನ್ನೂ ಆಬಾದು ಮಾಡುತ್ತಾನೆ. ಇದು ಆತನೇ ಸಂಪಾದಿಸಿದ್ದು. ಇದರಲ್ಲಿ ಯಾರದೇನೂ ಹಿಸ್ಸೆ ಇಲ್ಲ.

# ಹದಿನೈದು

ಶುಕ್ರವಾರದಂದು ಡಾಲಿಮ್ ಹಳ್ಳಿಯ ಮಸೀದಿಯಲ್ಲಿ ಭಾರಿ ಔತಣ. ಅದು ಒಂದು ದೊಡ್ಡ ಸಂಭ್ರಮ. ಇಡೀ ವರ್ಷಕ್ಕೆ ಭಾರಿ ಔತಣ ಎರಡೇ ಎರಡು. ವೈಶಾಖದ ಮಧ್ಯಾವಧಿಯಲ್ಲಿ ಅಥವಾ ಜೇಷ್ಠದ ಆರಂಭದಲ್ಲಿ ಬೇಸಾಯದ ಆರಂಭದ ಸಮಯದಲ್ಲಿ ಒಂದು. ಮತ್ತೊಂದು ಮಾಘಮಾಸದಲ್ಲಿ. ಬೆಳಸು ಮನೆಗೆ ತಂದ ಮೇಲೆ ಎರಡೂ ಔತಣಗಳನ್ನು ಮಸೀದಿ ಸಮಾಜ ಬಹಳ ಪವಿತ್ರವೆಂದು ಪರಿಗಣಿಸಿದೆ. ಕಾಯಿಲೆ-ಕಸಾಲೆ ವಾಸಿಯಾಗಲಿ ಎಂಬ ಉದ್ದೇಶದಿಂದ ಅಥವಾ ಯಾವುದಾದರೊಂದು ಅಭಿಪ್ಸೆಯ ಪೂರೈಕೆಗಾಗಿ ಬಹಳ ಮಂದಿ ಔತಣದ ಏರ್ಪಾಟಿಗಾಗಿ ಚಂದಾ ನೀಡುತ್ತಾರೆ ಅಥವಾ ಹರಕೆ ಕಟ್ಟುತ್ತಾರೆ.

ಔತಣದ ದಿನ ಸಮಾಜದವರಿಗೆ ಬೇರೆ ಕೆಲಸವೇನೂ ಇರುವುದಿಲ್ಲ. ಮನೆಗಳನ್ನು ಚೊಕ್ಕಟ್ಟ ಮಾಡಿ, ಬಟ್ಟೆಬರೆ ಒಗೆದುಕೊಂಡು, ಸ್ನಾನಗೀನ ಮಾಡಿಕೊಂಡು ಸುತರಾಂ ಚೊಕ್ಕಟ್ಟವಾಗಿರುತ್ತಾರೆ. ಪ್ರತಿಯೊಂದು ಮನೆಯಲ್ಲೂ ಅಕ್ಕಿಯನ್ನು ಬೀಸುತ್ತಾರೆ. ಅದರಿಂದ ಕಜ್ಜಾಯ ಮಾಡುತ್ತಾರೆ. ಮಸೀದಿಯಲ್ಲಿ ಸಾಮೂಹಿಕವಾಗಿ ಕಡಾಯಿಗಟ್ಟಲೆ ಮಾಂಸ ಬೇಯಿಸುತ್ತಾರೆ. ಸಾಯಂಕಾಲದ ವೇಳೆಗೆ ಹಳ್ಳಿಯವರು ಮಕ್ಕಳುಮರಿ ಕರೆದುಕೊಂಡು ಮಸೀದಿಗೆ ಬರುತ್ತಾರೆ. ಮಸೀದಿಯ ವರಾಂಡ ಮತ್ತು ಅಂಗಳದಲ್ಲಿ ಸಾಲುಸಾಲಾಗಿ

ಕುಳಿತುಕೊಳ್ಳುತ್ತಾರೆ. ತಮ್ಮ ಜೊತೆಯಲ್ಲಿ ಬಂದಿರುವವರೆಲ್ಲರಿಗೂ ಒಬ್ಬೊಬ್ಬರಿಗೆ ಒಂದೊಂದು ಕಜ್ಜಾಯ ಇಟ್ಟುಕೊಂಡು ಉಳಿದುದನ್ನು ಸಾಮೂಹಿಕ ಭಂಡಾರಕ್ಕೆ ಒಪ್ಪಿಸುತ್ತಾರೆ. ಪ್ರತಿಯೊಬ್ಬರ ಎಲೆಯ ಮೇಲೆ ದೊಡ್ಡ ಸೌಟಿನಿಂದ ಬಡಿಸುವಾಗ ಮಾಂಸ ಸಹ ಬಡಿಸುತ್ತಾರೆ. ಜನರು ಒಂದಿಷ್ಟು ತಿಂದು, ಕಜ್ಜಾಯ ಮತ್ತು ಮಾಂಸ ಕಟ್ಟಿಕೊಂಡು ಮನೆಗೆ ಹೊರಡುತ್ತಾರೆ. ತಾವು ಕೊಟ್ಟಿರುವ ಚಂದಾ ಮೇರೆಗೆ ತಮ್ಮತಮ್ಮ ಪಾಲು ಪಡೆಯುತ್ತಾರೆ. ವಾಸ್ತವವಾಗಿ ಈ ಸಾರ್ವಜನಿಕರ ಔತಣದ ಸಾಮೂಹಿಕ ಸಾಮಗ್ರಿ ಅಂದರೆ ಕೇವಲ ಮಾಂಸ. ಮೌಲ್ವಿ, ಹಳ್ಳಿಯ ಮುಖಂಡರು ಮತ್ತು ಸರದಾರರಿಗೆ ಪಾಲು ಹೆಚ್ಚಾಗಿ ಸಲ್ಲುತ್ತದೆ. ಔತಣದ ಹಿಂದಿನ ದಿನವೇ ಸಫಿಯತ್ ಬಂದು ಅಕ್ಕಿಬೀಸಲು ತರಾಳನ್ನು ಕರೆದುಕೊಂಡು ಹೋದ. "ಸರಿ, ಬರ್ತಾಳೆ, ಅದಕ್ಕೋಸ್ಕರ ನೀವೇ ಬರೋ ಅಗತ್ಯವೇನಿತ್ತು? ಯಾರ ಕೈಯಲ್ಲಾದರೂ ಹೇಳಿ ಕಳುಹಿಸಿದರೆ ಆಗಿತ್ತು" ಎಂದು ಕಪಾಹಿ ಹೇಳಿದಳು.

ಸಫಿಯತ್ ಹೇಳಿದ - "ಹೇ, ತರಾ, ನೀನು ಸ್ವಲ್ಪ ಬೇಗ ಬರಬೇಕು. ಹತ್ತು ಸೇರು ಅಕ್ಕಿ ಬೀಸ್ಬೇಕು. ಅಷ್ಟೇ ಅಲ್ಲದೆ ಕಜ್ಜಾಯ ಸಹ ನೀನೇ ಮಾಡ್ಬೇಕು."

ಕಪಾಹಿ ಹೇಳಿದಳು - "ಮಸೀದಿಗೆ ಹೋಗಲು ನಮ್ಮಲ್ಲಿ ಯಾರೂ ಇಲ್ಲ. ಆದರೆ ಆ ಸಮಾಜಕ್ಕೆ ನಮ್ಮ ಕಡೆಯಿಂದ ಮೂರು ನಾಲ್ಕು ಕಜ್ಜಾಯ ಕಳುಹಿಸಬೇಕು. ನಾನೂ ಕಜ್ಜಾಯ ಮಾಡ್ತೀನಿ. ಒಂದು ಪಾವು ಅಕ್ಕಿ ಬೀಸಿ ಕಜ್ಜಾಯ ಮಾಡ್ತೀನಿ. ತರಾ, ಸರಿ ಬರ್ತಾಳೆ."

ತರಾಳಿಗೆ ವಿರೋಧಿಸಲು ಅವಕಾಶವೇ ಸಿಗಲಿಲ್ಲ.

ಹೊರಡೋ ವೇಳೆಯನ್ನು ಸಫಿಯತ್ ಹೇಳಿ ಹೋದ - "ತರಾ, ನಮ್ಮ ಮನೆಯಲ್ಲೇ ಊಟ ಮಾಡಿ ಬರ್ತಾಳೆ. ರಾತ್ರಿ ಸ್ವಲ್ಪ ಹೊತ್ತಾದರೂ ಯೋಚಿಸಬೇಕಾಗಿಲ್ಲ."

"ನಿಮ್ಮ ಮನೆಯಲ್ಲಿದ್ದರೆ ಏನು ಯೋಚನೆ?" - ಕಪಾಹಿ ಹೇಳಿದಳು.

ತರಾಳಿಗೆ ಗಂಟಲೇ ಒಣಗಿ ಹೋಯಿತು.

ಏನು, ಇಲ್ಲಿಂದ ನಾಳೆ ಪರಾರಿಯಾಗೋ ವಿಷಯವನ್ನು ಚಿಕ್ಕಮ್ಮ ಮರೆತುಬಿಟ್ಟಿದ್ದಾಳೆಯೇ? ಸಫಿಯತ್‌ನ ಮನೆಯಲ್ಲೇ ಒಂದು ವೇಳೆ ರಾತ್ರಿ ಬಹಳ ಹೊತ್ತಾದರೆ ಗುಲಚ್ ಗಾಡಿ ತಗೊಂಡು ಬಂದು ನಾನು ಮನೆಯಲ್ಲಿ ಇಲ್ಲದಿರುವುದನ್ನು ನೋಡಿ ಹೊರಟು ಹೋದರೆ ಅವರಿಗೆ ಸಿಟ್ಟು ಬರೋದಿಲ್ವೇ? ಏನು ಮಾಡೋದು? ಅವರೇನು ಅಂದುಕೊಂಡಾರು?"

ಚಿಕ್ಕಮ್ಮ ಬೇರೆ ಏನಾದರೂ ಯೋಚಿಸಿದ್ದಾಳೆಯೇ?

ತರಾಗೆ ಸ್ವಲ್ಪ ಚಿಂತೆ ಹತ್ತಿತ್ತು. ಗಾಬರಿಯಾಯಿತು. ಆದಾಗ್ಯೂ ಅವಳು ತೀರ್ಮಾನ ಕೈಗೊಂಡಳು. ಅಕ್ಕಿ ಬೀಸಿ ಮತ್ತು ಕಜ್ಜಾಯ ಮಾಡಿದ ಮೇಲೆ ಆಕೆ ಹೊರಟು ಬರ್ತಾಳೆ. ಅವಳನ್ನು ಯಾರೂ ತಡೆಯಲಾರರು. ಗುಲಚ್‌ನ ಗಾಡಿ ಬರಲಿ ಅಥವಾ ಬಿಡಲಿ, ಆಕೆ ಈ ಮನೆಯಲ್ಲಿ ಇನ್ನು ಇರುವುದಿಲ್ಲ. ಆಕೆಯ ಚಿಕ್ಕಮ್ಮನಿಗೆ ಏನಾಗಬೇಕೋ ಅದು ಆಗುತ್ತೆ. ಅಗತ್ಯ ಬಿದ್ದರೆ ಆಕೆ ಮನೆ ಬಿಟ್ಟು ಗುಲಚ್‌ನ ಮನೆಗೆ ಕದ್ದು ಓಡಿ ಹೋಗುತ್ತಾಳೆ. ಸಿಪರಿಯಾ ಹಳ್ಳಿಗೆ ಆಕೆ ಎರಡು ಸಲ ಹೋಗಿದ್ದಳು. ದೂರದಿಂದ ಗುಲಚ್‌ನ ಪಾಹಿ ಗದ್ದೆ ಸಹ ನೋಡಿದ್ದಾಳೆ.

ಆಕೆ ಕಪಾಹಿ ಜೊತೆಯಲ್ಲಿ ಏನೂ ಹೇಳಲಿಲ್ಲ. ಅವಳನ್ನು ಸಫಿಯತ್ ಯಾಕೆ ಮನೆಗೆ

ಕರೆದಿದ್ದಾನೆ? ಚಿಕ್ಕಮ್ಮನನ್ನು ಕರೆದುಕೊಂಡು ಹೋಗಿದ್ದರೆ ಚೆನ್ನಾಗಿರುತ್ತಿತ್ತು. ಆಕೆಯ ಚಿಕ್ಕಮ್ಮ ಒಂದು ವೇಳೆ ಸಮಯಕ್ಕೆ ಸರಿಯಾಗಿ ಬರದಿದ್ದರೂ ಆಕೆ ಒಬ್ಬಳೇ ಗುಲಬ್‌ನ ಮನೆಗೆ ಹೋಗಬಹುದಾಗಿತ್ತು.

ಬರಹೇಳಿರೋದು ನನ್ನೊಬ್ಬಳನ್ನೇ!

ಕಪಾಹಿ ಮಲಗಲು ಹೋದಳು. ಆದರೆ ತರಾ ತನ್ನ ಸಾಮಾನನ್ನು ಗಂಟು ಮೂಟೆ ಕಟ್ಟಿದಳು. ಎಲ್ಲ ಸಾಮಾನು ಸರಿಯಾಗಿ ಕಟ್ಟಿಟ್ಟು ಹೋಗ್ತೀನಿ. ಗಾಡಿ ಬರುತ್ತೆ. ಇನ್ನೇನೂ ಯೋಚನೆಯಿಲ್ಲ.

ಸಫಿಯತ್ ಮನೆಯಲ್ಲಿ ಔತಣಕ್ಕಾಗಿ ಕಜ್ಜಾಯ ಮಾಡಲು ಅವಕಾಶ ಸಿಕ್ಕಿದುದರಿಂದ ಆಕೆಗೆ ತುಸು ಸಂತೋಷವಾಯಿತು. ಸಿಕ್ಕಿದವರಿಗೆಲ್ಲಾ ಔತಣದ ಕಜ್ಜಾಯ ಮಾಡೋ ಕೆಲಸ ವಹಿಸುವುದಿಲ್ಲ. ಪುಣ್ಯ ಬರೋ ಕೆಲಸ. ಆಕೆಗೂ ಬಹುಶಃ ಸ್ವಲ್ಪ ಪುಣ್ಯ ಲಭಿಸಬಹುದು.

ತರಾಳಿಗೆ ನಮಾಜು ಮಾಡಲು ಬರೊಲ್ಲ. ಆಕೆಗೆ ಪ್ರಾರ್ಥನೆ ಸಹ ಬರೊಲ್ಲ. ಆದಾಗ್ಯೂ ಹಾಸಿಗೆಯ ಮೇಲೆ ಬಿದ್ದುಕೊಂಡೇ ಮೌನವಾಗಿ ಮನಸ್ಸಿನಲ್ಲೇ ಪ್ರಾರ್ಥನೆ ಮಾಡಿದಳು. ನಾಳೆ ದಿನ ಏನೂ ಆಗಬಾರದ್ದು ಆಗದಿರಲಿ. ನಾಳೆ ನಾನು ಇಲ್ಲಿಂದ ಗುಲಬ್ ಮನೆಗೆ ಹೋಗುತ್ತೇನೆ. ನಾಳೆ ನನ್ನ ನಿಕಾ. ನನ್ನನ್ನು ಸಫಿಯತ್ ಮನೆಯಿಂದ ಬೇಗ ಕಳುಹಿಸುವಂತಾಗಲಿ,......

ಅವಳಿಗೆ ಗುಲಬ್ ಮಾತು ನೆನಪಿಗೆ ಬಂತು. ನಾಳೆಯಿಂದ ಅವಳು ಒಂಟಿಯಾಗಿ ಇರೋದಿಲ್ಲ. ನಾನು ಅವರ ಜೊತೆಯಲ್ಲಿಯೇ ಇರ್ತೀನಿ. ಅವರ ವಕ್ಷಸ್ಥಳದಲ್ಲಿ ಆಶ್ರಯ ಪಡೆಯುತ್ತೇನೆ. ಅವರು ತನ್ನೆರಡು ಬಾಹುಗಳಿಂದ ನನ್ನನ್ನು ಅಪ್ಪಿಕೊಳ್ಳುತ್ತಾರೆ. ಅದಕ್ಕಾಗಿ ನಾನು ಔತಣಕ್ಕಾಗಿ ಮಾಡಿದ ಮೂರು ನಾಲ್ಕು ಕಜ್ಜಾಯ ಮತ್ತು ತರಕಾರಿ ತೆಗೆದುಕೊಂಡು ಹೋಗುತ್ತೇನೆ. ಸಿಪರಿಯಾ ಹಳ್ಳಿಯಲ್ಲಿ ಯಾವ ಔತಣದ ಏರ್ಪಾಡು ಇಲ್ಲ. ಪೊಟ್ಟಣ ಬಟ್ಟಿಟ್ಟುಕೊಂಡು ಹೋಗ್ಬೇಕು.

ಅನಂತರ ಚಿಕ್ಕಮ್ಮನ ಕತ್ತಿನ ಸರದ ಜ್ಞಾಪಕ ಬಂತು. ಇತ್ತೀಚೆಗೆ ಚಿಕ್ಕಮ್ಮ ಅದನ್ನು ಕತ್ತಿಗೆ ಹಾಕಿಕೊಂಡೇ ಇರ್ತಾಳೆ. ಅದನ್ನು ಅವಳು ನನಗೆ ಕೊಡೋದಿಲ್ವೇ? ಕೊಡದೆ ಇದ್ದರೆ ಇರಲಿ. ಗುಲಬ್ ಮಾಡಿಸಿಕೊಡ್ತಾರೆ. ಈಗ ಇಲ್ಲದೆ ಹೋದರೆ ಆಮೇಲೆ ಆಗುತ್ತೆ. ಜಮೀನೆಲ್ಲಾ ನಾಟಿ ಆದಮೇಲೆ ಆಲೂಗಡ್ಡೆ, ಸಾಸಿವೆ ಹೆಚ್ಚಾಗಿ ಬೆಳೆದ ಮೇಲೆ - ಅರ್ಧ ತೊಲಕ್ಕೆ ಒಂದು ಜೊತೆ ಬಳೆ ಮಾಡಿಸಿಕೊಡ್ತಾರೆ. ಆದರೆ ಇದಕ್ಕೆ ಮೊದಲೇ ಒಂದು ಜೊತೆ ಓಲೆ ಮಾಡಿಸಿಕೊಳ್ಳಬೇಕು. ಒಂದು ಉಂಗುರ ಸಹ ಮಾಡಿಸಬೇಕು. ಗುಲಬ್ ನನಗೋಸ್ಕರ ಒಂದು ಉಂಗುರ ಮಾಡಿಸಿರಬಹುದು.

ಅವಳಿಗೆ ನಿಧಾನವಾಗಿ ನಿದ್ದೆ ಹತ್ತಿತು.

## ಹದಿನಾರು

ಔತಣ ಮುಗಿದ ಮೇಲೆ ಮಸೀದಿಯಲ್ಲಿ ಸೇರಿದ್ದ ಜನ ತಮ್ಮ ತಮ್ಮ ಮನೆಗಳಿಗೆ ಹೊರಟು

ಹೋಗುತ್ತಾರೆ. ಸೂರ್ಯ ಕಾಣಿಸೊಲ್ಲ. ಸಾಯಂಕಾಲ ಆಗಿದೆ. ಮಾಘಮಾಸದಲ್ಲಿ ದಿನದ ಅವಧಿ ಕಡಿಮೆ. ನೋಡ್ತಾ ನೋಡ್ತಾನೇ ಸಂಜೆ ಆಗೋಗುತ್ತೆ. ಮಾಘ-ಬಿಹು ಆದ ಮೇಲೆ ಮಳೆ ನಿಂತಿತ್ತು. ಇಂದು ನವಮಿ ಅಥವಾ ದಶಮಿ ಇರಬಹುದು. ಮಂಜು ಬೀಳುತ್ತಿದ್ದರೂ ಬೆಳಕು ಇದೆ.

ಸಫಿಯತ್ ಮನೆಯಲ್ಲಿ ಎಲ್ಲ ಗಂಡಸರೂ ಮಸೀದಿಗೆ ಹೋದರು. ಮಸೀದಿಗೆ ಹೋಗುವಾಗ ಮುದುಕ ಮತ್ತೆ ತರಾಳಿಗೆ ಹೇಳಿದ - "ನೀನು ಈಗಲೇ ಹೋಗಬ್ಯಾಡ. ಊಟ ಮಾಡ್ಕೊಂಡು ಹೋಗು. ನಿಮ್ಮ ಅಣ್ಣ ನಿನ್ನನ್ನು ಬಿಟ್ಟು ಬರ್ರಾನೆ."

ಆಕೆ ಏನೂ ಮಾತಾಡಲಿಲ್ಲ.

ತರಾಳ ಸುತ್ತಲೂ ಮೂಗ ಎರಡು ಮೂರು ಸಾರಿ ಸುತ್ತಾಡಿದ. ಆದರೆ ಅವಳ ಸಮೀಪಕ್ಕೆ ಬರೋ ಧೈರ್ಯ ಮಾಡಲಿಲ್ಲ.

ಮಸೀದಿಯಿಂದ ಕಜ್ಜಾಯ ತೆಗೆದುಕೊಂಡು ಬಂದ ಮೇಲೆ ಸಹ ಆಕೆಯನ್ನು ಅವಳ ಮನೆಗೆ ಕರೆದುಕೊಂಡು ಹೋಗಿಬಿಡಲು ಯಾರೂ ಯೋಚಿಸಿದಂತೆ ಅವಳಿಗೆ ಕಾಣಲಿಲ್ಲ. ಅವಳಿಗೆ ತಿನ್ನಲು ಕಜ್ಜಾಯ ಕೊಟ್ಟರು. ಆದರೆ ತಿನ್ನಲು ಆಕೆಗೆ ಮನಸ್ಸು ಬರಲಿಲ್ಲ. ಆಕೆಯ ಮನಸ್ಸು ಹೊರಡಲು ಹವಣಿಸುತ್ತಿತ್ತು. ಗುಲಬ್ ಕಳುಹಿಸುವ ಗಾಡಿ ಇಷ್ಟು ಹೊತ್ತಿಗೆ ಬಂದಿರಬಹುದು. ಆತ ಅವಳ ನಿರೀಕ್ಷಣೆಯಲ್ಲಿರಬಹುದು.

ಸಫಿಯ ಸೊಸೆ ಹತ್ತಿರ ಒಮ್ಮೆ ಹೇಗೋ ಹೋಗಿ ಬಾಯಿಬಿಟ್ಟು ಕೇಳಿದಳು - "ಅತ್ತಿಗೆ. ನಾನು ಹೋಗ್ಬೇಕು. ರಾತ್ರಿ ಬಹಳ ಹೊತ್ತಾಗಿದೆ. ಮನೆಯಲ್ಲಿ ಚಿಕ್ಕಮ್ಮ ಒಬ್ಬಳೇ ಇದ್ದಾಳೆ."

ಅತ್ತಿಗೆ ದೇಶಾವರಿ ನಗೆ ಬೀರುತ್ತಾ ಹೇಳಿದಳು - "ಅದು ನಿನ್ನ ಮನೆಯೇ. ಇದೂ ನಿನ್ನ ಮನೆಯೇ. ಹೋಗಿ ಅಲ್ಲೇನು ಮಾಡ್ತೀಯೆ? ಇಲ್ಲೇ ಇರು."

ಇದನ್ನು ಕೇಳಿ ತರಾಳಿಗೆ ರೋಮಾಂಚನವಾಯಿತು. ಈ ಜನರು ಏನೋ ಒಳಸಂಚು ನಡೆಸುತ್ತಿರಬಹುದಲ್ಲವೇ ಅನ್ನಿಸಿತು. ಇದು ನನ್ನ ಮನೆ ಹೇಗಾಗುತ್ತೆ?

ಆಕೆ ಇನ್ನೂ ಸ್ವಲ್ಪ ಹೊತ್ತು ಕಾದು ನೋಡಿದಳು. ಅನಂತರ ಸಫಿಯನ್ನು ಹುಡುಕಿದಳು. ಆತ ಸಿಗಲಿಲ್ಲ. ಅವಳಿಗೆ ಸಿಟ್ಟು ಬಂತು. ಅವಳನ್ನು ಬಿಟ್ಟು ಬರೋದಕ್ಕೆ ಯಾರು ಬರ್ರಾರೆ? ಮೂಗನ ಜೊತೆಯಲ್ಲಂತೂ ಅವಳು ಎಂದಿಗೂ ಹೋಗೋದಿಲ್ಲ. ಬೇಕಾದರೆ ಅವಳೊಬ್ಬಳೇ ಹೋಗ್ತಾಳೆ. ಆಕೆ ಡಾಲಿಮ್ ಹಳ್ಳಿಯ ಹುಡುಗಿ. ಅಲ್ಲೇ ಹುಟ್ಟಿ ಬೆಳೆದವಳು. ಇಲ್ಲಿಯ ರಸ್ತೆಗಳು ಆಕೆಗೆ ಚೆನ್ನಾಗಿ ಗೊತ್ತು. ಇಲ್ಲಿಯವರೆಗೂ ಆಕೆ ಹುಲಿ ಬಾಯಿಗೆ ಸಿಕ್ಕಿಲ್ಲ. ಈವೊತ್ತು ಸಿಗೋದಿಲ್ಲ.

ಬಹಳ ಕಳವಳದಿಂದ ಅವಳು ಅತ್ತ ಇತ್ತ ಅಡ್ಡಾಡತೊಡಗಿದಳು. ಆ ಮನೆಯ ಜನರಿಗೆ ಆಕೆಯ ಕಡೆ ನೋಡಲು ಸಹ ಪುರುಸೊತ್ತಿಲ್ಲ.

ಮಸೀದಿಯ ಔತಣ ಮುಗಿಯಿತು. ಮತ್ತೆ ಇಲ್ಲಿ ಯಾಕೆ ಸಡಗರ. ಆಕೆಯ ಮನಸ್ಸು ಯಾವುದೋ ಅನಿಶ್ಚಿತ ಸಂಶಯದಿಂದ ಗಾಬರಿಗೊಂಡಿತು. ಆಕೆಗೆ ಹೆದರಿಕೆಯಾಯಿತು.

ಒಮ್ಮೆ ಆಕೆ ಬೀದಿ ಕಡೆಯ ರೂಮಿಗೆ ಬಂದಳು. ಬಾಗಿಲ ಬಳಿ ಬಂದು ಬೆಚ್ಚಿ ನಿಂತಳು. ಸಫಿಯತ್ ಅಲ್ಲೇ ಕುಳಿತಿದ್ದ. ಅವನ ಜೊತೆಯಲ್ಲೇ ಆ ಹಳ್ಳಿಯ ಮೂರು ನಾಲ್ಕು ಮಂದಿ ಕುಳಿತಿದ್ದರು. ಅವಳು ಹಿಂದಕ್ಕೆ ಸರಿದು ಗೋಡೆಯ ಈ ಕಡೆ ಪಕ್ಕದಲ್ಲೇ ನಿಂತಳು.

"ಬೇಗ ಶುರುಮಾಡಿ. ಬೇರೆ ಯಾರಾದರೂ ಬರೋರು ಇದ್ದಾರೆಯೇ?"

"ಮೂಲ ಪುರುಷನೇ ಬರಲಿಲ್ಲ. ಅಹಮದ್ ಮುನ್ನಿ ಇಷ್ಟು ಹೊತ್ತಾದರೂ ಬರಲಿಲ್ಲ. ನಿಕಾ ಮಾಡೋರು ಯಾರು?"

ತರಾಳ ಎರಡು ಕಾಲುಗಳೂ ಜೋರಾಗಿ ನಡುಗತೊಡಗಿದವು. ಆಕೆ ಗೋಡೆಯನ್ನು ಒರಗಿಕೊಂಡೇ ಹೇಗೋ ನಿಂತುಕೊಂಡಳು.

"ಹುಡುಗಿ ಚಿಕ್ಕಮ್ಮನಿಗೆ ತಿಳಿಸಿದ್ದೀರಿ ತಾನೇ?"

"ಅಲ್ಪಸ್ವಲ್ಪ ಸೂಚನೆ ಕೊಟ್ಟಿದಾಗಿದೆ. ಅಡ್ಡಿ ಮಾಡೋಕೆ ಅವಳಿಂದ ಸಾಧ್ಯವಿಲ್ಲ. ಅವಳಿಗಾಗಬೇಕಾಗಿರೋದು ತಾನೇ ಏನು ?"

ಇನ್ನು ಕೇಳಿಸಿಕೊಳ್ಳಲು ತರಾಳಲ್ಲಿ ಶಕ್ತಿಯೂ ಇರಲಿಲ್ಲ, ಧೈರ್ಯವೂ ಇರಲಿಲ್ಲ. ತಲೆ ಸುತ್ತು ಶುರು ಆಯಿತು. ಹೇಗೋ ಆ ಜಾಗ ಬಿಟ್ಟು ಬಂದಳು.

ಆಕೆ ನಿಸ್ಸಹಾಯಕಳಂತೆ ಸುತ್ತಲೂ ನೋಡತೊಡಗಿದಳು. ಅವಳ ಕಣ್ಣೆದುರಿನಲ್ಲಿದ್ದ ಲಾಟೀನು ನರ್ತಿಸುವಂತೆ ಕಂಡಿತು. ಕಾಲಿನ ತಳಭಾಗದ ನೆಲ ನಡುಗುತ್ತಿರುವಂತೆ ಭಾಸವಾಯಿತು.

ಆಕೆ ಸ್ವಲ್ಪ ಹೊತ್ತಿನವರೆಗೆ ಅನಿಶ್ಚಿತ ಭಾವದಿಂದ ಡೋಲಾಯಮಾನ ಸ್ಥಿತಿಯಲ್ಲಿದ್ದಳು. ಇದ್ದಕ್ಕಿದಂತೆ ಒಂದು ವಿಷಯ ಹೊಳೆಯಿತು. ಆಕೆಯ ಮನಸ್ಸಿನಲ್ಲಿ ಉಪಾಯವೊಂದು ಮಿಂಚಿತು. ಆಕೆ ಒಂದೇ ಕ್ಷಣದಲ್ಲಿ ನಿರ್ಣಯ ಕೈಗೊಂಡಳು.

ಆಕೆ ಸುತ್ತಲೂ ಗಮನ ಹರಿಸಿದಳು. ಗಂಡಸರೆಲ್ಲಾ ಮನೆಯ ಮುಂಭಾಗದಲ್ಲಿ ಬೀದಿ ಕಡೆಯ ರೂಮಿನಲ್ಲಿದ್ದರು. ಹೆಂಗಸರು ಅಡಿಗೆ ಮನೆಯಲ್ಲಿದ್ದರು. ಇನ್ನೊಂದು ಕ್ಷಣ ಸಹ ತಡಮಾಡೋಕೆ ಆಗೋದಿಲ್ಲ.

ಮರುಕ್ಷಣವೇ ಆಕೆ ಸದ್ದಿಲ್ಲದಂತೆ ಸಫಿಯತ್ ಮನೆಯ ಹಿಂದುಗಡೆಯ ಬಾಗಿಲಿನಿಂದ ಪರಾರಿಯಾದಳು.

ಸಫಿಯತ್ ಮನೆಯ ಹಿಂಭಾಗದಲ್ಲಿ ಒಂದು ವಿಶಾಲವಾದ ಮೈದಾನವಿದೆ. ಅದರಿಂದ ಆಚೆಗೆ ಒಂದು ಸಾಧಾರಣವಾದ ಕಾಡಿದೆ. ಯಾವುದೇ ರೀತಿಯ ವಿಶೇಷವಾದ ವಿಷಯವನ್ನು ಕುರಿತು ಯೋಚಿಸದೆ ತರಾ ಓಡುತ್ತಾ ಮೈದಾನವನ್ನು ದಾಟಿದಳು. ಕಾಡಿನ ಇಕ್ಕಟ್ಟಾದ ದಾರಿಯಲ್ಲಿ ಬೇಗಬೇಗ ನಡೆಯತೊಡಗಿದಳು.

ಇಂದು - ಈ ಸಮಯದಲ್ಲಿ ಅವಳಿಗೆ ಯಾವುದೇ ಕ್ರೂರ ಹುಲಿ ಅಥವಾ ಹಾವಿನ ಭಯವಿಲ್ಲ. ಅವಳಿಗೆ ಮನುಷ್ಯರ ಭಯ: ಸಫಿ ಭಯ: ಮೂಗನ ಭಯ. ಆಕೆ ಹೇಗೋ ಓಡಲು ಪ್ರಯತ್ನಿಸಿದಳು. ಎಲ್ಲಿಗೆ ಹೋಗುತ್ತಿದ್ದೇನೆಂಬುದನ್ನು ಯೋಚಿಸದೆಯೇ ಕಾಡಿನ ಮಧ್ಯದಲ್ಲಿ ಮುಗ್ಗರಿಸುತ್ತಾ ಓಡತೊಡಗಿದಳು. ತನ್ನ ಮನೆಗೆ ತಲುಪೋದು ಅಥವಾ ಧನಶಿರಿಯ ದಡಕ್ಕೆ ತಲುಪೋದು. ಯಾರಾದರೂ ಬಲತ್ಕಾರ ಮಾಡಿದರೆ ಧನಶಿರಿಯಲ್ಲಿ ಬೀಳೋದು ಅಥವಾ ಚೂರಿಯಿಂದ ತಿವಿದುಕೊಂಡು ಸಾಯೋದು ಎಂದು ಆಕೆ ಯೋಚಿಸಿದಳು.

ಒಂದುವೇಳೆ ಗುಲಚ್‌ನ ಗಾಡಿ ರಸ್ತೆಯಲ್ಲೇ ಸಿಕ್ಕಿದರೆ! ಭಯ ಮತ್ತು ಸಂಶಯದ ಮಧ್ಯದಲ್ಲೂ ಆಕೆಯ ಮನಸ್ಸಿನಲ್ಲಿ ಆನಂದದ ಹೊನಲು ಹರಿಯಿತು. ಆಗ ಈ ಜಗತ್ತಿನಲ್ಲಿ

ಯಾರೂ ನನ್ನ ಕೂದಲು ಕೊಂಕಿಸಲಾರರು. ನಾನು ಗುಲಬ್ ಜೊತೆಯಲ್ಲಿ ಹೊರಟು ಹೋಗ್ತೀನಿ.

ಸುಮಾರು ಅರ್ಧ ಗಂಟೆ ಓಡಿದ ಮೇಲೆ ಆಕೆ ಏದುಸಿರು ಬಿಡತೊಡಗಿದಳು. ಸ್ವಲ್ಪ ನಿಂತು ಕೊಂಡಳು. ಮಾಘ ಮಾಸದ ರಾತ್ರಿಯ ಚಳಿಯಲ್ಲೂ ಬೆವರು ಬರುತ್ತಿತ್ತು. ಆಕೆಯ ಕೆನ್ನೆಯ ಮೇಲೆ ಬೆವರು ಹರಿಯುತ್ತಿತ್ತು.

ಅವಳಿಗೆ ಸ್ವಲ್ಪ ದಿಗಿಲಾಯಿತು. ರಾತ್ರಿ ಇಷ್ಟು ಹೊತ್ತಿನಲ್ಲಿ ಈ ಕಡೆ ಯಾಕೆ ಬಂದೆ? ಇದು ರಸ್ತೆಯಲ್ಲ . ಕಾಡು. ರಸ್ತೆ ತಪ್ಪಿಹೋಯಿತೇ? ಈ ಕಡೆ ಹೋದರೆ ಎಲ್ಲಿಗೆ ತಲುಪುತ್ತೇನೆ? ಮತ್ತೆ ಎಲ್ಲಿಯಾದರೂ ಸಖಿಯ ಮನೆಗೆ ತಲುಪಿಬಿಟ್ಟರೆ?

ತರಾ ಒಮ್ಮೆ ಬಾನಿನ ಚಂದ್ರನ ಕಡೆ ನೋಡಿದಳು. ಆದರೆ ಚಂದ್ರನನ್ನು ನೋಡಿದರೂ ಆಕೆ ಯಾವ ಕಡೆ ಬಂದಿದ್ದೇನೆಂಬುದನ್ನು ಗಮನಿಸಿದಳು. ದೂರದಲ್ಲಿ, ಬಹಳ ದೂರದಲ್ಲಿ ಮನುಷ್ಯರ ಕ್ಷೀಣ ಸ್ವರ ಕೇಳಿಸಿತು. ಆದರೆ ಎಷ್ಟು ದೂರವಿರಬಹುದೆಂಬುದನ್ನು ಆಕೆಗೆ ಊಹಿಸಲಾಗಲಿಲ್ಲ. ಒಮ್ಮೆ ಬಹಳ ಹತ್ತಿರದಲ್ಲೇ ಅನ್ನಿಸುತ್ತೆ; ಒಮ್ಮೆ ಬಹಳ ದೂರದಲ್ಲಿ ಅನ್ನಿಸುತ್ತೆ ಆದರೆ ಅವಳು ತನ್ನ ಹೃದಯದ ಬಡಿತವನ್ನು ಕೇಳಿಸಿಕೊಂಡಳು. ಆಕೆಯ ಕೈಕಾಲುಗಳಲ್ಲಿ ನಿಶ್ಶಕ್ತಿ ಕಂಡುಬಂತು.

ಒಂದು ಮರ ಹಿಡಿದುಕೊಂಡು ಸ್ವಲ್ಪ ಹೊತ್ತು ನಿಂತಳು. ಅನಂತರ ಏನೂ ಯೋಚಿಸದೆಯೇ ಮುಂದೆ ಹೊರಟಳು. ನಿಲ್ಲಲು ಸಮಯವೇ ಇಲ್ಲ.

ರಾತ್ರಿಯ ಭಯ ಅವಳಿಗಿಲ್ಲ. ಮನುಷ್ಯರ ಭಯ ಇದೆ. ಆಕೆಯ ಕಣ್ಣಿಗೆ ಎಲ್ಲವೂ ಅಸ್ಪಷ್ಟ. ಕಾಡಿನ ಕೊನೆಗೆ ಬಂದಿದ್ದಾಳೆ. ಇದು ಒಣ ಹುಲ್ಲು. ಬೆಳದಿಂಗಳಿದೆ. ಆದರೆ ಮಂಜು ಬೀಳುತ್ತಿದೆ. ಆದುದರಿಂದ ಯಾವುದೂ ಸ್ಪಷ್ಟವಾಗಿ ಕಾಣುತ್ತಿಲ್ಲ. ಆಕೆ ಅಪರಿಚಿತಳಂತೆ ಮಸುಕಾದ ಆ ಮಂಜಿನಲ್ಲೇ ಹೊರಟಳು.

ಪಾದಗಳ ತಳಭಾಗದಲ್ಲಿರೋದು ಕೋಮಲವಾದ ವಸ್ತು ನೆಲವೆಂಬುದು ಆಕೆಗೆ ಅಕಸ್ಮಾತ್ತಾಗಿ ಅರಿವಾಯಿತು. ಮಣ್ಣೋ ಅಥವಾ ಮರಳೋ? ಅವಳು ನಿಂತಳು. ಎದುರುಗಡೆ ನೋಡಿದಳು - ಇದು ಧನಶಿರಿ! ಹಾಗೆಯೇ ಅಲೆದಾಡಿಕೊಂಡು ಆಕೆ ಧನಶಿರಿಯ ದಡ ತಲುಪಿದಳು.

ತರಾ ಇದ್ದಕ್ಕಿಂದ್ದಂತೆ ಈಗ ನಿರ್ಭಯಳಾದಳು. ಇದು ಪರಿಚಿತ ಧನಶಿರಿ. ಜಗತ್ತಿನಲ್ಲಿ ಎಲ್ಲರೂ ಆಕೆಗೆ ಮೋಸಮಾಡಿದರೂ ಧನಶಿರಿ ಮಾತ್ರ ಆಕೆಗೆ ಎಂದೂ ಮೋಸ ಮಾಡುವುದಿಲ್ಲ. ಧನಶಿರಿ ನಿರಾಶ್ರಿತರಿಗೆ ಆಶ್ರಯ ನೀಡುತ್ತದೆ. ಅಸಹಾಯಕರಿಗೆ ಸಹಾಯ ನೀಡುತ್ತದೆ.

ಶಾಂತವಾಗಿ ಹರಿಯುವ ನದಿಯ ಕಡೆ ಒಮ್ಮೆ ನೋಡಿದಳು. ನೀರಿನ ಮೇಲೆ ಮಂಜು ಬೀಳುತ್ತಿದೆ. ಅದರ ಮೇಲೆ ಮಸುಕಾಗಿ ಬೆಳದಿಂಗಳು ಚೆಲ್ಲಿದೆ. ಆಕೆಗೆ ನಡೆಯಲು ಶಕ್ತಿಯೇ ಇಲ್ಲದಂತೆ ಭಾಸವಾಯಿತು. ನದಿಯ ದಡದ ಮರಳಿನ ಮೇಲೆಯೇ ಕುಳಿತಳು. ನದಿಯ ದಡದಲ್ಲಿ ಚಳಿ ಜಾಸ್ತಿ. ಮಂಜಿನ ಎದೆಯನ್ನು ಸೀಳಿಕೊಂಡು ಗಾಳಿ ಮೆಲ್ಲಮೆಲ್ಲನೆ ಬೀಸುತ್ತಿದೆ.

ತರಾ ಸುತ್ತಲೂ ನೋಡಿದಳು. ಯಾರೂ ಇಲ್ಲ; ಏನೂ ಕಣ್ಣಿಗೆ ಬೀಳಲಿಲ್ಲ. ಆಕೆಯ ಸುತ್ತಲೂ ಮಂಜಿನಿಂದ ಆವೃತವಾದ ಮಸುಕು ಬಣ್ಣದ ಜಗತ್ತಿದೆ. ಪರಿಚಿತ ನದಿಯ

ಅಪರಿಚಿತ ದಡ. ಒಂದು ಪರಿಚಿತ ಹಳ್ಳಿಯ ಅಪರಿಚಿತ ದಿಕ್ಕು. ಅರ್ಥವಾಗದ ಬೆಳದಿಂಗಳು. ಅರ್ಥಕ್ಕೆ ನಿಲುಕದ ಮಂಜು, ಬೆಳದಿಂಗಳು - ಮಾಸಲು ಹಾಗೂ ರಹಸ್ಯದಿಂದ ಕೂಡಿದ ರಾತ್ರಿ.

ಭಯಭೀತೆಯಾದ ಹುಡುಗಿ ಒಬ್ಬಳೇ ಇದ್ದಾಳೆ.

ಸುತ್ತಲೂ ಅಪರಿಚಿತ ರಾತ್ರಿಯ ಸಾಮ್ರಾಜ್ಯ.

ತರಾಳಿಗೆ ಏನೂ ಯೋಚನೆ ಹೊಳೆಯಲಿಲ್ಲ. ಆಕೆ ಇದ್ದಕ್ಕಿದ್ದಂತೆ ಮೈಮರೆತಿದ್ದಾಳೆ. ಆಕೆಯ ಚೈತನ್ಯ ಶಕ್ತಿ ಲುಪ್ತವಾಗಿದೆಯೋ ಎಂಬಂತೆ ಭಾಸವಾಗುತ್ತಿದೆ.

ಸ್ವಲ್ಪ ಹೊತ್ತು ಆಕೆ ಹಾಗೆಯೆ ಕುಳಿತಿದ್ದಳು. ಇಲ್ಲಿಗೆ ಬಂದು ಎಷ್ಟು ಹೊತ್ತಾಯಿತು ಎಂದು ಆಕೆ ಯೋಚಿಸತೊಡಗಿದಳು. ಒಂದು ಗಂಟೆಯಾಯಿತೇ? ಅಥವಾ ಎರಡು ಗಂಟೆಯಾಯಿತೇ? ಅಥವಾ ಅದಕ್ಕಿಂತಲೂ ಜಾಸ್ತಿಯಾಯಿತೇ?

ನನ್ನನ್ನು ಹುಡುಕಲು ನಮ್ಮ ಮನೆಗೆ ಸಖಿ ಯಾರನ್ನಾದರೂ ಕಳುಹಿಸಿರಬಹುದು. ಬಹುಶಃ ನನ್ನನ್ನು ಅವರು ಸುತ್ತಲೂ ಹುಡುಕಾಡುತ್ತಿರಬಹುದು; ನೇರವಾಗಿ ಮನೆಗೆ ಹೋಗದೆ ಈ ಕಡೆ ಬಂದದ್ದು ಆಕೆಗೆ ಒಳ್ಳೆಯದೆ ಆಯಿತು ಎಂಬ ವಿಶ್ವಾಸ ಮೂಡಿತು! ಇಲ್ಲದಿದ್ದರೆ ನನ್ನನ್ನು ಎಳೆದುಕೊಂಡು ಹೋಗುತ್ತಿದ್ದರು.

ಆದರೆ ಗುಲಬ್‌ನ ಗಾಡಿ ಬಂದು ನಾನಿಲ್ಲದಿರುವುದನ್ನು ಕಂಡು ಒಂದುವೇಳೆ ವಾಪಸು ಹೋಗಿದ್ದರೆ! ಗುಲಬ್ ಏನು ಯೋಚಿಸಬಹುದು? ನನ್ನ ಮೇಲೆ ಅವರಿಗೆ ತುಂಬಾ ಸಿಟ್ಟು ಬಂದಿರಬಹುದು. ಅವರು ನನ್ನನ್ನು ನಿಕೃಷ್ಟವಾಗಿ ಕಾಣಬಹುದು. ಎಲ್ಲ ವಿಷಯವನ್ನೂ ಸ್ಪಷ್ಟವಾಗಿ ತಿಳಿಸುವತನಕ ಬಹುಶಃ ನನ್ನ ಜೊತೆಯಲ್ಲಿ ಅವರು ಮಾತಾಡೋದಿಲ್ಲ ಅಂತ ಕಾಣುತ್ತೆ!

ಆದರೆ ಈ ವಿಷಯವೆಲ್ಲ ಗುಲಬ್‌ಗೆ ತಿಳಿದ ಮೇಲೆ ಅವರು ನನ್ನನ್ನು ಬಹಳವಾಗಿ ಪ್ರೀತಿಸುತ್ತಾರೆ. ಅವರಿಗೋಸ್ಕರವೇ ನಾನು ಇಷ್ಟು ಕಷ್ಟ ಅನುಭವಿಸಬೇಕಾಗಿದೆ. ಮತ್ತಾರಿಗಾಗಿ?

ತರಾಳಿಗೆ ಈಗ ರಾತ್ರಿ ಬಹಳ ಹೊತ್ತಾಗಿದೆ ಅನ್ನಿಸಿತು. ಈ ಮಾಘ ಮಾಸದಲ್ಲಿ ಒಬ್ಬಂಟಿಗಳಾಗಿ ನದಿಯ ದಡದಲ್ಲಿ ಈ ರೀತಿ ಕುಳಿತಿರೋದು ಸರಿಯಲ್ಲವೆನಿಸಿತು. ಬಾನಿನಲ್ಲಿ ಬೆಳದಿಂಗಳಿವೆ. ಇದೂ ಅದೃಷ್ಟ. ಈಗ ರಾತ್ರಿಯ ಎರಡನೇ ಜಾವ. ಇನ್ನು ಇಲ್ಲೇ ಕುಳಿತಿರುವುದು ಸರಿಯಲ್ಲ.

ತರಾ ಎದ್ದಳು. ಒಮ್ಮೆ ಸುತ್ತಲೂ ನೋಡಿದಳು. ಮನೆಗೆ ಹೋಗಲು ಯಾವ ಕಡೆ ಹೋಗ್ಬೇಕು? ನದಿಯ ದಡದಲ್ಲೇ ಮೇಲುದಂಡೆಯ ಕಡೆ ಹೋಗ್ಬೇಕೋ ಅಥವಾ ಕೆಳದಂಡೆಯ ಕಡೆ? ಎಲ್ಲಿಗೆ ತಲುಪುತ್ತೀನೋ ಗೊತ್ತಾಗುವುದು ಹೇಗೆ? ಎಲ್ಲಿಗೆ ತಲುಪುದರೂ ಸರಿಯೇ. ಆದರೆ ಹೀಗೆ ರಾತ್ರಿ ಇಷ್ಟು ಹೊತ್ತಿನಲ್ಲಿ ನದಿಯ ದಡದಲ್ಲಿ ಕುಳಿತಿರೋದು ಸರಿಯಲ್ಲ. ಇಷ್ಟು ಹೊತ್ತು ಸೆಕೆಯಾಗುತ್ತಿತ್ತು. ಈಗ ಚಳಿ ಆಗುತ್ತಿದೆ. ಚಳಿ ಜಾಸ್ತಿಯಾಗುತ್ತಿದೆ. ಇಂಥ ಚಳಿಯಲ್ಲಿ ಕುಳಿತಿದ್ದರೆ ಕಾಯಿಲೆ ಬರೋದು ಖಂಡಿತ. ತುಟಿ ಒಣಗಿ ಹೋಗಿವೆ. ಕೈಕಾಲು ಚಳಿಯಿಂದಾಗಿ ಶಕ್ತಿಗುಂದಿವೆ. ಕಾಲಿನ ಬೆರಳುಗಳು ಮರಗಟ್ಟಿವೆ.

ಆಕೆ ನದಿಯ ಕಡೆ ಒಮ್ಮೆ ನೋಡಿದಳು. ಅನಂತರ ಏನೂ ಯೋಚಿಸದೆಯೇ ನದಿಯ ದಡದಲ್ಲೇ ದಕ್ಷಿಣದ ಕಡೆಗೆ ಹೊರಟಳು.

ಸುತ್ತಲೂ ನಿಶ್ಶಬ್ದತೆ. ಹಕ್ಕಿಗಳು ಚಿಲಿಪಿಲಿಗುಟ್ಟುವ ಧ್ವನಿ ಸಹ ಯಾವ ಕಡೆಯಿಂದಲೂ ಕೇಳಿ ಬರುತ್ತಿಲ್ಲ. ನರಿ ಸಹಾ ಹುವಾಂ, ಹೂವಾಂ ಎಂದು ಕೂಗುತ್ತಿಲ್ಲ. ಹುಲಿ ಸಹ ಗರ್ಜಿಸುತ್ತಿಲ್ಲ. ಎಮ್ಮೆಗಳನ್ನು ಕಾಯುವವರ ಗಟ್ಟಿಯಾದ ಸ್ವರ ಸಹ ಕೇಳಿಸುತ್ತಿಲ್ಲ. ಮಂಜಿನ ನೀರವತೆಯಿಂದ ಕೂಡಿರುವ ಪೃಥ್ವಿಯಿದೆ. ಮರಳಿನ ಮೇಲೆ ಎಲೆಗಳು ಆಕೆಯ ಕಾಲಿಗೆ ಮತ್ತು ಶರೀರಕ್ಕೆ ತಗುಲಿದಾಗ ಸರಸರ ಎಂದು ಶಬ್ದವಾಗುತ್ತದೆ. ಎಲೆಗಳ ಮೇಲಿನ ಇಬ್ಬನಿ ಆಕೆಯ ಶರೀರಕ್ಕೆ ತಗಲುತ್ತದೆ.

ರಾತ್ರಿ ಹೆಚ್ಚು ಹೊತ್ತಾಗದಿದ್ದರೂ ಬಹಳ ಹೊತ್ತಾಗಿರುವಂತೆ ಆಕೆಗೆ ಅನ್ನಿಸಿತು. ಆಕೆ ಹೆಜ್ಜೆ ಹಾಕೋದು ನಿಧಾನವಾಗಿದೆ. ಧನಶಿರಿಯ ಸ್ಥಿರ ಆಶ್ರಯವನ್ನು ತೊರೆದು ಆಕೆಗೆ ಎಲ್ಲೋ ದೂರ ಹೋಗಲು ಮನಸ್ಸಿಲ್ಲ. ಇಂದಿನ ಮುಂಜಾನೆಯಿಂದ ಇಲ್ಲಿಯ ತನಕ ಕಳೆದ ಸಮಯ ಆಕೆಗೆ ಒಂದು ಯುಗದಂತೆ ಕಂಡಿತು. ಮುಂಜಾನೆಯೇ ಆಕೆ ಸಖಿಯತ್ ಮನೆಗೆ ಅಕ್ಕಿ ಬೀಸಲು ಹೋದದ್ದು. ಔತಣಕ್ಕಾಗಿ ಕಜ್ಜಾಯ ಮಾಡಿದ್ದು; ಔತಣದ ವೇಳೆಯಲ್ಲಿಮಸೀದಿಯಲ್ಲಿನ ಕೋಲಾಹಲ. ಅನಂತರ ಆ ಭಯಂಕರದ ಪರಿಸ್ಥಿತಿ - ಈ ಎಲ್ಲ ಘಟನೆಗಳೂ ಅವಳ ಜ್ಞಾಪಕಕ್ಕೆ ಬಹುಶಃ ಬರುತ್ತಲೇ ಇಲ್ಲ.. ಒಂದೇ ದಿನದಲ್ಲಿ ಈ ಎಲ್ಲ ಘಟನೆಗಳೂ ಜರುಗಿದವು. ಅರ್ಥವೇ ಆಗದ ಘಟನೆಗಳೇ ಅಧಿಕ. ಅವುಗಳ ಹಿನ್ನೆಲೆ ಮತ್ತು ಅರ್ಥ ತಿಳಿಯಲು ಪ್ರಯತ್ನ ಪಡೋಕೆ ಆಕೆಗೆ ಭಯವಾಗುತ್ತೆ.

ಇದ್ದಕ್ಕಿದ್ದಂತೆ ಆಕೆಗೆ ನದಿಯ ದಡದ ಯಾವುದೋ ಗುರುತು ಸಿಕ್ಕಿತು. ದಾರಿ ತಪ್ಪಿಲ್ಲ ಅನ್ನಿಸಿತು. ಇದು ಆಲದ ಮರ, ಇದು ಘಟ್ಟ ಮತ್ತು ಇದು ಆಕೆಯ ಮನೆಗೆ ಹೋಗುವ ದಾರಿ. ಧನಶಿರಿ ಕಡೆ ಒಮ್ಮೆ ನೋಡಿ ಅನಂತರ ಮನೆ ದಾರಿ ಹಿಡಿದಳು.

## ಹದಿನೇಳು

ಗುಲಬ್ ಮತ್ತು ಚಂದ್ರ ಸೇರಿ ಎಲ್ಲಾ ಬಂದೋಬಸ್ತು ಮಾಡಿದರು. ಭೀಮ ಮತ್ತು ತಿಖರ್ ಸಹ ಸ್ವಲ್ಪ ಸಹಾಯ ಮಾಡಿದರು. ಗಾಡಿಯನ್ನು ಚಂದ್ರ ಗೊತ್ತು ಮಾಡಿದ. ಘಟ್ಟದಲ್ಲಿ ದೋಣಿ ಇದ್ದೇ ಇತ್ತು. ದೋಣಿಯಲ್ಲಿ ನದಿ ದಾಟುವ ಸಂಗತಿಯನ್ನು ಯಾರಿಗೂ ತಿಳಿಸಕೂಡದೆಂದು ಅಂಬಿಗನಿಗೆ ಚಂದ್ರ ತಿಳಿಸಿದ್ದ. ಅಂಬಿಗ ಇದಕ್ಕಿಂತ ಮುನ್ನ ಇಂಥ ಎಷ್ಟೋ ಹುಡುಗಿಯರನ್ನುನದಿ ದಾಟಿಸಿದ್ದ. ಅವನು ಭರವಸೆ ನೀಡಿದ.

ಒಂದು ಸಮಸ್ಯೆ ಹುಟ್ಟಿತು. ಹುಡುಗಿ ಕರೆದುಕೊಂಡು ಬಂದು ಮನೆಗೆ ಪ್ರವೇಶ ಮಾಡಿಸಬೇಕಾದರೆ ಒಬ್ಬ ಸ್ತ್ರೀ ಇದ್ದೇ ಇರಬೇಕು. ಗುಲಬ್‌ನ ತಾಯಿಗೆ ಇರೋ ವಿಚಾರ ತಿಳಿಸಿ ಬುದ್ಧಿವಾದ ಹೇಳಿ ಕರೆದುಕೊಂಡು ಬಂದರೆ ಮೇಲಲ್ಲವೇ? - ಎಂದು ಚಂದ್ರ ಸಲಹೆ ನೀಡಿದ. ಅದಕ್ಕೆ ಗುಲಬ್ ಒಪ್ಪಲಿಲ್ಲ. ತಿಖರ್ ಒಂದು ಉಪಾಯ ಸೂಚಿಸಿದ : ಗುಲಬ್ ಒಂದು ವೇಳೆ ಕೇಳಿಕೊಂಡರೆ ಮೋಲೋಕಾ ತನ್ನ ಸೊಸೆ ಚೇನಿಮಾಇಯನ್ನು ಕಳುಹಿಸಿಕೊಡುತ್ತಾನೆ. ಗುಲಬ್ ಮೊದಲಿಗೆ ವಿರೋಧಿಸಿದ. ಅನಂತರ ಆ ವಿಷಯದ ಬಗ್ಗೆ ಯೋಚಿಸಿದ.

ತೊಂದರೆಯೇನೂ ಆಗೋದಿಲ್ಲ. ಸರಿ, ಚೇನಿಮಾಇಗಿಂತ ಆತನಿಗೆ ಹೆಚ್ಚು ಪರಿಚಿತಳಾದವಳು ಮತ್ತೆ ಯಾರಿದ್ದಾರೆ?

ರದ್ದು ಕರೆದುಕೊಂಡು ಬರೋ ಹುಡುಗಿಯಾದರೂ ಹೆಚ್ಚುಕಡಿಮೆ ಒಂದು ಮದುವೆ ರೀತಿಯೇ ಮಾಡೋಣವೆಂದು ಚಂದ್ರ ಹೇಳಿದ. ಸಮಾಜದ ಸಮರ್ಥನೆ ಸಿಗೋದೆ ಆದರೆ ಗುಲಬ್ - ತರಾ ಅವರ ಜೋಡಿ ಬಗ್ಗೆ ಯಾರೂ ಆಕ್ಷೇಪಿಸುವುದಿಲ್ಲ.

ಮೌಲ್ವಿ ಸಕಾಲಕ್ಕೆ ಬಂದ.

ಗುಲಬ್ ಘಟ್ಟದ ಬಳಿ ಹೋಗಲಿಲ್ಲ. ತಿಖರ್ ಹೋದ. ಚಂದ್ರ ಬೇರೆಕಡೆ ಅಗತ್ಯವಾಗಿ ಗಮನ ಹರಿಸಬೇಕಾಗಿದೆ. ಚಂದ್ರನ ಅಭಿಪ್ರಾಯದ ಪ್ರಕಾರ ಈ ಕಡೆ ಘಟ್ಟದಲ್ಲಿಯೂ ಒಂದು ಎತ್ತಿನ ಗಾಡಿ ಕಾದಿದೆ. ಆ ಕಡೆ ಘಟ್ಟದಿಂದ ಗಾಡಿಯಲ್ಲಿ ಹೆಣ್ಣು ಬರುತ್ತಾಳೆ. ಅವಳ ಜೊತೆಯಲ್ಲಿ ಭೀಮ ಬರ್‍ತಾನೆ. ಗಾಡಿ ನೇಪಾಲಿಯವನದು. ಅಂಬಿಗ ನದಿಯನ್ನು ದಾಟಿಸುತ್ತಾನೆ. ಈ ಕಡೆ ಘಟ್ಟದಲ್ಲಿ ಇಳಿಸುತ್ತಲೇ ಅಲ್ಲಿರೋ ಗಾಡಿಗೆ ಹೆಣ್ಣನ್ನು ಹತ್ತಿಸಿಕೊಂಡು ತಿಖರ್ ಕರೆತರುತ್ತಾನೆ. ತಲುಪಿದ ಕೂಡಲೇ ಕೊಂಚವೂ ತಡಮಾಡದೆ ಮೌಲ್ವಿ ಮದುವೆ ಮಾಡಿಸುತ್ತಾನೆ. ಹೆಣ್ಣಿನ ಜೊತೆಯಲ್ಲಿ ಚೇನಿಮಾಇ ಇರುತ್ತಾಳೆ.

ಚಂದ್ರ ಧೈರ್ಯ ಹೇಳಿದ. ಎವೆರಿ ಥಿಂಗ್ ಆಲ್‌ರೈಟ್. ಎಲ್ಲ ಸುಗುಮವಾಗಿ ಆಗುತ್ತೆ.

"ಮದುವೆ ಕ್ವಿಕ್ಲಿ ಮಾಡಿ ಮುಗಿಸಬೇಕು. ಉಳಿದ ಮಂತ್ರಗಿಂತ್ರ ಮೊದಲಾದವನ್ನು ನೀವು ನಿಮ್ಮ ಮನೆಯಲ್ಲಿ ಮಾಡ್ತೀರಿ - ಗೊತ್ತಾಯಿತೇ?" - ಎಂದು ಚಂದ್ರ ಮೌಲ್ವಿಗೆ ಮೊದಲೇ ತಿಳಿಸಿದ್ದ.

ಈ ವಿಷಯದಲ್ಲಿ ಮೌಲ್ವಿ ಬಹಳ ಬುದ್ಧಿವಂತ. ಮೀಸೆ ಮರೆಯಲ್ಲೇ ನಕ್ಕ. ಮತ್ತು ತಲೆ ಕುಣಿಸಿ ಹೇಳಿದ - "ಗಂಡು-ಹೆಣ್ಣಿನ ಮನಸ್ಸು ಒಂದೇ ಆದರೆ ಅದೇ ನಿಜವಾದ ನಿಕಾ. ಉಳಿದದ್ದೆಲ್ಲಾ ನಮಗೋಸ್ಕರ."

ಚಂದ್ರನಿಗೆ ಈ ವಿಷಯ ಗೊತ್ತು.

ಹಳ್ಳಿಯವರೆಲ್ಲರೂ ಮಸೀದಿಯಲ್ಲಿ ಏರ್ಪಡಿಸಿದ ಔತಣಕ್ಕೆ ಹೋದರು. ಅದೇ ಸಮಯ ಕಾದು ಕಪಾಹಿ ಮನೆಯ ಸಾಮಾನುಗಳನ್ನು ನದಿಯ ಈ ಕಡೆ ದಡಕ್ಕೆ ಸಾಗಿಸಲಾಯಿತು. ಎಲ್ಲ ಸಾಮಾನುಗಳನ್ನೂ ಒಂದೇ ಗಾಡಿಗೆ ತುಂಬಿ ತರಲಾಯಿತು.

ಸುಮಾರು ರಾತ್ರಿ ಎಂಟು ಗಂಟೆ ಹೊಡೆಯೋ ಹೊತ್ತಿಗೆ ಗಾಡಿ ಪುನಃ ಕಪಾಹಿ ಮನೆ ಹತ್ತಿರ ಬಂದು ನಿಂತಿತು. ಒಂದು ಲಂಗ, ಒಂದು ರೇಷ್ಮೆಯ ರಿಹಾ ಮತ್ತು ಎಂಬತ್ತನೇ ನಂಬರಿನ ನೂಲಿನ ಒಂದು ಹೊದಿಕೆಯೊಡನೆ ಕೈಯಲ್ಲಿ ಒಂದು ಪೊಟ್ಟಣ ಹಿಡಿದುಕೊಂಡು ಕಪಾಹಿ ಮನೆಯಿಂದ ಒಬ್ಬಳೇ ಹೊರಟಳು. ಭೀಮ ಮುಂದೆ ಮುಂದೆ ಬಂದ.

"ಇನ್ನೇನೂ ಇಲ್ಲಿ ಉಳಿದಿಲ್ಲ ತಾನೇ?"- ಆತ ಕೇಳಿದ.

"ಇಲ್ಲ" ಕಪಾಹಿ ಬೇಗ ಬೇಗ ಗಾಡಿಗೆ ಹತ್ತಿದಳು. ಗಾಡಿ ಹೊರಟಿತು. ದೋಣಿಯಲ್ಲಿ ಕುಳಿತು ಅವಳು ನದಿ ದಾಟಿದಳು.

ಆ ಕಡೆ ಘಟ್ಟದಲ್ಲಿ ಕಪಾಹಿಯನ್ನು ತಿಖರ್ ಬೇರೆ ಗಾಡಿಗೆ ಹತ್ತಿಸಿದ. ಗಾಡಿಗೆ ಹತ್ತಿದ ಮೇಲೆ ಕಪಾಹಿ ಗಟ್ಟಿಯಾಗಿ ಭೀಮನ ಜೊತೆಯಲ್ಲಿ ಹೇಳಿದಳು - "ಭೀಮ, ನೀನು ನಿಮ್ಮ ಮನೆಗೆ ಹೋಗೋ ಮೊದಲೇ ನಮ್ಮ ಮನೆಗೆ ಹೋಗಿ ನೋಡ್ಕೊಂಡು ಹೋಗು."

"ಇನ್ನೇನು ಕೆಲ್ಸವಿದೆ?"

"ಸಫಿಯತ್ ಮನೆಗೆ ತರಾ ಹೋಗಿದ್ದಳು. ಬಹುಶಃ ಅವಳು ಅಲ್ಲಿಂದ ಬಂದಿರ್ತಾಳೆ. ಆದರೆ ಅವಳು ಅಲ್ಲೆ ಇರ್ಬೇಕು. ಒಂದು ವೇಳೆ ಅವಳು ಬಂದಿದ್ದು ನಿನಗೆ ಭೇಟಿ ಆದರೆ ನಾನು ಇಲ್ಲಿಗೆ ಬಂದಿರೋ ಸಮಾಚಾರ ತಿಳಿಸು."

ಭೀಮ ಅಂಬಿಗನ ಹತ್ತಿರ ಕುಳಿತುಕೊಂಡು ಒಂದು ಹುಕ್ಕಾ ಭಂಗಿ ಸೇದಿದ. ಅನಂತರ ಕಪಾಹಿ ಮನೆಕಡೆ ಹೊರಟ.

ಅವನು ತನ್ನಷ್ಟಕ್ಕೆ ತಾನೇ ಅಂದುಕೊಂಡ. ಇದೆಲ್ಲ ಒಳ್ಳೆಯದಲ್ಲ.

ಭೀಮನಿಗೆ ಇದು ಹೊಸ ವಿಷಯ ಅಲ್ಲ. ಡಾಲಿಮ್ ಮತ್ತು ಸಿಪರಿಯಾ ಹಳ್ಳಿಗಳಲ್ಲಿ ಮದುವೆ ಆಗೋದೇ ಬಹಳ ಕಡಿಮೆ. ಹೆಣ್ಣನ್ನು ಬಹುಶಃ ಕದ್ದು ಕರೆದುಕೊಂಡು ಬರ್ತಾರೆ. ಅಥವಾ ಆಕೆಯೆ ಕದ್ದು ಓಡಿ ಬರ್ತಾಳೆ. ಕೊನೆಯಲ್ಲಿ ಸಮಾಜದವರಿಗೆ ಎಲೆ-ಅಡಿಕೆ ಕೊಟ್ಟು ಬಿಟ್ಟರೆ ಎಲ್ಲವೂ ಸರಿಯಾಗುತ್ತೆ. ಮದುವೆ ಮಾಡೋಕೆ ಎಷ್ಟು ಜನರಿಗೆ ಶಕ್ತಿ-ಸಾಮರ್ಥ್ಯ ಇದೆ? ಎಲ್ಲರೂ ಬಡವರು. ಚಂದ್ರನ ಆದೇಶವನ್ನು ಮೌಲ್ವಿ ಅಕ್ಷರಶಃ ಪಾಲಿಸಿದ. ಬೇನಿಮಾಇ ಉದ್ಯನೆಯ ಸೆರಗಿನ ಮರೆಯಲ್ಲಿ ಕಪಾಹಿಯನ್ನು ಗಾಡಿಯಿಂದ ಇಳಿಸಿ ಒಳಗಡೆ ಕರೆದುಕೊಂಡು ಹೋದಳು. ಕಪಾಹಿ ಹೋಗಿ ಕುಳಿತುಕೊಂಡ ಕೂಡಲೇ ಮೌಲ್ವಿ ಬಂದ. ತಿಖರ್ ಮತ್ತು ಗಾಡಿಯವನು ನಿಕಾ ಆದುದಕ್ಕೆ ಸಾಕ್ಷಿಯಾಗಿದ್ದರು. ಮೌಲ್ವಿ ಮಂತ್ರಪಠನ ಮಾಡಿದ. ಗಂಡಿನ ಹೆಸರೇನು? ಹೆಣ್ಣಿನ ಹೆಸರೇನು? - ಆ ವಿಷಯದ ಗಮನ ಕೊಡುವ ಅಗತ್ಯವಿರಲಿಲ್ಲ. ಕನ್ಯಾಶುಲ್ಕದ ತೀರ್ಮಾನ ಮೌಲ್ವಿಯೇ ಕೈಗೊಂಡ. - ಐವತ್ತು ರೂಪಾಯಿಗಳು.

"ಒಪ್ಪಿಕೊಂಡನೇ?"

"ಹೂಂ"

"ಸರಿ, ಇನ್ನೇನು ವಿಶೇಷವಾಗಿ ಇಲ್ಲ ತಾನೇ?"

ಸಿಲಹಟ್‌ನ ಮೌಲ್ವಿ ಮಂತ್ರ ಪಠಿಸಿದ; ಪ್ರಾರ್ಥನೆ ಮುಗಿದನಂತರ ಟೀ ಕುಡಿದು ಗುಲಬ್ ಮತ್ತು ಚಂದ್ರನಿಂದ ಬೀಳ್ಕೊಂಡ.

ಕೈಗೆ ಒಂದು ರೂಪಾಯಿ ಕೊಟ್ಟು ಚಂದ್ರ ಹೇಳಿದ - "ನಿಕಾ ಸರಿಯಾಗಿ ಮಾಡಿದ್ದೀಯೇ ತಾನೇ?"

"ಅಹುದು, ಬಹಳ ಚೆನ್ನಾಗಿ ಮಾಡಿದ್ದೇನೆ" ಮೌಲ್ವಿ ಹೇಳಿದ.

ಟೀ ಕುಡಿದುಕೊಂಡು ಎಲ್ಲರೂ ತಮ್ಮ ತಮ್ಮ ಮನೆಗೆ ಹೊರಟರು. ಬೇನಿಮಾಇ ಮತ್ತು ತಿಖರನ ಜೊತೆಯಲ್ಲಿ ಗುಲಬ್ ದೂರದವರೆಗೆ ಹೋಗಿ ಬಿಟ್ಟುಬಂದ.

ಹೊರಡಲು ಸಿದ್ಧನಾಗಿ ಚಂದ್ರ ಹೇಳಿದ - "ಒಬ್ಬಳೇ ಹೆಂಗಸು ಬಂದ ಹಾಗೆ ಕಾಣುತ್ತಲ್ಲಾ?"

ಚುಟುಕದಲ್ಲಿ ಗುಲಬ್ ಉತ್ತರಿಸಿದ - "ನನಗೇನು ಹೊತ್ತು?"

ಹೊರಡುವ ಸಮಯದಲ್ಲಿ ಚಂದ್ರ ತನ್ನ ಉದ್ಯನೆಯ ಹಚ್ಚಡದಲ್ಲಿ ಒಳಗಿನಿಂದ ಕಾಗದದಲ್ಲಿ ಸುತ್ತಿರುವ ಒಂದು ಪೊಟ್ಟಣ ತೆಗೆದು ಗುಲಬ್‌ನಿಗೆ ಕೊಟ್ಟ.

"ಅದೇನು?" - ಗುಲಬ್ ಕೇಳಿದ.

"ಸ್ಯಾಂಡಲ್ಸ್. ತರಾ ಮದುವೆ ಸಮಯದಲ್ಲಿ ನಾನು ಒಂದು ಜೊತೆ ಸ್ಯಾಂಡಲ್ಸ್ ಕೊಡ್ತೀನಿ

ಅಂತ ಹೇಳಿದ್ದೆನಲ್ಲಾ."

"ಸರಿ. ಕೊಡು."

ಪೊಟ್ಟಣವನ್ನು ಗುಲಬ್ ಮನೆಯೊಳಗಿಟ್ಟು ಬಂದ.

"ನೀವು ಈಗ ಆನಂದವಾಗಿರಿ. ನಾನು ಹೊರಡುತ್ತೇನೆ" - ಎಂದು ಹೇಳಿ ಚಂದ್ರ ಹೊರಟ.

ಆಗ ಸಾಕಷ್ಟು ರಾತ್ರಿಯಾಗಿತ್ತು. ನದಿಯ ದಡದ ನಿರ್ಜನತೆ ಹಾಗೂ ಮಂಜು ರಾತ್ರಿಯನ್ನು ಮತ್ತಷ್ಟು ಗಂಭೀರವಾಗಿ ಮಾಡಿತ್ತು. ಒಂದು ದೊಡ್ಡ ಕೆಲಸ ಮಾಡಿ ಮುಗಿಸಿದ ಗೌರವ ಪಡೆದು ಚಂದ್ರ ಹೊರಟ. ಸ್ವಲ್ಪ ದಾರಿ ಹೋದ ಮೇಲೆ ಕೂಗಿ ಹೇಳಿದ - "ಗುಲಬ್, ಗುಡ್ ನೈಟ್."

ಕಪಾಹಿ ತಲೆಯ ಮೇಲಿನ ಮುಸುಕು ತೆಗೆದು ಕಣ್ಣರಳಿಸಿ ಗುಲಬ್‌ನನ್ನು ನೋಡಿದಳು. ಗುಲಬ್ ಪ್ರಜ್ಞೆ ತಪ್ಪಿದವನಂತೆ ಆದ. ಬಹುಶಃ ಕಪಾಹಿಯನ್ನು ಗುರತಿಸೋಕೆ ಆತನಿಂದ ಆಗಲಿಲ್ಲ.

"ಏನು ನೋಡುತ್ತಿದ್ದೀರಿ? ನನ್ನ ಗುರುತು ಸಿಕ್ಕಲಿಲ್ಲವೇ? ನಾನೇ..."

"ನೀನು?"

"ಅಹುದು. ನಾನೇ. ನಾನಲ್ಲದೆ ಮತ್ಯಾರು?"

ಕಪಾಹಿ ಕುಳಿತಿದ್ದವಳು ಎದ್ದು ನಿಂತಳು. ಅವನ ಮುಂದೆ ನಿಂತುಕೊಂಡು ಆತನ ಕೈ ಹಿಡಿದುಕೊಂಡಳು.

"ತರಾ ಎಲ್ಲಿ ಹೋದಳು?"

"ಎಲ್ಲಿಗೆ ಹೋಗ್ತಾಳೆ. ಬರ್‍ತಾಳೆ. ಈವೊತ್ತು ಸಫಿಯತ್ ಕರೆದುಕೊಂಡು ಹೋಗಿದ್ದ. ಬಹುಶಃ ಕಳಿಸಿಲ್ಲ ಅಂತ ಕಾಣುತ್ತೆ!" - ಸ್ವಾಭಾವಿಕವಾಗಿಯೇ ಕಪಾಹಿ ಹೇಳಿದಳು.

ಗುಲಬ್ ಇದ್ದಕ್ಕಿದ್ದಂತೆ ತನ್ನ ಕೈಯನ್ನು ಕಪಾಹಿಯ ಕೈಗಳಿಂದ ಬಿಡಿಸಿಕೊಂಡ.

"ಏನಾಯಿತು?" - ಕಪಾಹಿ ಸ್ವಲ್ಪ ಚಕಿತಳಾಗಿ ಕೇಳಿದಳು.

ತಲೆತಗ್ಗಿಸಿಕೊಂಡು ಗುಲಬ್ ನಿಧಾನವಾಗಿ ಹೊರಗಡೆ ಬಂದ. ಹೊರಾಂಗಣದಲ್ಲಿ ನಿಂತು ಒಮ್ಮೆ ಧನಶಿರಿಯ ನದಿಯ ಕಡೆ ನೋಡಿದ. ಆ ಕಡೆ ಮಂಜು ಬೀಳುತ್ತಿತ್ತು. ಧನಶಿರಿ ನದಿ ಶಾಂತವಾಗಿ ಹರಿಯುತ್ತಿತ್ತು. ಸ್ಪಷ್ಟವಾಗಿ ಕಾಣುತ್ತಿಲ್ಲ. ನಿಧಾನವಾಗಿ ಆದರೆ ಅಂಜಿಕೆಯಿಂದಲೇ ಕಪಾಹಿ ಸಹ ಅವನ ಬಳಿ ಬಂದು ನಿಂತಳು.

ಸ್ವಲ್ಪ ಹೊತ್ತು ಮೌನವಾಗಿದ್ದು ಕಪಾಹಿ ಕೇಳಿದಳು - "ಆ ಕಡೆ ಏನು ನೋಡುತ್ತಿದ್ದೀರಿ?"

ಕಪಾಹಿ ಸಂಬೋಧನೆ ಹೊಸದು. ಆಕೆಯ ಧ್ವನಿ ಅಪರಿಚಿತ ಧ್ವನಿಯಂತೆ ಭಾಸವಾಯಿತು. ಆತ ಒಂದು ತರಹವಾಗಿ ಹೇಳಿದ - "ಅದು ನಮ್ಮ ಜಮೀನು."

ಕಪಾಹಿ ಇನ್ನೂ ಹತ್ತಿರಕ್ಕೆ ಬಂದು ಆತನ ಕೈ ಹಿಡಿದುಕೊಂಡಳು. ಅವಳ ಧ್ವನಿ ಸುತರಾಂ ನೀರಸ.

"ಹತ್ತಿರದಲ್ಲೇ?"

"ಅಹುದು. ಅದರ ಪಕ್ಕದಲ್ಲೇ ನದಿ ಇದೆ!"

ಮಂಜು ಬೀಳುತ್ತಿದ್ದರೂ ಇಬ್ಬರೂ ಸ್ವಲ್ಪ ಹೊತ್ತು ನಿಂತುಕೊಂಡು ಹೊಸದಾಗಿ ಮಾಡಿದ ಜಮೀನನ್ನು ನೋಡುತ್ತಿದ್ದರು. ಅನಂತರ ಗುಲಬ್ ಹೇಳಿದ - "ಒಳಗಡೆ ನಡಿ. ಇಲ್ಲಿ ಬಹಳ

ಚಳಿ."

"ರಾತ್ರಿ ಬಹಳ ಹೊತ್ತಾಗಿದೆ " - ಕಪಾಹಿ ಹೇಳಿದಳು.

ಒಳಗಡೆ ಬಂದು ಕಪಾಹಿ ಹೇಳಿದಳು - "ನಾನು ಇಲ್ಲಿಗೆ ಬಂದ ವಿಷಯ ನಮ್ಮಲ್ಲಿ ಯಾರಿಗೂ ಗೊತ್ತಾಗಲಿಲ್ಲ."

ಗುಲಬ್ ನಿಧಾನವಾಗಿ ಇಷ್ಟೇ ಹೇಳಿದ - "ಸರಿ."

ಸ್ವಲ್ಪ ಹೊತ್ತು ಇಬ್ಬರೂ ಕುಳಿತಿದ್ದರು. ಪಕ್ಕಪಕ್ಕದಲ್ಲೇ. ಆದರೂ ಮೌನ.

ಗುಲಬ್ ಏನೋ ಯೋಚಿಸುತ್ತಿದ್ದ. ಕೆಲವು ಸಾರಿ ಕಪಾಹಿಯ ಕಡೆ ನೋಡುತ್ತಿದ್ದ. ಮತ್ತೆ ಕೆಲವು ಸಲ ತಲೆ ತಗ್ಗಿಸುತ್ತಿದ್ದ. ತುಸು ಭಯ ಮತ್ತು ತುಸು ಸಂಶಯದಿಂದಲೇ ಕಪಾಹಿ ಸಹ ಮಧ್ಯೆಮಧ್ಯೆ ಆತನ ಕಡೆ ನೋಡುತ್ತಿದ್ದಳು.

ಸ್ವಲ್ಪ ದೂರದಲ್ಲಿ ಸೊಡರು ಉರಿಯುತ್ತಿತ್ತು. ಮಂದ ಮಂದ ಪ್ರಕಾಶ. ಎಲ್ಲೂ ಯಾವ ರೀತಿಯ ಸದ್ದೂ ಇಲ್ಲ.

ಮೆಲ್ಲಗೆ ಕಪಾಹಿ ಹೇಳಿದಳು - "ತರಾ ಒಬ್ಬಳನ್ನೇ ಇರಿಸಿಕೊಂಡು ನನ್ನನ್ನು ಮತ್ತೆ ನಾಹರ್‌ನೊಡನೆ ಕೂಡಿಬಾಳಲು ಕಳುಹಿಸಬೇಕೆಂದು ಸಭಿಯತ್ ಮನಸ್ಸು ಮಾಡಿದ್ದ."

"ನಾಹರ್ ಜೊತೆಯಲ್ಲಿ?"

"ಅಹುದು. ಆತ ಇಲ್ಲಿಯವರೆಗೆ ಇನ್ನೊಂದು ಹೆಣ್ಣು ತರಲಿಲ್ಲ. ನಾನು ಈವೊತ್ತು ಓಡಿ ಬರದಿದ್ದರೆ ಆತ ಏನಾದರೂ ಮಾಡುತ್ತಿದ್ದ."

ಕಪಾಹಿಯ ಮುಖವನ್ನು ಗುಲಬ್ ನೋಡಿದ - ಆಕೆಗೆ ಆತನ ಬಗ್ಗೆ ಪ್ರೀತಿಯಿದೆ. ತನ್ನ ಗಂಡ ಇನ್ನೂ ಇದ್ದಾನೆ. ಆದರೆ ಅವನನ್ನು ಬಿಟ್ಟು ಗುಲಬ್ ಬಳಿಗೆ ಓಡಿ ಬಂದಿದ್ದಾಳೆ.

ಸ್ವಲ್ಪ ಹೊತ್ತಾದ ಮೇಲೆ ಆತ ಕೇಳಿದ - " ತರಾಳನ್ನು ಯಾಕೆ ಕರೆದುಕೊಂಡು ಬರಲಿಲ್ಲ?"

"ಬರ್‍ತಾಳೆ. ಆಕೆ ಇಲ್ಲಿಗೆ ಬರದೇ ಎಲ್ಲಿಗೆ ಹೋಗ್ತಾಳೆ? ಮೂಗನ ಜೊತೆಯಲ್ಲಿ ಮದುವೆ ಆಗೋದಕ್ಕೆ ಆಕೆ ಎಂದಿಗೂ ಒಪ್ಪೋದಿಲ್ಲ. ಆದರೆ ಜೊತೆಯಲ್ಲಿ ಹೇಗೆ ಕರೆದುಕೊಂಡು ಬರಲಿ?"

ಗುಲಬ್ ಏನೂ ಹೇಳಲಿಲ್ಲ. ಆತನ ಮನಸ್ಸಿಗೆ ಏನು ಅನ್ನಿಸಿತೋ ಹೇಳೋದು ಕಷ್ಟ. ಆತನಿಗೆ ಅಳು ಬರುತ್ತಿತ್ತು. ಆದರೆ ನಕ್ಕ. ಒಣನಗೆ.

ಗುಲಬ್‌ನ ಬಳಿ ಬಂದು ಕಪಾಹಿ ತನ್ನ ಕೈಗಳಿಂದ ಆತನ ಮುಖವನ್ನು ಅಪ್ಪಿಕೊಂಡು ಆತನನ್ನೇ ದೃಷ್ಟಿಸಿ ನೋಡುತ್ತಾ ಮೆಲ್ಲಗೆ ಹೇಳಿದಳು - "ರಾತ್ರಿ ಬಹಳ ಹೊತ್ತಾಗಿದೆ. ಮಲಗೋದಿಲ್ಲವೇ?"

ಕಪಾಹಿಯನ್ನು ಎದೆಗಪ್ಪಿಕೊಂಡ ಕೂಡಲೇ ಗುಲಬ್‌ನಿಗೆ ಆಕೆ ನವತರುಣಿ ಅನ್ನಿಸಿತು. ಅವಳ ಅಂಗ ಸೌಷ್ಠವದಲ್ಲಿ ಒಬ್ಬ ತರುಣಿಯ ಮಾದಕತೆಯಿತ್ತು. ಕಪಾಹಿ ಅವನಿಗಿಂತಲೂ ಬಹಳ ಚಿಕ್ಕ ಹುಡುಗಿ......................

# ಹದಿನೆಂಟು

ಘಟ್ಟದಿಂದ ಹಿಂದಿರುಗಿದ ಮೇಲೆ ಭೀಮ ಪುನಃ ಕಪಾಹಿಯ ಮನೆ ಕಡೆ ಹೊರಟ. ಸುತ್ತಲೂ ನೀರವತೆ. ಸ್ವಲ್ಪ ಹೊತ್ತಿನೊಳಗೆಯೇ ಕಪಾಹಿಯ ಮನೆ ಬಂದಾಯಿತು. ಭೀಮನಿಗೆ ಸಿಟ್ಟು ಸಹ ಬಂತು. ಬರಿದಾದ ಮನೆಗೆ ಹೋಗುವುದು ಸರಿಯಲ್ಲ.

ಆಗ ರಾತ್ರಿಯ ಎರಡನೇ ಜಾವ.

ಭೀಮ ಒಮ್ಮೆ ಸುತ್ತಲೂ ನೋಡಿದ. ಕಪಾಹಿಯೇನೂ ಕಡಿಮೆ ಕುಯುಕ್ತಿ ಹೆಂಗಸಲ್ಲ. ಹಳ್ಳಿಯ ಒಂದು ಕೊನೆಯಲ್ಲಿ ಚಿಕ್ಕಮ್ಮ ಮತ್ತು ಮಗಳು ಇಬ್ಬರೇ ಹೇಗಿರುತ್ತಿದ್ದರು! ಅವರಿಗೋ ಭಯ-ಸಂಶಯ ಅನ್ನೋದೇ ಇಲ್ಲ. ಇಂದು ಈ ಮನೆಮಠ ಎಲ್ಲ ಬಿಟ್ಟು ಪರಾರಿಯಾಗಿರುವುದು ಕಡಿಮೆ ಸಾಹಸವೇ?

ಭೀಮ ಮನೆಯ ಒಳಗಡೆ ಹೋದ. ಒಳಗಡೆ ಕತ್ತಲೆ; ಏನೂ ಕಾಣಿಸುತ್ತಿರಲಿಲ್ಲ. ಅಲ್ಲಿ ಇನ್ನೇನಿದೆ? ನೋಡಿದರೆ ಏನು ಸಿಗುತ್ತೆ? ಸ್ವಲ್ಪ ಹೊತ್ತು ಹಾಗೆಯೇ ನಿಂತಿದ್ದ ಮನೆಯ ಹೊರಗಡೆಗಿಂತ ಒಳಗಡೆ ಸ್ವಲ್ಪ ಬೆಚ್ಚಗಾಗುತ್ತಿತ್ತು. ಅದರಿಂದ ಇಲ್ಲೇ ನಿಂತಿರೋದು ಮೇಲು ಎನಿಸಿತು. ಆದರೆ ಸ್ವಲ್ಪ ಹೊತ್ತಾದ ಮೇಲೆ ಆತ ಮತ್ತೆ ಅಂಗಳಕ್ಕೆ ಬಂದ. ಅಲ್ಲೂ ಏನೂ ಇಲ್ಲ. ಮನೆಯಲ್ಲಿ ಸಾಮಾನು ಬಿಟ್ಟು ಹೋಗೋ ಹೆಂಗಸು ಕಪಾಹಿ ಅಲ್ಲ.

ಅಕಸ್ಮಾತ್ತಾಗಿ ಮನೆ ಕಡೆಗೆ ದೃಷ್ಟಿ ಹಾಯಿಸಿದಾಗ ಮಂಜಿನ ನಡುವೆ ನಿಧಾನ ನಿಧಾನವಾಗಿ ಯಾರೋ ಬರುತ್ತಿರುವುದು ಕಾಣಿಸಿತು. ಅವನಿಗೆ ಸ್ವಲ್ಪ ದಿಗಿಲಾಯಿತು. ಕುಡುಗೋಲನ್ನು ಸರಿಯಾಗಿ ಕೈಯಲ್ಲಿ ಹಿಡಿದುಕೊಂಡು ಗಟ್ಟಿಯಾಗಿ ಕೂಗಿ ಕೇಳಿದ - "ಯಾರದು?"

ತರಾಳಿಗೆ ಗಾಬರಿಯಾಯಿತು. ಜೊತೆಗೆ ಆಕೆಯೂ ಗಟ್ಟಿಯಾಗಿ ಕೂಗಿ ಕೇಳಿದಳು - "ಯಾರದು?"

ಭೀಮ ಹತ್ತಿರಕ್ಕೆ ಹೋಗಿ ನೋಡಿದ. ತರಾಳ ಗುರುತು ಹಿಡಿದ.

"ನಾನು ಭೀಮ. ನೀನು ತರಾ ಅಲ್ವೇ?"

"ಅಹುದು ನಾನೇ"

"ರಾತ್ರಿ ಇಷ್ಟು ಹೊತ್ತಿನಲ್ಲಿ ಒಬ್ಬಳೇ ಎಲ್ಲಿಂದ ಬಂದೆ?"

"ನೀನು ಇಲ್ಲಿ ಏನು ಮಾಡುತ್ತಿದ್ದೀಯೇ?"- ತರಾ ಸ್ವಲ್ಪ ಮುಂದಕ್ಕೆ ಬಂದಳು. "ಚಿಕ್ಕಮ್ಮ ಎಲ್ಲಿಗೆ ಹೋದಳು?"

"ನಿನ್ನ ಚಿಕ್ಕಮ್ಮ ಹೊರಟು ಹೋದಳಲ್ಲಾ. ಅವಳು ಹೋಗಿ ಬಹಳ ಹೊತ್ತಾಯಿತು. ನಾನೇ ನದಿ ದಾಟಿಸಿ ಬಂದೆ. ಮನೆಯಲ್ಲಿ ಏನಾದರೂ ಸಾಮಾನು ಬಿಟ್ಟು ಬಂದಿದ್ದೇನೆಯೇ ಒಂದು ಸಾರಿ ನೋಡಿ ಹೋಗು ಅಂತ ನಿಮ್ಮ ಚಿಕ್ಕಮ್ಮ ಹೇಳಿದಳು. ಅದಕ್ಕಾಗಿ ಒಂದು ಸಾರಿ ನೋಡಿ ಹೋಗೋಕೆ ಬಂದಿದ್ದೆ."

ತರಾಳಿಗೆ ಸ್ವಲ್ಪ ಹೊತ್ತಿನ ತನಕ ಗಾಬರಿ ಇದ್ದೆ ಇತ್ತು. ಅನಂತರ ಖಿನ್ನಳಾಗಿ ಕೇಳಿದಳು -

"ಹಾಗಾದರೆ ಚಿಕ್ಕಮ್ಮ ಹೊರಟು ಹೋದಳೇ?"

ಭೀಮ ಹೇಳಿದ - "ಬಹಳ ಚಳಿಯಾಗುತ್ತೆ. ನೀನು ಮನೆ ಒಳಗಡೆ ಬಾ ತರಾ. ನಾನು ಬೆಂಕಿ ಹೊತ್ತಿಸ್ತೀನಿ. ನನ್ನ ಹತ್ತಿರ ಬೆಂಕಿ ಪೆಟ್ಟಿಗೆ ಇದೆ."

ತರಾ ಭೀಮನ ಸಮೀಪಕ್ಕೆ ಬಂದಳು.

"ಭೀಮಣ್ಣಾ"

"ಏನಾಯಿತು ತರಾ"

"ನಾನೂ ಪಾಹಿಂಗೆ ಹೋಗ್ತೀನಿ."

"ಸರಿ. ಹೋಗದೆ ಇಲ್ಲಿ ಯಾರ ಜೊತೆಯಲ್ಲಿ ಇರ್ತೀಯೇ? ಆದರೆ ಈಗ ರಾತ್ರಿ ಬಹಳ ಹೊತ್ತಾಗಿದೆ."

"ಆದರೂ ಆಗಲಿ. ಇನ್ನು ನಾನು ಇಲ್ಲಿರೋದಿಲ್ಲ. ಈಗಲೇ ಹೋಗ್ತೀನಿ. ನೀನು ನನ್ನನ್ನು ನದಿ ದಾಟಿಸಿ ಬರ್ತೀಯಾ?"

"ರಾತ್ರಿ ಇಷ್ಟು ಹೊತ್ತಿನಲ್ಲಿ ಧನಶಿರಿಯನ್ನು ದಾಟುವುದು ಒಳ್ಳೆಯದಲ್ಲ. ಇನ್ನೇನು ಬೆಳಗು ಆಗುತ್ತೆ. ಅಲ್ಲಿಯತನಕ ಇಲ್ಲೇ ಇರು."

ತರಾ ಮನೆಯ ಒಳಗಡೆ ಹೋದಳು. ಭೀಮನ ಕೈಯಿಂದ ಬೆಂಕಿಪೆಟ್ಟಿಗೆ ತೆಗೆದುಕೊಂಡು ಮೂಲೆಯಲ್ಲಿದ್ದ ಲಾಟೀನು ಹೊತ್ತಿಸಿದಳು. ಅನಂತರ ತನ್ನ ಗಂಟು ಹುಡುಕಿದಳು. ಆದರೆ ಚಿಕ್ಕಮ್ಮ ಅದನ್ನು ತೆಗೆದುಕೊಂಡು ಹೋಗಿದ್ದಳು

ಬೆಕ್ಕು ಒಂದೇ ಎಲ್ಲೋ ಕುಳಿತಿತ್ತು. ತರಾಳನ್ನು ನೋಡಿ ಅದು ಬಂತು. ಮಿಯಾವ್ ಮಿಯಾವ್ ಅಂತ ಆಕೆಯ ಕಾಲಿನ ಮೇಲೆ ಹೊರಳಾಡಿತು. ತರಾ ಅದನ್ನು ನೋಡಿ ಸ್ವಲ್ಪ ಹೊತ್ತು ಬೇರೆ ವಿಷಯ ಮರೆತಳು. ಆಕೆ ಬೆಕ್ಕನ್ನು ಎತ್ತಿಕೊಂಡಳು. ಬೆಕ್ಕಿನ ಶಾಖ ಆಕೆಗೆ ಹಿಡಿಸಿತು. ಆದರೆ ಬೇಗ ಅದನ್ನು ಕೆಳಗಿಳಿಸಿದಳು.

ಒಳಗಡೆ ಇರದೆ ಹೊರಗಡೆ ಬಂದಳು.

"ಭೀಮಣ್ಣಾ, ನಾನು ಹೊರಟೆ."

"ಈಗಲೇ ಹೋಗ್ತೀಯಾ?"

"ಅಹುದು. ಬಾ. ನನ್ನನ್ನು ಅಲ್ಲಿಗೆ ಬಿಟ್ಟು ಬಾ. ನದಿ ದಾಟಿಸಿದರೆ ಸಾಕು. ಆ ಕಡೆ ನಾನೇ ಹೋಗ್ತೀನಿ."

ತರಾ ಹೊರಟೇ ಬಿಟ್ಟಳು. ಆಕೆಯ ಹಿಂದೆ ಭೀಮ ಸಹ ಹೊರಟ. ರಸ್ತೆಯಲ್ಲಿ ಭೀಮ ಕೇಳಿದ - "ನಿಮ್ಮ ಚಿಕ್ಕಮ್ಮ ನಿನ್ನನ್ನು ಜೊತೆಯಲ್ಲಿ ಯಾಕೆ ಕರೆದುಕೊಂಡು ಹೋಗಲಿಲ್ಲ?"

ತರಾ ಏನೂ ಮಾತಾಡಲಿಲ್ಲ.

ತನ್ನ ಜೀವನದಲ್ಲಿ ಇಂದಿನಂಥ ಭಯೋತ್ಪಾದಕ ರಾತ್ರಿ ಎಂದಾದರೊಮ್ಮೆ ಬರಬಹುದೆಂದು ಆಕೆ ಕನಸಿನಲ್ಲೂ ಎಣಿಸಿರಲಿಲ್ಲ. ಆಕೆ ಬಹಳ ದಿನಗಳಿಂದಲೂ ಒಬ್ಬಂಟಿಗಳಂತೆ ಸುತ್ತುತ್ತಿದ್ದಾಳೆ. ಸುತ್ತಲೂ ಕೇವಲ ಕತ್ತಲು ಮತ್ತು ಮಂಜು ಕವಿದಿದೆ. ಎಷ್ಟು ಹೊತ್ತಿಗೆ ಬೆಳಗಾದೀತು ಎನ್ನುವ ತವಕ.

ಮಂಜು ಮತ್ತು ರಾತ್ರಿಯ ಗಾಳಿಯಿಂದ ತರಾಳ ತುಟಿ ಒಡೆದುಕೊಂಡಿದ್ದುವು. ಜೋಮು ಹಿಡಿದಿದ್ದ ಕೈಕಾಲು ನೋಯುತ್ತಿದ್ದುವು. ಆದರೆ ಬಹಳ ಉದ್ವಿಗ್ನತೆಯಿಂದಾಗಿ ಆಕೆಯ

ದೇಹದಲ್ಲಿ ಶಾಖ ಮೂಡಿತ್ತು. ಆ ಸಮಯದಲ್ಲಿ ಆಕೆ ಹುಚ್ಚಿಯಂತಾಗಿದ್ದಳು.

ನದಿಯ ಘಟ್ಟ ನಿಶ್ಶಬ್ದವಾಗಿ ನಿದ್ರಿಸುತ್ತಿತ್ತು. ದಟ್ಟವಾಗ ಮಂಜು ನದಿಯ ಮೇಲೆ ಕವಿಯುತ್ತಿತ್ತು. ಬೆಳದಿಂಗಳು ಮಸುಕಾಗಿತ್ತು. ನೀರವತೆಯಿಂದ ಕೂಡಿದ ಹಳ್ಳಿ ನಿದ್ರಿಸುತ್ತಿತ್ತು.

ತರಾ ಮತ್ತು ಭೀಮ ಮಾತಾಡದೆ ಹೋಗುತ್ತಿದ್ದರು. ಯಾವ ವಿಷಯವನ್ನೂ ಕೇಳಲು ಭೀಮನಿಗೆ ಮನಸ್ಸಾಗಲಿಲ್ಲ. ಆತ ಬಹುಶಃ ಎಲ್ಲವನ್ನೂ ಅರ್ಥಮಾಡಿಕೊಂಡಿದ್ದ. ಆದರೆ ಏನೂ ಅರ್ಥವಾಗದವನಂತಿದ್ದ. ಕಪಾಹಿ ತನ್ನ ಜೊತೆಯಲ್ಲಿ ತರಾಳನ್ನು ಯಾಕೆ ಕರೆದುಕೊಂಡು ಹೋಗಲಿಲ್ಲ? ಕಪಾಹಿಯನ್ನೇ ಮದುವೆಯಾಗಲು ಗುಲಬ್ ಬಯಸಿದ್ದನೇ? ತರಾಳನ್ನು ಮದುವೆ ಆಗೋ ಯೋಚನೆಯಿರಲಿಲ್ವೇ? ವಯಸ್ಸಿನ ದೃಷ್ಟಿಯಿಂದ ತರಾ ಚಿಕ್ಕ ಹುಡುಗಿ - ಹದಿನಾಲ್ಕು ವರ್ಷ ವಯಸ್ಸು. ಆದರೆ ಆಕೆಯ ಮೈಕಟ್ಟು ಚಿಕ್ಕ ಹುಡುಗಿಯಂತಿರದೆ ಪ್ರಾಯದ ಹುಡುಗಿಯಂತಿದೆ. ಕಪಾಹಿ - ಆಕೆಯೂ ಸಹ ಯುವತಿಯಂತಿದ್ದಾಳೆ. ಗುಲಬ್‌ನಿಗಿಂತ ಮೂರು ನಾಲ್ಕು ವರ್ಷ ಹಿರಿಯವಳಾದರೇನು? ಅವಳಂತೂ ಸುತರಾಂ ಪ್ರಾಯದ ಹೆಣ್ಣು. ಅವಳು ಸಂಸಾರ ಹೂಡಬೇಕು. ಹೂಡಲೇಬೇಕಾದ ವಿಷಯ. ತರಾಳಿಗೊಂದು ವ್ಯವಸ್ಥೆ ಅವರೇ ಒಂದು ದಿನ ಮಾಡಬಹುದು.

ಇಬ್ಬರೂ ಘಟ್ಟದ ಬಳಿ ಬಂದರು. ದೋಣಿಯನ್ನು ಒಂದು ಗೂಟಕ್ಕೆ ಕಟ್ಟಲಾಗಿತ್ತು. ಹುಟ್ಟುಗೋಲು ಇರಲಿಲ್ಲ.

ಭೀಮ ಹೇಳಿದ - "ತರಾ. ಆಗಿದ್ದು ಆಗಿ ಹೋಯಿತು. ಗುಲಬ್ ಮತ್ತು ಕಪಾಹಿ ಎಲ್ಲಿಗೂ ಓಡಿ ಹೋಗೋದಿಲ್ಲ. ಅವರ ನಿದ್ರೆ ಹಾಳುಮಾಡಿ ಈಗಲೇ ಹೋಗೋದು ಅಥವಾ ಮುಂಜಾನೆ ಹೋಗೋದು ಎರಡೂ ಒಂದೇ. ನಾವಿಬ್ಬರು ಈ ಘಟ್ಟದ ಛಾವಣಿ ಕೆಳಗಡೆ ಸ್ವಲ್ಪ ಹೊತ್ತು ಕುಳಿತುಕೊಳ್ಳೋಣ. ಕೈಕಾಲುಗಳೆಲ್ಲ ಮರಗಟ್ಟುವಷ್ಟು ಚಳಿಯಾಗುತ್ತಿದೆ.

ತರಾ ಏನೂ ಆಕ್ಷೇಪಣೆ ಎತ್ತಲಿಲ್ಲ. ಆಕೆಗೂ ತುಂಬಾ ಚಳಿಯಾಗಿತ್ತು. ಆಕೆಯ ಕೈಕಾಲು ನಡುಗುತ್ತಿದ್ದವು.

ಭೀಮ ಜಾಸ್ತಿಯಾಗಿ ಬೆಂಕಿ ಹೊತ್ತಿಸಿದ. ಅಂಬಿಗ ಕೂಡಿ ಹಾಕಿದ್ದ ಸೌದೆ ತೆಗೆದುಕೊಂಡು ಬೆಂಕಿ ಹೊತ್ತಿಸಿದ. ತರಾ ಮತ್ತು ಭೀಮ ಇಬ್ಬರೂ ಬೆಂಕಿಯ ಮುಂದೆ ಕುಳಿತರು. ಯಾರೂ ತುಟಿ ಪಿಟಕ್ಕೆನ್ನಲಿಲ್ಲ.

ಕೈಕಾಲು ಬೆಚ್ಚಗಾದ ಮೇಲೆ ಅವರು ಬಹುಶಃ ಎಚ್ಚರವಾದರು.

ಭೀಮ ಹೇಳಿದ - "ಸ್ವಲ್ಪ ಹೊತ್ತಾದ ಮೇಲೆ ಬೆಳಗಾಗುತ್ತದೆ. ನಿಮಗಾಗಿ ನಾನು ಈ ರಾತ್ರಿಯನ್ನು ನಿರರ್ಥಕವಾಗಿ ಕಳೆದೆ. ನೀನೂ ಗುಲಬ್‌ನ ಜೊತೆಯಲ್ಲಿ ಹೋಗ್ಬೇಕು ಅಂತ ಮನಸ್ಸಿದ್ದರೆ ನೀನು ಬೇರೆ ಕಡೆ ಎಲ್ಲಿಗೂ ಹೋಗಬಾರದಾಗಿತ್ತು."

ತರಾ ಏನೂ ಮಾತಾಡಲಿಲ್ಲ.

ದೂರದಲ್ಲಿ ಎಲ್ಲೋ ಮೂರು ನಾಲ್ಕು ಕೋಳಿ ಕೂಗುತ್ತಿದ್ದುವು. ರಾತ್ರಿ ಬಹುಶಃ ಕಳೆಯುತ್ತಾ ಬಂದಿದೆ. ತನ್ನ ದೇಹ-ಮನಸ್ಸು ಹಗುರವಾಗಿದೆ. ಆದರೆ ಆಗಲೂ ಬಾನು ಮತ್ತು ಬುವಿ ಎರಡೂ ಮಂಜಿನಿಂದ ಮುಚ್ಚಿಹೋಗಿವೆ.

ತರಾ ತಟಕ್ಕನೆ ಎದ್ದು ನಿಂತಳು.

"ಭೀಮಣ್ಣಾ, ನನ್ನನ್ನು ನದಿ ದಾಟಿಸಿಬಿಡು!"

"ಆಗಲಿ, ಬೆಳಗಾಗೋ ಸಮಯ ಆಗಿದೆ."

"ಆ ಕಡೆ ರಸ್ತೆಯಲ್ಲಿ ಹೇಗೆ ಹೋಗ್ತೀಯೇ?"

"ನೀನು ಸ್ವಲ್ಪ ಮುಂದಕ್ಕೆ ದಾರಿ ತೋರಿಸಿಬಿಡು. ನಾನು ಹೋಗ್ತೀನಿ."

ಭೀಮ ಸಹ ಎದ್ದ.

ಅಂಬಿಗನ ಛಾವಣಿಯಲ್ಲಿದ್ದ ಒಂದು ಚಿಕ್ಕ ಹುಟ್ಟುಗೋಲು ಹುಡುಕಿ ತೆಗೆದುಕೊಂಡು ಬಂದ. ನದಿ ದಾಟಿಸಿದ.

ಇನ್ನೂ ಮಸುಕು ಮಸುಕು ಬೆಳಕಾಗಿತ್ತು. ಭೀಮನನ್ನು ಹಿಂಬಾಲಿಸಿ ಗುಲಬ್‌ನ ಮನೆ ಕಡೆ ತರಾ ಹೊರಟಳು. ವಸ್ತ್ರ ನೆಲ, ಒಣ ಹುಲ್ಲು - ಮಂಜಿನಿಂದ ಒದ್ದೆಯಾಗಿದ್ದಾಳೆ.

ಕಪಾಹಿ ಹಾಸಿಗೆಯಿಂದ ಎದ್ದು ಬಾಗಿಲು ತೆಗೆದುಕೊಂಡು ಹೊರಗಡೆ ಬಂದಳು. ಎದುರುಗಡೆ ತರಾಳನ್ನು ಕಂಡು ಹೌಹಾರಿಸಿದಳು. ಆದರೆ ಹೆಚ್ಚು ವಿಸ್ಮಯವನ್ನು ತೋರ್ಪಡಿಸದೆಯೇ ಅವಳು ಹೇಳಿದಳು - "ನೀನು ಬಂದು ಬಿಟ್ಟೆಯಾ? ಒಳಗಡೆ ಹೋಗು. ನಿಮ್ಮ ಚಿಕ್ಕಪ್ಪ ಇನ್ನೂ ಏಳಲೇ ಇಲ್ಲ. ನಾನು ನದಿಯಲ್ಲಿ ಸ್ನಾನ ಮಾಡಿ ಬರ್ತೀನಿ."

ತರಾ ಸ್ವಲ್ಪ ಹೊತ್ತು ಅಂಗಳದಲ್ಲಿ ನಿಂತಿದ್ದಳು. ಆಕೆಯ ಕಣ್ಣುಗಳು ಮಬ್ಬಾದುವು. ಅವಳು ಕುಳಿತುಕೊಂಡಳು. ಇಂದು ಗುಲಬ್ ಆಕೆಯ ಚಿಕ್ಕಪ್ಪ. ತರಾಳ ಕನಸು ಚೂರಾಯಿತು. ಆಕೆ ಪೂರ್ವದ ಕಡೆ ನೋಡಿದಳು. ಆ ದಿಗಂತವನ್ನು ಆಕೆ ಗುರುತಿಸಲಾಗಲಿಲ್ಲ.

# ಹತ್ತೊಂಬತ್ತು

ಮರುದಿನವೇ ಡಾಲಿಮ್ ಹಳ್ಳಿಯವರಿಗೆ ಈ ವಿಷಯ ಗೊತ್ತಾಯಿತು. ಸಫಿಯತ್ ಮನೆಯಿಂದ ತರಾ ಪರಾರಿಯಾದಳು. ಸ್ವಲ್ಪ ಹೊತ್ತು ಆಕೆಯನ್ನು ಹುಡುಕಿದರು. ಆದರೆ ಹೆಚ್ಚಿಗೆ ರಾದ್ಧಾಂತವಾಗಲಿಲ್ಲ. ಇವರೆಲ್ಲ ಓಡಿಹೋಗುವ ಹೆಣ್ಣುಗಳು. ಹೋದದ್ದು ಒಳ್ಳೆಯದೇ ಆಯಿತು ಎಂದು ಸಫಿಯತ್ ಹೇಳಿದ. ಹುಡುಕಾಡುವ ಅಗತ್ಯವಿಲ್ಲ. ಎಲ್ಲೂ ಹಾಳಾಗಿ ಹೋಗಲ್ಲ.

ಆದರೆ ಇಷ್ಟಾದರೂ ಸಹ ತರಾ ಮನೆಗೆ ವಾಪಸು ಹೋಗಿದ್ದಾಳೆಯೋ ಅಥವಾ ಇಲ್ಲವೋ ಎಂಬುದನ್ನು ತಿಳಿಯಲು ಮರುದಿನವೇ ಆಕೆಯ ಮನೆಗೆ ಸಫಿಯತ್ ಯಾರಾರನ್ನೋ ಕಳುಹಿಸಿದ್ದ. ಆಗ ಎಲ್ಲ ರಹಸ್ಯವೂ ಬಯಲಾಯಿತು.

ತರಾಳನ್ನು ಗುಲಬ್ ಮದುವೆ ಮಾಡಿಕೊಂಡ ಅಂತ ಒಬ್ಬ ಹೇಳಿದರೆ, ತರಾಳನ್ನು ಮದುವೆ ಆಗಲಿಲ್ಲ, ಕಪಾಹಿ ಮದುವೆ ಆದ ಅಂತ ಮತ್ತೊಬ್ಬ.

ಕಪಾಹಿಯನ್ನು ಗುಲಬ್ ಮದುವೆ ಮಾಡಿಕೊಂಡ, ತರಾಳನ್ನಲ್ಲ ಎನ್ನುವ ಸುದ್ದಿ ಒಂದೆರಡು ದಿನಗಳಲ್ಲಿ ಎಲ್ಲರೂ ಖಚಿತವಾಗಿ ತಿಳಿದುಕೊಂಡರು.

ಪರ ಮತ್ತು ವಿರೋಧ ಎರಡು ರೀತಿಯಲ್ಲೂ ಅನೇಕ ವಿಧವಾಗಿ ಆಲೋಚನೆ-ಪ್ರತ್ಯಾಲೋಚನೆ ನಡೆಯಿತು.

ತರಾಳನ್ನು ತೋರಿಸಿ ಗುಲಬ್‌ನನ್ನು ಕಪಾಹಿ ಪುಸಲಾಯಿಸಿದಳು. ಅನಂತರ ತಾನೇ ಅವನನ್ನು ಕಟ್ಟಿಕೊಂಡಳು. ಹೆಂಗಸರ ಮೇಲೆ ವಿಶ್ವಾಸವಿಡಲಾಗುವುದಿಲ್ಲ.

ಮೊದಲಿನಿಂದಲೂ ಕಪಾಹಿಯೊಡನೆ ಆತನ ಸಂಬಂಧವಿತ್ತು. ಆ ಸಂಬಂಧಕ್ಕೆ ಈಗ ಧಕ್ಕೆ ಒದಗಿದೆ.

ನಿನ್ನನ್ನು ಮದುವೆ ಆಗ್ತೀನಿ ಅಂತ ತರಾಳಿಗೂ ಆಶೆ ತೋರಿಸಿದ್ದ ಅಂತ ಸುದ್ದಿ.

ತರಾ ಸಹ ಆತನ ಮೇಲೆ ಬಹಳ ನಂಬಿಕೆಯಿಟ್ಟಿದ್ದಳು. ಆದರೆ ಆತ ಮೋಸ ಮಾಡಿದ.

ಯಾರಿಗೆ ಯಾರು ಮೋಸ ಮಾಡಿದ್ದಾರೆ ಅನ್ನೋದು ಗೊತ್ತಾಗೋ ಬಗೆ ಹೇಗೆ? ಯಾರ ಹಣೆಯಲ್ಲಿ ಏನು ಬರೆದಿದೆಯೋ ತಪ್ಪಿಸೋರ್‍ಯಾರು?

ತರಾಳಿಗೆ ಮದುವೆ ಆಗೋ ವಯಸ್ಸು ಇನ್ನೂ ಮುಗಿದಿಲ್ಲ. ಅವಳಿಗೆ ಮಹಾ ಎಷ್ಟು ವರ್ಷ ಆಗಿದೆ. ಕಪಾಹಿಯನ್ನು ಮದುವೆ ಆಗಿ ಗುಲಬ್ ಒಳ್ಳೆಯ ಕೆಲಸವನ್ನೇ ಮಾಡಿದ್ದಾನೆ.

ಚಂದ್ರ ಒಮ್ಮೆ ಗುಲಬ್‌ನನ್ನು ಭೇಟಿ ಮಾಡಿದ.

''ನೀನು ಎಂಥ ಕೆಲಸ ಮಾಡಿದೆ ಗುಲಬ್? ನಾನು ನಿನ್ನ ಮದುವೆ ತರಾ ಜೊತೆಯಲ್ಲಿ ಆಗುತ್ತೆ ಎಂದು ಯೋಚಿಸಿದ್ದೆ. ಆಪೋಜಿಟ್!''

ಅಪರಾಧಿಯಂತೆ ತಲೆ ತಗ್ಗಿಸಿ ಗುಲಬ್ ಹೇಳಿದ - ''ನೀನು ಯೋಚಿಸಿದ್ದು ಸರಿಯೇ ಸರಿ. ನಾನು ಈ ರೀತಿ ಆಗುತ್ತೆ ಎಂದು ತಿಳಿಯಲಿಲ್ಲ. ಏನೋ ಯದ್ವಾ ತದ್ವಾ ಆಗಿ ಹೋಯಿತು.''

''ತರಾಳನ್ನು ಮದುವೆ ಆಗಬೇಕು ಅಂತ ನಿನಗೆ ಮನಸ್ಸಿದ್ದರೆ ಕಪಾಹಿಯನ್ನು ಯಾಕೆ ಮದುವೆಯಾದೆ?''

''ನನಗೆ ಗೊತ್ತೇ ಆಗಲಿಲ್ಲ. ಮೌಲ್ವಿ ಹೇಳಿದ್ದ ವಿಷಯದ ಕಡೆ ನಾನು ಗಮನ ಹರಿಸಲೇ ಇಲ್ಲ. ತರಾಳಿಗೆ ಬದಲಾಗಿ ಆಕೆಯ ಚಿಕ್ಕಮ್ಮನೇ ಬರ್‍ತಾಳೆ ಅಂತ ನನಗೇನು ಗೊತ್ತು?''

''ನಿಜ. ಆ ವಿಷಯದ ಬಗ್ಗೆ ನಾನು ಆ ಸಮಯದಲ್ಲಿ ಯೋಚಿಸಲಿಲ್ಲ. ತರಾಳೇ ಈ ರೀತಿ ಮುಸುಕು ಹಾಕಿಕೊಂಡು ಬಂದಿದ್ದಾಳೆಂದು ನಾನು ಭಾವಿಸಿದೆ. ಈಗ ಆಗಿದ್ದು ಆಗಿ ಹೋಯಿತು. ಇನ್ನು ಮುಂದೆ ಸರಿಯಾಗಿ ನಡೆದುಕೊಳ್ಳಬೇಕು. ತರಾಳನ್ನು ಸ್ನೇಹದಿಂದ ಕಾಣು.''

''ಕಾಣದೆ ಏನು! ಆಕೆಯನ್ನು ಸ್ನೇಹದಿಂದ ಕಾಣುತ್ತೇನೆ. ಆದರೆ ಅಲ್ಲಿಗೆ ಬಂದ ಮೇಲೆ ಆಕೆ ಒಂದು ತರ ಖಿನ್ನಳಾಗಿದ್ದಾಳೆ.''

''ಕೆಲವು ದಿನಗಳವರೆಗೆ ಆಕೆಗೆ ವ್ಯಥೆ ಆಗೇ ಆಗುತ್ತೆ. ಶೀ ಮಸ್ಟ್ ಸಾರಿ. ನೀವಿಬ್ಬರೂ ಆಕೆಯನ್ನು ಸ್ನೇಹದಿಂದ ಕಾಣಿರಿ. ಆಕೆ ಚಿಕ್ಕ ಹುಡುಗಿ. ನಾಟ್ ಓಲ್ಡ್ ಗರ್ಲ್.

ಗುಲಬ್ ಹೇಳಿದ - ''ಸರಿ. ಆಗಿದ್ದು ಆಗಿಹೋಯಿತು. ನೋಡ್ತಾ ನೋಡ್ತಾ ನಾಟಿಯ ಕಾಲ ಬಂತು. ನಾನು ಆಬಾದು ಮಾಡಿರೋ ಜಮೀನಿನ ಪೋಡು-ಪಟ್ಟೆ ನನ್ನ ಹೆಸರಿಗೆ ಮಾಡಿಸ್ಬಿಡು.''

''ಆಗಲಿ. ಮಾಡಿಸ್ತೀನಿ. ನೀನು ಯೋಚಿಸ ಬ್ಯಾಡ. ಈ ವರ್ಷ ನೀನು ಚೆನ್ನಾಗಿ ಬೇಸಾಯ ಮಾಡು. ಬೇಳೆ, ಸಾಸಿವೆ ಬೆಲೆ ಜಾಸ್ತಿಯಾಗಿದೆ. ದಿನಸಿ ಬೆಲೆಯೂ ಜಾಸ್ತಿಯಾಗಬಹುದು. ಈಗ ನೀನೊಬ್ಬನೇ ಇಲ್ಲ. ಯು ತ್ರಿ ಮೆನ್. ಚೆನ್ನಾಗಿ ಬೇಸಾಯ ಮಾಡದೆ ಹೋದರೆ ಬರಗಾಲದಲ್ಲಿ ಹೊಟ್ಟೆಗಿಲ್ಲದೆ ಸಾಯಬೇಕಾಗುತ್ತದೆ.''

ಗುಲಬ್ ಸಹ ಇದನ್ನೇ ಯೋಚಿಸಿದ್ದ. ಈಗ ಅವನು ಜಾಸ್ತಿ ಕೆಲಸ ಮಾಡಬೇಕಾಗಿದೆ.

ವರ್ಷಕ್ಕೆ ಆಗುವಷ್ಟು ದವಸ-ಧಾನ್ಯದ ವ್ಯವಸ್ಥೆ ಆತ ಮಾಡದಿದ್ದರೆ ಆತನಿಗೆ ಕಷ್ಟವಾಗುತ್ತೆ. ಕಪಾಹಿ ಹೊಟ್ಟೆ ಪಾಡೇನು? ತರಾ ಹೊಟ್ಟೆ ಪಾಡೇನು?

ಕಪಾಹಿ ಸಹ ಕೈಕಟ್ಟಿ ಕುಳಿತಿರೋ ಹೆಂಗಸಲ್ಲ. ಹೋದ ವಾರವೇ ಅವಳು ಗುಲಚ್‌ನಿಗೆ ಹೇಳಿ ಎರಡು ಮಗ್ಗದ ಏರ್ಪಾಡು ಮಾಡಿಸಿದ್ದಾಳೆ. ಕೂಡಿ ಹಾಕಿ ಜೊತೆಯಲ್ಲಿ ತಂದಿದ್ದ ಹಣದಿಂದ ದಾರ ಕೊಂಡು ತರಿಸಿದ್ದಾಳೆ. ಎರಡು ಮಗ್ಗಗಳಲ್ಲೂ ಬೇರೆ ಬೇರೆ ಬಟ್ಟೆ ನೇಯಲು ಆಕೆ ಪ್ರಾರಂಭಿಸಿದ್ದಾಳೆ. ಕೈಕಟ್ಟಿ ಕುಳಿತರೆ ಹೊಟ್ಟೆ ತುಂಬುತ್ತದೆಯೇ? ಮಗ್ಗಕ್ಕೆ ಬೇಕಾದ ಎಲ್ಲ ಉಪಕರಣಗಳನ್ನೂ ಆಕೆ ತನ್ನ ಮನೆಯಿಂದಲೇ ತಂದಿದ್ದಳು.

ತರಾಳ ಮುಖ ನೋಡಲು ಸಹ ಗುಲಚ್‌ನಿಗೆ ಭಯವಾಗುತ್ತೆ. ತರಾ ನೋಡಿದರೆ ಆತನ ಮನಸ್ಸು ಮುದುಡಿಕೊಳ್ಳುತ್ತದೆ. ತಾನು ಅಪರಾಧಿ ಎನಿಸುತ್ತದೆ. ಆತ ಮೌನವಾಗಿರುತ್ತಾನೆ.

ತರಾಳ ನಡೆನುಡಿಯಲ್ಲಿ ಅನೇಕ ಬದಲಾವಣೆಗಳಾಗಿವೆ. ಆ ನೀರವತೆಯಿಂದ ಕೂಡಿದ ಪರಿವಾರದಲ್ಲಿ ಆಕೆ ಮತ್ತಷ್ಟು ನಿಶ್ಶಬ್ದದಿಂದ ಇದ್ದಾಳೆ. ಅವಳು ಮಾತಾಡುವುದೇ ಇಲ್ಲ. ತಲೆ ತಗ್ಗಿಸಿಕೊಂಡು ಮೌನವಾಗಿ ಕೆಲಸ ಮಾಡುತ್ತಿರುತ್ತಾಳೆ. ಬೆಳಗಿನ ಜಾವ ಚಿಕ್ಕಮ್ಮ ಮತ್ತು ಗುಲಚ್ ಏಳುವುದಕ್ಕಿಂತ ಮುನ್ನವೇ ಎದ್ದು ಮನೆ-ಅಂಗಳ ಎಲ್ಲವನ್ನೂ ಗುಡಿಸುತ್ತಾಳೆ. ನದಿಯಿಂದ ನೀರು ತಂದು ತುಂಬುತ್ತಾಳೆ. ದನಕರುಗಳಿಗೆ ಮೇವು ಹಾಕುತ್ತಾಳೆ. ಬತ್ತ ಕುಟ್ಟುತ್ತಾಳೆ. ಮನೆ-ಅಂಗಳ ಸಾರಿಸುತ್ತಾಳೆ. ರಾತ್ರಿ ಗುಲಚ್ ಮತ್ತು ಚಿಕ್ಕಮ್ಮ ಊಟ ಮಾಡಿದ ಮೇಲೆ ಎಲ್ಲ ಕೆಲಸಕಾರ್ಯ ಮುಗಿಸಿ ಮಲಗುತ್ತಾಳೆ. ಈ ರೀತಿ ಎಲ್ಲ ಕೆಲಸಕಾರ್ಯಗಳನ್ನು ನಿರ್ವಹಿಸುತ್ತಿದ್ದರೂ ಆಕೆಯ ಬಾಯಿಂದ ಯಾವ ಮಾತೂ ಹೊರಡುವುದಿಲ್ಲ. ಪೃಥ್ವಿ ಮೇಲೆ ಆಕೆಯೊಬ್ಬಳೇ ಇರುವಂತೆ, ಮತ್ತಾರೂ ಇಲ್ಲವೇನೋ ಎಂಬಂತೆ ಇರುತ್ತಾಳೆ.

ಗುಲಚ್‌ನಿಗೆ ತರಾ ಮನಸ್ಸಿನ ಯೋಚನೆ ಗೊತ್ತಿದೆ. ಆದರೆ ನಿರುಪಾಯನಾಗಿ ಆತ ದೂರದಲ್ಲೇ ಇದ್ದಾನೆ. ಕೊಳಲನ್ನು ಕೈಗೆ ತೆಗೆದುಕೊಂಡು ಗಂಟೆಗಟ್ಟಲೆ ನದಿಯ ದಡದಲ್ಲಿ ಕುಳಿತೇ ಇರುತ್ತಾನೆ. ಎತ್ತುಗಳನ್ನು ಮೇಯಿಸಲು ಹೋಗುತ್ತಾನೆ. ರಾತ್ರಿಗೆ ಮನೆ ಸೇರುತ್ತಾನೆ.

ಕಪಾಹಿ ಬಹುಶಃ ಏನೂ ಆಗಿಯೇ ಇಲ್ಲ ಎಂಬಂತೆ ಹಾಗೂ ಆಕೆ ಮತ್ತು ಗುಲಚ್ ಬಹಳ ದಿನಗಳಿಂದಲೂ ಇದೇ ರೀತಿ ಇರುವಂತೆ, ತರಾ ಸಹ ಅವರ ಮನೆಯಲ್ಲಿ ಈಗಿರುವ ರೀತಿಯಲ್ಲೇ ಇರುವಂತೆ ಮಾತನಾಡುತ್ತಿರುತ್ತಾಳೆ.

ಫಾಲ್ಗುಣ ಮಾಸ ಕಳೆಯಿತು. ಚೈತ್ರ ಮಾಸವೂ ಕಳೆಯಿತು. ವೈಶಾಖ ಮಾಸ ಬಂತು. ಧನಶಿರಿಯಲ್ಲಿ ಹೊಸ ನೀರು ಹರಿಯತೊಡಗಿತು. ಗುಲಚ್‌ನ ಮನೆಯ ಹೊರಾಂಗಣದಲ್ಲಿ ಹೊಸ ಹುಲ್ಲು ಬೆಳೆಯತೊಡಗಿತು. ಜಮೀನು ತೇವದಿಂದ ಕೂಡಿ ಫಲವತ್ತಾಗಿತ್ತು.

ಕಪಾಹಿ ಬಾತುಕೋಳಿ ಮೊಟ್ಟೆ ಕಾವಿಗೆ ಕೂರಿಸಿ ಮರಿ ಮಾಡಿಸಿದಳು. ಅವುಗಳನ್ನು ಪಂಜರದಲ್ಲಿಟ್ಟಳು. ತರಾ ಸಹ ತಾನು ಸಾಕಿದ್ದ ಕೋಳಿ ಮರಿಗಳನ್ನು ಕಾಗೆ ಮತ್ತು ಹದ್ದುಗಳಿಂದ ರಕ್ಷಿಸಲು ಪ್ರಯತ್ನಿಸಿದಳು.

ಈ ಮಧ್ಯೆ ಗುಲಚ್ ಒಂದು ಸಾರಿ ಡಾಲಿಮ್ ಹಳ್ಳಿಗೆ ಹೋಗಿದ್ದ. ಆ ಹಳ್ಳಿಯ ಒಂದು ಮನೆಗೆ ತನ್ನ ತಾಯಿಯನ್ನು ಕರೆಯಿಸಿ ಹೇಳಿದ -"ಅಮ್ಮಾ, ನಿನ್ನನ್ನು ಕರೆದುಕೊಂಡು ಹೋಗಲು ಬಂದಿದ್ದೇನೆ. ನನ್ನ ಮನೆಗೆ ಬಾ." ಆತನ ತಾಯಿ ಕೋಪದಿಂದ ಬಡಬಡ ಮಾತಾಡುತ್ತಾ ಹೇಳಿದಳು - "ನಿನ್ನ ಮನೆಗೆ? ಯಾಕೆ? ಆ ರಖಾವುದಾರಳ ಕೈಯಿನ ಅನ್ನ

ತಿನ್ನೋಕೆ ನಿನ್ನ ಮನೆಗೆ ಬರಲೇ? ನಾನು ಎಷ್ಟೇ ಗತಿ ಕೆಟ್ಟರೂ ಅವಳ ಜೊತೆಯಲ್ಲಿ ಒಂದೇ ಮನೆಯಲ್ಲಿರೋಕೆ ಬರೋದಿಲ್ಲ."

ತಲೆ ತಗ್ಗಿಸಿಕೊಂಡು ಗುಲಚ್ ಹೇಳಿದ - "ತರಾ ಇರೋದಿಲ್ವೇ?"

"ಅವಳಿದ್ದರೆ ಏನಾಗುತ್ತೇ? ತಾಯಿಯಂತೆ ಮಗಳು. ಯಾವತ್ತೋ ಒಂದು ದಿನ ಅವಳೂ ಪರಾರಿಯಾಗುತ್ತಾಳೆ. ಆ ರಖಾವುದಾರಳನ್ನು ಮನೆಗೆ ಕರೆದುಕೊಂಡು ಬಂದು ಒಳ್ಳೆಯ ಕೆಲ್ಸ ಮಾಡಿದೆ. ಈಗ ನೀನೇ ಸುಖವಾಗಿರು. ನನ್ನ ಬಗ್ಗೆ ಯೋಚ್ನೇ ಮಾಡಬ್ಯಾಡ."

ಅವನಿಗೂ ಸಿಟ್ಟು ಬಂತು. ಆತ ಹೇಳಿದ - "ಬರದೆ ಇದ್ದರೆ ಇರು. ಬರಲೇ ಬ್ಯಾಡ. ಸೊಸೆ ಕೈಯಲ್ಲಿ ಮಾಡಿಸಿಕೊಂಡು ಊಟ ಮಾಡೋದು ನಿನ್ನ ಹಣೆಯಲ್ಲಿ ಬರೆಯಲಿಲ್ಲ."

"ಅವಳ ಕೈಯಿನ ಅನ್ನ ತಿನ್ನೋಕೆ ನನಗೇನು ದರದು?"- ಎಂದು ಆತನ ತಾಯಿ ಹೇಳಿದಳು.

ಯಾರು ಯಾರನ್ನು ಮದುವೆಯಾದರು? ಯಾರು ಯಾರ ಜೊತೆಯಲ್ಲಿ ಓಡಿ ಹೋದರು - ಈ ವಿಷಯವನ್ನು ಕುರಿತು ಯೋಚಿಸಲು ಡಾಲಿಮ್ ಹಳ್ಳಿಯ ಜನರಿಗೆ ಪುರಸೊತ್ತಿಲ್ಲ. ಮದುವೆ ಆಗೋದು ಮುಖ್ಯ. ಯಾರು ಯಾರನ್ನಾದರೂ ಮದುವೆ ಮಾಡಿಕೊಳ್ಳಲಿ, ತಪ್ಪೇನು? ಗುಲಚ್‌ನಿಗೆ ಈ ಮದುವೆಯಿಂದ ಏನೂ ಅನನುಕೂಲ ಆಗಿಲ್ಲ. ಇದು ಒಳ್ಳೆಯದೋ ಅಥವಾ ಕೆಟ್ಟದ್ದೋ - ಈ ವಿಷಯದ ಬಗ್ಗೆ ಯೋಚಿಸುವ ಆಗತ್ಯ ಆತನಿಗೆ ಬೀಳಲಿಲ್ಲ. ಮನೆಗೊಬ್ಬಳು ಗೃಹಿಣಿ ಬೇಕಾಗಿತ್ತು. ಕಪಾಹಿಯೋ ಅಥವಾ ಯಾರೋ, ಅವನನ್ನು ಯಾರು ಮಹಾರಾಜ ಮಾಡ್ತಾರೆ ?

ತನ್ನ ಮನೆಯಲ್ಲಿ ಗುಲಚ್‌ನಿಗೆ ಸ್ವಲ್ಪ ಸಂಕೋಚವಾಗುತ್ತೆ. ಆದರೆ ಪ್ರತಿಯೊಂದು ಕೆಲಸಕ್ಕೂ ತರಾಳನ್ನೇ ಕರೆಯುತ್ತಾನೆ.

"ತರಾ, ಒಂದು ಲೋಟ ನೀರು ತೆಗೆದುಕೊಂಡು ಬಾ."

"ತರಾ, ನನ್ನ ಅಂಗಿ ಒಗೆದು ಹಾಕು."

"ತರಾ, ಜೀವ ಇರೋ ಈ ಮಾಂಗೂರು ಮೀನುಗಳನ್ನು ಬಿಡಿಬಿಡಿಯಾಗಿಡು."

"ತರಾ, ದನಕರುಗಳಿಗೆ ನೀರು ಕುಡಿಸೋದು ಮರೆಯಬೇಡ."

ಆದರೂ ತರಾಳ ಜೊತೆಯಲ್ಲಿ ಆತ ಈಗಲೂ ಸ್ವಾಭಾವಿಕವಾಗಿ ಸಂಬಂಧ ಬೆಳಸಲಾಗಲಿಲ್ಲ. ತರಾಳ ಮೌನದಲ್ಲಿ ಒಂದು ಅವ್ಯಕ್ತ ಆಪಾದನೆ ಒಳಗೊಳಗೇ ಸದಾ ಆತನಿಗೆ ಗೋಚರಿಸುತ್ತದೆ. ಆತನಿಗೆ ಬಹಳ ಸಂಕೋಚವಾಗುತ್ತದೆ, ಉದ್ವೇಗವಾಗುತ್ತೆ. ಅದರಿಂದ ಮುಕ್ತನಾಗಲು ಆತ ತರಾಳನ್ನು ಕರೆಯುತ್ತಿರುತ್ತಾನೆ.

ಕಪಾಹಿ ಒಂದೇ ದಿನದಲ್ಲಿ ಗುಲಚ್‌ನನ್ನು ಸಂಬೋಧಿಸುವ ಧಾಟಿ ಬದಲಾಯಿಸಿದಳು. ಯಾವ ಗುಲಚ್‌ನನ್ನು ಆಕೆ ನೀನು ಎಂದು ಸಂಬೋಧಿಸುತ್ತಿದ್ದಳೋ ಇಂದು ಆತನನ್ನೇ ನೀವು ಎಂದು ಸಂಬೋಧಿಸುವುದರಲ್ಲಿ ಆಕೆಗೆ ಏನೂ ಕಷ್ಟ ಅನ್ನಿಸಲಿಲ್ಲ. ಕಪಾಹಿಯನ್ನು "ಅಕ್ಕಾ" ಎಂದು ಕರೆಯುತ್ತಿದ್ದ ಗುಲಚ್ ಸಹ ಅವಳ ಹೆಸರು ಹಿಡಿದು ಸಂಬೋಧಿಸುವುದಕ್ಕೆ ಏನೂ ಹಿಂಜರಿಯಲಿಲ್ಲ.

ಆದರೆ ತರಾ ಹಾಗೆ ಬದಲಾಯಿಸಿರಲಿಲ್ಲ. ನಿತ್ಯವೂ ಆತನನ್ನು "ಅಣ್ಣಾ" ಎಂದೇ ಸಂಬೋಧಿಸುತ್ತಿದ್ದಳು. ಚಿಕ್ಕಪ್ಪ ಎಂದು ಕೂಗುವ ಗೋಜಿಗೆ ಹೋಗಲಿಲ್ಲ. ಇತ್ತೀಚೆಗೆ ಗುಲಚ್‌ನನ್ನು ಯಾವ ರೀತಿಯೂ ಸಂಬೋಧಿಸದೇ ಹಾಗೆಯೇ ಕೂಗುತ್ತಾಳೆ. "ನೀವು"

ಎಂದು ಹೇಳುವುದೂ ಇಲ್ಲ. 'ತಾವು' ಎಂದೂ ಹೇಳುವುದಿಲ್ಲ. ಅಣ್ಣಾ ಎಂದೂ ಕರೆಯುವುದೂ ಇಲ್ಲ. ಚಿಕ್ಕಮ್ಮ ಎಂದು ಸಹ ಕರೆಯುವುದಿಲ್ಲ. ಹೇಗೋ ತಿರುಗು ಮುರುಗು ಮಾಡಿ ಕರೆಯುತ್ತಾಳೆ. ಮರೆಯಲಾಗದ ಸಂಕೋಚ ಮಾತ್ರ ಅವಳನ್ನು ಬಾಧಿಸುತ್ತದೆ.

ಇಷ್ಟಾದರೂ ಗುಲಬ್ ಬಗೆಗೆ ಅವಳಿಗಿದ್ದ ಗೌರವವೇನೂ ಕಡಿಮೆಯಾಗಿಲ್ಲ. ಅದು ದಿನೇ ದಿನೇ ಹೆಚ್ಚಾಗುತ್ತಾ ಮತಷ್ಟುಘನೀಭೂತವಾಯಿತು. ಸ್ಪಷ್ಟವಾಗಿ ಏನೂ ಹೇಳದಿದ್ದರೂ ಗುಲಬ್‌ನ ಸೌಕರ್ಯದ ಬಗ್ಗೆ ಆಕೆ ಸಂಪೂರ್ಣವಾಗಿ ಗಮನ ವಹಿಸುತ್ತಾಳೆ. ಆತನ ಪಂಚೆ-ಅಂಗಿ ಒಗೆದು ಹಾಕುತ್ತಾಳೆ. ಹರಿದಿರುವ ಬಟ್ಟೆ ಹೊಲಿಯುತ್ತಾಳೆ. ಅವನ ರುಚಿಗೆ ಅನುಗುಣವಾಗಿ ಅಡಿಗೆ ಮಾಡುತ್ತಾಳೆ. ಆತನ ಎಲ್ಲ ಕೆಲಸಕಾರ್ಯಗಳಲ್ಲೂ ಸಹಾಯ ಮಾಡುತ್ತಾಳೆ. ಗುಲಬ್‌ನಿಗೆ ತುಂಬಾ ಸಂತೋಷ. ಆತನಲ್ಲಿ ಉಪಕಾರ ಸ್ಮರಣೆ ಇದೆ. ಆದರೆ ಸ್ಪಷ್ಟವಾಗಿ ಏನೂ ಹೇಳುವುದಿಲ್ಲ. ಹೇಳಲು ಸಾಧ್ಯವೂ ಇಲ್ಲ.

ದನಕರುಗಳನ್ನು ಮೇಯಿಸಲು ಬಯಲಿಗೆ ಹೋದಾಗ ಅಕಸ್ಮಾತ್ತಾಗಿ ಮಳೆ ಬಂದರೆ ಆಕೆಯೇ 'ಜಾಟಿ' ತೆಗೆದುಕೊಂಡು ಓಡಿ ಹೋಗಿ, ಕೊಟ್ಟು ಬರುತ್ತಾಳೆ. ಗುಲಬ್‌ನ ಕಾಲಿಗೆ ಮುಳ್ಳು ಎಂದಾದರೂ ತಗುಲಿದರೆ ಆಕೆಯೇ ಹತ್ತಿರದಲ್ಲಿ ಚಕ್ಕಳಬಕ್ಕಳ ಹಾಕಿ ಕುಳಿತುಕೊಂಡು ಮುಳ್ಳನ್ನು ತೆಗೆಯುತ್ತಾಳೆ. ಚಾಕು ಹಿಡಿದು ಏನಾದರೂ ಕೆಲಸ ಮಾಡುವಾಗ ಆತನ ಕೈಗೆ ಗಾಯವಾದರೆ ಆಕೆಯೇ ಸ್ವಲ್ಪ ಉಪ್ಪು-ಅರಿಸಿನ ಬೆರಸಿ ಕಟ್ಟುತ್ತಾಳೆ. ಆತ ಬಿಸಿಲಿನಲ್ಲಿ ಎಲ್ಲಿಂದಾದರೂ ಬಂದರೆ ಆಕೆಯೇ ಹತ್ತಿರ ಕುಳಿತು ಬೀಸಣಿಗೆಯಿಂದ ಗಾಳಿ ಬೀಸುತ್ತಾಳೆ. ಆತ ಆರಾಮವಾಗಿರಲು ಆಕೆ ಆತನಿಗೆ ನೆರಳಿನೋಪಾದಿಯಲ್ಲಿ ಇರುತ್ತಾಳೆ.

ಆದರೆ ಆಕೆ ಬಾಯಿಬಿಟ್ಟು ಏನೂ ಹೇಳುವುದಿಲ್ಲ. ಮೌನವಾಗಿರುತ್ತಾಳೆ. ಆ ಕೆಲಸ ಈ ಕೆಲಸ ಮಾಡೋಕ್ಕೆ ಹೇಳಿ, ಲೋಕಾಭಿರಾಮವಾಗಿ ಏನಾದರೂ ಕೇಳುತ್ತಾ ಆಕೆಯೊಡನೆ ಒಂದೆರಡು ಮಾತಾಡಲು ಪ್ರಯತ್ನಿಸುತ್ತಾನೆ. ಆದರೆ ಆಕೆ ಎಷ್ಟು ಉತ್ತರ ಹೇಳಬೇಕೋ ಅಷ್ಟನ್ನೇ ಹೇಳುತ್ತಾಳೆಯೇ ಹೊರತು ಇನ್ನೇನೂ ಮಾತನಾಡುವುದಿಲ್ಲ. ಬಹುಶಃ ನಗುವುದನ್ನು ಆಕೆ ಮರೆತೇ ಇದ್ದಾಳೆ. ಗುಲಬ್ ಸೋಲುತ್ತಾನೆ. ಕಪಾಹಿ ಈ ವಿಷಯದ ಕಡೆ ಗಮನ ಕೊಡುವುದಿಲ್ಲ. ಯಾರು ನಕ್ಕರು? ಯಾರು ಮಾತಾಡಿದರು? ಅದನ್ನು ನೋಡೋದಕ್ಕೆ ಅವಳಿಗೆ ಪುರಸೊತ್ತಿಲ್ಲ. ಆಕೆ ಹೊಸ ಮನೆಯ ನಿರ್ವಹಣೆ ವಹಿಸಿಕೊಂಡಿದ್ದಾಳೆ. ಒಬ್ಬನೇ ಗಂಡಸು ಏನು ಮಾಡೋಕಾಗುತ್ತೆ? ಎಷ್ಟು ಅಂತ ಮಾಡಬಲ್ಲ? ಎಲ್ಲರೂ ಅಲ್ಪಸ್ವಲ್ಪ ಮಾಡಿದಾಗ ಮಾತ್ರ ಏನಾದರೂ ಕೈಗೂಡುತ್ತೆ.

ತರಾಳ ಬಗ್ಗೆ ಸಂಕೋಚವಿದ್ದರೂ ಗುಲಬ್‌ಗೆ ನೆಮ್ಮದಿಯಿತ್ತು. ಆತನಿಗೆ ಊಟಕ್ಕೆ ತೊಂದರೆಯಿಲ್ಲ. ಈಗ ಆತ ಸ್ವತಂತ್ರ. ತನ್ನ ಕಷ್ಟಸುಖಗಳನ್ನು ಹೇಳಿಕೊಳ್ಳಲು ಒಬ್ಬ ಹೆಂಗಸು ಸಿಕ್ಕಿದ್ದಾಳೆ. ಅಷ್ಟೆ ಅಲ್ಲದೆ ಈ ಹೊಸ ಸಂಸಾರ ಹೂಡುವಿಕೆಗೆ ಆತನೇ ಕಾರಣಕರ್ತ. ಆತನೇ ಪಾಲಕ, ಅವನಿಗೆ ಆಜ್ಞಾಪಿಸುವವರು ಯಾರೂ ಇಲ್ಲ.

ಈಗ ಆತ ಹೊಲ-ಗದ್ದೆಗೆ ಹೋಗಿ ಎಷ್ಟು ಕೆಲಸ ಮಾಡಬೇಕೆನ್ನಿಸುತ್ತೋ ಅಷ್ಟು ಮಾತ್ರ ಮಾಡುತ್ತಾನೆ. ಅಥವಾ ಹಾಗೆಯೇ ಕಾಲ ಕಳೆಯುತ್ತಾನೆ. ಬೇಕಾದಷ್ಟು ಹೊತ್ತು ಬಾನಿನ ಕಡೆ ನೋಡುತ್ತಾ ಧನಸಿರಿಯ ದಡದಲ್ಲಿ ಕುಳಿತಿರುತ್ತಾನೆ. ಮರಗಿಡಗಳ ನಡುವೆ ಹಾಯಾಗಿ ಅಡ್ಡಾಡುತ್ತಾನೆ.

ರಾತ್ರಿಯ ಬೆಳದಿಂಗಳಿನಲ್ಲಿ ಕಪಾಹಿ ಮತ್ತು ಆತ ಅಂಗಳದಲ್ಲಿ ಚಾಪೆ ಹಾಸಿಕೊಂಡು ಕುಳಿತುಕೊಳ್ಳುತ್ತಾರೆ. ತರಾ ಒಳಗಡೆ ಅಡಿಗೆ ಮಾಡುತ್ತಾಳೆ. ಸಣ್ಣಪುಟ್ಟ ವಸ್ತುಗಳ ಅಭಾವದ ಬಗ್ಗೆ ಮತ್ತು ಭವಿಷ್ಯದ ಬಗ್ಗೆ ಸಹ ಅವರು ಯೋಚಿಸುತ್ತಾರೆ.

ಒಂದು ಕೊಳ ಕಟ್ಟಿಸಬೇಕು.

ಬೇಸಾಯಕ್ಕಾಗಿ ಸಾಧ್ಯವಾದರೆ ಒಂದು ಕೋಣ ಕೊಂಡುಕೊಳ್ಳಬೇಕು.

ಆ ಕಡೆ ಬೂರಗದ ಮರದ ಕೆಳಭಾಗದ ಕಡೆ ಇರೋ ಜಮೀನಿನಲ್ಲಿ ಬಾಳೆ ಫಸಲಿಗಿಂತ ಬತ್ತದ ಬೆಳೆ ತೆನ್ನಾಗಿ ಆಗುತ್ತೆ. ' ಸುವಾಗಮಣಿ' ಬತ್ತವನ್ನು ಇನ್ನಷ್ಟು ಕೊಂಡುಕೊಳ್ಳಬೇಕು.

ಕೆಲವು ಸಾರಿ ಗಟ್ಟಿಯಾಗಿ, ಕೆಲವು ಸಾರಿ ಪಿಸುಗುಟ್ಟುತ್ತಾ ಸರಸ-ಸಲ್ಲಾಪ ಮಾಡುತ್ತಾರೆ. ಜೀವನದಲ್ಲಿ ಸಂಭವಿಸಿದ ಅಚಿಂತ್ಯ ಘಟನೆಗಳ ಬಗ್ಗೆ ಚರ್ಚೆ ಮಾಡಿದಾಗ ಅವರಿಗೆ ರೋಮಾಂಚನವಾಗುತ್ತದೆ.

ಅವರಿಗೆ ಬೆಳದಿಂಗಳು ಹಾಯಾಗಿದೆ. ಆ ಕಡೆಯಿಂದ ಬೀಸುವ ಗಾಳಿಯಲ್ಲಿ ಆತ್ಮೀಯತೆ ಇದೆ.

ತರಾ ಅವರ ಮಾತನ್ನು ಕಿವಿಗೊಟ್ಟು ಕೇಳಿಸಿಕೊಳ್ಳಬಹುದು. ಆದರೆ ಆಕೆ ಆ ಮಾತುಕತೆಯಲ್ಲಿ ಭಾಗವಹಿಸುವುದಿಲ್ಲ. ಆಕೆ ತನ್ನ ಮನಸ್ಸಿನ ಮಾತನ್ನು ತನಗೇ ಹೇಳಿಕೊಳ್ಳುತ್ತಾಳೆ. ಆಕೆಯ ಮಾತನ್ನು ಗಾಳಿ ಕೇಳಿಸಿಕೊಳ್ಳುತ್ತದೆ, ರಾತ್ರಿ ಕೇಳಿಸಿಕೊಳ್ಳುತ್ತದೆ; ಜಗತ್ತಿನ ಬೇರೆ ಯಾರಿಗೂ ಕೇಳಿಸುವುದಿಲ್ಲ.

ಒಂದು ಪುಟ್ಟ ಸಂಸಾರ. ಶಾಂತಿಯಿಂದ ಕೂಡಿದ ಜೀವನ. ಸುಖ-ವಿಲಾಸದ ಒಂದು ಕಿರುಗನಸು. ಬಹಳ ಆಸೆಯಿದೆ. ಸಾಧಾರಣವಾಗಿ ವ್ಯವಸ್ಥಿತವಾಗಿದೆ.

"ಇದೇ ಅಂಗಳದ ಆ ಮೂಲೆಯಲ್ಲಿ ಎರಡು ಹೂವಿನ ಗಿಡಗಳನ್ನು ನೆಡುತ್ತೇನೆ" ಎಂದು ಆ ಜಾಗದ ಕಡೆ ಕೈ ಕಪಾಹಿಗೆ ಗುಲಬ್ ತಿಳಿಸಿದ.

"ಅಹುದು"- ಕಪಾಹಿ ಚುಟುಕು ಉತ್ತರ ನೀಡಿದಳು. ಅವಳು ಆ ಸಮಯದಲ್ಲಿ ಹೂವಿನ ವಿಷಯವನ್ನು ಕುರಿತು ಯೋಚಿಸುತ್ತಿರಲಿಲ್ಲ.

ಅದನ್ನು ತರಾ ಕೇಳಿಸಿಕೊಂಡಳು. ಹೂವಿನ ಗಿಡಗಳನ್ನು ನೆಟ್ಟಮೇಲೆ ನಿತ್ಯವೂ ನೀರು ಹಾಕಬೇಕೆಂದು ಆಕೆ ಯೋಚಿಸುತ್ತಾಳೆ. ಬಾತುಕೋಳಿ, ಪಾರಿವಾಳ, ನಾಯಿ, ಬೆಕ್ಕು ಇವುಗಳನ್ನು ಕಂಡರೆ ಅವಳಿಗೆ ತುಂಬಾ ಪ್ರೀತಿ. ಅವುಗಳನ್ನು ಎತ್ತಿಕೊಂಡು ಮುದ್ದಾಡುತ್ತಾಳೆ. ಅವುಗಳ ಜೊತೆಯಲ್ಲಿ ಮಾತನಾಡುತ್ತಾಳೆ.

ಕಪಾಹಿ ಮೊದಲಿಗಿಂತ ದಪ್ಪಗಾಗಿದ್ದಾಳೆ. ನೋಡಲೂ ಸುಂದರವಾಗಿದ್ದಾಳೆ. ಅವಳ ಮುಖ ಅರಳಿದೆ. ಅವಳ ಉತ್ಸಾಹ ಹೆಚ್ಚಿದೆ. ಆಕೆಯ ಮುಖದಲ್ಲಿ ಸದಾ ನಗೆ ಸೂಸುತ್ತದೆ. ಅವಳನ್ನು ಕಣ್ತುಂಬ ನೋಡಿ ಗುಲಬ್ ಆನಂದಪಡುತ್ತಾನೆ. ತರಾ ಎಲ್ಲಿಗಾದರೂ ಹೊರಟರೆ - "ಕಳೆ ಉಕ್ಕುತ್ತೆ. ಏನು ಹಚ್ಚಿದ್ದೀಯೇ?" ಎಂದು ಗುಲಬ್ ಕೇಳೇ ಬಿಡುತ್ತಾನೆ.

ಕಪಾಹಿಯ ಮುಖ ನಾಚಿಕೆಯಿಂದ ಕೆಂಪಾಯಿತು. ಆಕೆಯ ಕಣ್ಣುಗಳು ಹನಿಗೂಡಿದವು.

ತರಾ ಸಹ ಮೊದಲಿಗಿಂತಲೂ ದಪ್ಪಗೆ ಮತ್ತು ಸುಂದರವಾಗಿದ್ದಾಳೆ. ಆಕೆಯ ಕೈಕಾಲು ದುಂಡಗೆ ಅಂದವಾಗಿವೆ. ಆಕೆಯ ಕೆನ್ನೆ ಗುಲಾಬಿ ಹೂವಿನಂತಿವೆ. ಆಕೆಯ ತುಟಿಗಳು ಸಹ ಕೆಂಪಾಗಿವೆ.

ಗುಲಬ್ ಬಹಳ ಹೊತ್ತಿನವರೆಗೂ ಆಕೆಯನ್ನು ದೃಷ್ಟಿಸಿ ನೋಡಲಾರ. ಆಗ ಆತ ಬೇರೆ ಕಡೆ ದೃಷ್ಟಿ ಹಾಯಿಸುತ್ತಾನೆ. ಇದನ್ನು ತರಾ ಸಹ ಅರ್ಥ ಮಾಡಿಕೊಳ್ಳುತ್ತಾಳೆ. ಆಕೆಯ ಮುಖ ಸಹ ನಾಚಿಕೆಯಿಂದ ಕೆಂಪೇರುತ್ತದೆ.

ಧನಶಿರಿಯ ದಡದಲ್ಲಿ ಜೀವನ ನಿಧಾನ ನಿಧಾನವಾಗಿ ಸಾಗುತ್ತಿತ್ತು. ಗುಲಬ್‌ನ ಕುಟುಂಬದ ಜೀವನ ಸಹ ಸಾಗುತ್ತಿತ್ತು.

## ಇಪ್ಪತ್ತು

ಪಾಹಿಯ ಬಯಲಿನಲ್ಲಿ ಮೈದಾನದ ಮಧ್ಯೆ ಒಂದು ಕಡೆ ಪ್ರತ್ಯೇಕವಾಗಿ ಮನೆ ಇದೆ. ಅದೇ ಮನೆ ನಿಧಾನವಾಗಿ ಖಾಯಂ ಮನೆ ಆಗುತ್ತೆ. ಅಲ್ಲೊಂದು ಇಲ್ಲೊಂದು ಹಾಕಿದ್ದ ಬಾಳೆ ಗಿಡ ಮತ್ತು ಅಡಿಕೆ ಮರಗಳು ಹಸಿರಿನಿಂದ ಕೂಡಿ ಸೊಂಪಾಗಿದೆ. ಪಾಹಿಯ ಮನೆ, ಪಾಹಿಯ ಮನೆಯೇ ಆಗಿ ಇರುವುದಿಲ್ಲ. 'ಪಾಹಿ' ಊರಾಚೆಯ ಅನ್ಯರ ಜಾಗ ಎಂದು ಭಾವಿಸಿದ್ದ ಮನಸ್ಸು ನಿಧಾನ ನಿಧಾನವಾಗಿ ಅದು ತನ್ನ ಸ್ವಂತ ಸ್ಥಳವೆಂದು ಒಪ್ಪಿಕೊಳ್ಳುತ್ತಿದೆ. ಹೊಸದಾಗಿ ಆಬಾದು ಮಾಡುವ ಜಮೀನಿನ ಮೇಲೆ ಹೊಸ ಜೀವನದ ಹೊರೆ ಬಿದ್ದಿದೆ.

ಆಗಿಂದಾಗ್ಗೆ ಗುಲಬ್‌ನ ಮನೆಗೆ ತಿಖಿರ್ ಬರುತ್ತಾನೆ. ಕಷ್ಟಸುಖದ ಮೂರು ನಾಲ್ಕು ಮಾತನಾಡುತ್ತಾ ಕುಳಿತಿರುತ್ತಾನೆ. ತಿಖಿರ್ ಬಂದಾಗ ಅವನೆದುರು ತರಾ ಹೆಚ್ಚಿಗೆ ಬರೋಲ್ಲ. ತಿಖಿರ್ ಅವಿವಾಹಿತ ಎಂಬುದು ಅವಳಿಗೆ ಗೊತ್ತು. ಇಂಥವರ ಜೊತೆಯಲ್ಲಿ ಸಲಿಗೆಯಿಂದಿರುವುದು ಸರಿಯಲ್ಲ. ಅದರ ಅವಶ್ಯಕತೆಯೂ ಇಲ್ಲ. ತಿಖಿರ್‌ನೊಡನೆ ಕಪಾಹಿ ಆತ್ಮೀಯತೆಯಿಂದ ಮಾತನಾಡುತ್ತಾಳೆ. ಅವನ ಬಗ್ಗೆ ಕೃತಜ್ಞಳಾಗಿದ್ದಾಳೆ. ಏಕೆಂದರೆ ವಿವಾಹದಲ್ಲಿ ಬೀಗರನ್ನು ಸ್ವಾಗತಿಸುವ ಸಂಪ್ರದಾಯದಂತೆ ಆತನೇ ಅವಳನ್ನು ಅಂದು ಘಟ್ಟದಲ್ಲಿ ಸ್ವಾಗತಿಸಿ ಗುಲಬ್ ಮನೆಗೆ ಕರೆದುಕೊಂಡು ಬಂದಿದ್ದ. ತಿಖಿರ್ ಶಾಂತ ಸ್ವಭಾವದ ಹುಡುಗ, ಮುದ್ದುಮುದ್ದಾಗಿದ್ದಾನೆ. ತರುಣನಾದರೂ ಚಂಚಲ ಸ್ವಭಾವವಿಲ್ಲ. ಗಂಭೀರವಾಗಿರುತ್ತಾನೆ. ಆದುದರಿಂದಲೇ ಆತನೊಡನೆ ಗುಲಬ್ ಸ್ನೇಹ ಬೆಳಸಿದ್ದಾನೆ. ಗುಲಬ್ ಸಹ ಗಂಭೀರ ಸ್ವಭಾವದವನು. ಹೆಚ್ಚಿಗೆ ಮಾತನಾಡುವುದಿಲ್ಲ. ಪುರುಷರು ಸ್ವಲ್ಪ ಗಂಭೀರವಾಗಿರಬೇಕು.

ಒಮ್ಮೊಮ್ಮೆ ಭೀಮ ಬರುತ್ತಾನೆ. ಆತನ ದನಕರುಗಳ ಬಗ್ಗೆ ವಿಚಾರಿಸಿಕೊಳ್ಳುತ್ತಾನೆ. ಮೊದಲಿಗೆ ಗುಲಬ್‌ನ ದನಕರುಗಳನ್ನು ಅವನೇ ನೋಡಿಕೊಳ್ಳುತ್ತಿದ್ದ. ಕೆಲವು ಸಾರಿ ಮೊಸರು ತೆಗೆದುಕೊಂಡು ಬರುತ್ತಾನೆ ಅಥವಾ ತುಪ್ಪ ತರುತ್ತಾನೆ. ತರಾಳ ಬಗ್ಗೆ ಆತನಿಗೆ ಸ್ನೇಹವಿದೆ. ಆದುದರಿಂದ ಅವಳ ಬಗ್ಗೆಯೂ ಸಹ ವಿಚಾರಿಸಿಕೊಳ್ಳುತ್ತಾನೆ.

ಕೆಲವು ಸಾರಿ ಅಕಸ್ಮಾತ್ತಾಗಿ ಬೆಳಗಿನ ಹೊತ್ತು ಅಥವಾ ಮಧ್ಯಾಹ್ನದ ವೇಳೆಯಲ್ಲಿ ಚೇನಿಮಾಇ ಬರುತ್ತಾಳೆ. ಅವಳು ಗುಲಬ್‌ನೊಂದಿಗೆ ಹೆಚ್ಚಿಗೆ ಮಾತನಾಡುವುದಿಲ್ಲ. ಕಪಾಹಿ ಮತ್ತು ತರಾಳೊಡನೆ ಮಾತನಾಡುತ್ತಾಳೆ. ಚೇನಿಮಾಇ ಕಂಡರೆ ತರಾಳಿಗೆ ತುಂಬಾ ಇಷ್ಟ.

ಚೇನಿಮಾಣಿಯಲ್ಲಿ ಹೆಚ್ಚು ಬದಲಾವಣೆಯಾಗಿದೆ. ಅವಳು ಪ್ರಾಯದ ಹೆಣ್ಣಾದರೂ ಮಧ್ಯವಯಸ್ಕಳಂತೆ ಕಾಣುತ್ತಾಳೆ. ಅವಳದು ಬಡ ಕುಟುಂಬ. ಅದಲ್ಲದೆ ಅವಳ ಗಂಡ ರೋಗಿಷ್ಠ. ದಿನೇ ದಿನೇ ಅವನ ಕಾಯಿಲೆ ಜಾಸ್ತಿಯಾಗುತ್ತಿದೆ. ಸರಿಯಾದ ಚಿಕಿತ್ಸೆ ಮಾಡಿಸಲು ದುಡ್ಡಿನ ಕೊರತೆ. ಅಲ್ಲಿ ಸರಿಯಾದ ಚಿಕಿತ್ಸೆ ದೊರೆಯುವುದೂ ಇಲ್ಲ. ಬಹಳ ಮಂದಿ ಆತನನ್ನು ಪಟ್ಟಣದ ಆಸ್ಪತ್ರೆಗೆ ಕರೆದುಕೊಂಡು ಹೋಗಿ ತೋರಿಸಲು ಸಲಹೆ ನೀಡುತ್ತಾರೆ. ಆದರೆ ಎಲ್ಲ ದುಡ್ಡಿನ ಮೇಲೆ ನಿಂತಿದೆ. ತಾನೇ ಆಕೆ ಏನೂ ಹೇಳಿಕೊಳ್ಳದಿದ್ದರೂ ಚೇನಿಮಾಣಿ ಮುಖ ನೋಡಿ ಆಕೆಯ ಮನಸ್ಸು ನೋವಿನಿಂದ ಕೂಡಿದೆ ಎಂಬುದನ್ನು ಊಹಿಸಬಹುದಾಗಿತ್ತು. ಅವಳ ನಗು ಒಂದು ರೀತಿ ಒಣನಗೆ. ವಿಷಾದದಿಂದ ಕೂಡಿದ್ದು.

ಅವಳ ಸ್ಥಿತಿ ಕಂಡು ಗುಲಬ್‌ನಿಗೆ ದುಃಖವಾಗುತ್ತೆ. ಅವಳ ಬಗ್ಗೆ ಸ್ನೇಹ ಸಹ ಮೂಡುತ್ತೆ. ಆದರೆ ಆತ ಬಾಯಿಬಿಟ್ಟು ಏನೂ ಹೇಳುವುದಿಲ್ಲ. ಆತ ಮನಸ್ಸಿನಲ್ಲೇ ಯೋಚಿಸುತ್ತಾನೆ. ಆತನ ಗದ್ದೆಯಲ್ಲಿ ಚೆನ್ನಾಗಿ ಬೆಳಸು ಬಂದರೆ ಸ್ವಲ್ಪ ಹಣ ಕೈಗೆ ಸಿಗಬಹುದು. ಆಗ ಆತ ಗುಟ್ಟಾಗಿ ಚೇನಿಮಾಣಿಗೆ ಸಹಾಯ ಮಾಡಬಲ್ಲ. ಇದು ಅವನ ಕರ್ತವ್ಯ.

ಕಪಾಹಿ ಸಹ ಕೆಲವು ಸಾರಿ ಚೇನಿಮಾಣಿ ಮನೆಗೆ ಹೋಗುತ್ತಾಳೆ. ಆದರೆ ತರಾ ಹೋಗುವುದಿಲ್ಲ. ತಮ್ಮ ಮನೆಬಿಟ್ಟು ಆಕೆ ಎಲ್ಲಿಗೂ ಹೋಗುವುದಿಲ್ಲ. ಹೋಗು ಎಂದು ಹೇಳಿದರೂ ಹೋಗುವುದಿಲ್ಲ. ಚೇನಿಮಾಣಿ ಕರೆದರೂ ಸಹ ನೀರಸ ನಗೆ ಬೀರಿ ತಪ್ಪಿಸಿಕೊಳ್ಳುತ್ತಾಳೆ. ಆದರೂ ಗುಲಬ್‌ನ ಕುಟುಂಬಕ್ಕೂ ಸಿಪರಿಯಾ ಹಳ್ಳಿಗೂ ಆತ್ಮೀಯ ಸಂಬಂಧ ಬೆಳೆಯಿತು.

ಗುಲಬ್ ನಮಾಜು ಮಾಡುವುದನ್ನು ಎಂದೂ ಕಲಿಯಲಿಲ್ಲ. ಆತ ಕಲಿಯಲಾರದೆ ಹೋದ. ಅದಕ್ಕೋಸ್ಕರ ಅವನಿಗೇನೂ ದುಃಖವಿಲ್ಲ. ಹಳ್ಳಿಯ ಎಷ್ಟು ಮಂದಿಗೆ ನಮಾಜು ಮಾಡಲು ಬರುತ್ತೆ? ಆತ ಶುಕ್ರವಾರದಂದೂ ಸಹ ನಮಾಜಿಗೆ ಹೋಗುವುದಿಲ್ಲ. ಕೇವಲ ಈದ್ ಮತ್ತು ಬಕ್ರೀದ್ ದಿನ ಮಸೀದಿಗೆ ಹೋಗುತ್ತಾನೆ. ಏನೂ ಗೊತ್ತಿಲ್ಲದಿದ್ದರೂ ಬೇರೆಯವರ ಜೊತೆಯಲ್ಲಿ ಕೂತೇಳುವ ವ್ಯಾಯಾಮ ಮಾಡುತ್ತಾನೆ. ಕಪಾಹಿ ಸಹ ಶುಕ್ರವಾರದಂದು ಆತ ಮಸೀದಿಗೆ ಹೋಗಲಿ ಎಂದು ನೆನಪು ಮಾಡಿಕೊಡುತ್ತಾಳೆ. ಮೊದಲಿಗೆ ಕಲಿಯದಿದ್ದರೆ ಬೇಡಿ. ಈಗ ಸಂಸಾರ ಹೂಡಿದ್ದೀರಿ. ಅಲ್ಲಾ-ರಸೂಲ್ ಅವರ ಸ್ಮರಣೆ ಮಾಡಬೇಕು. ಇಲ್ಲದಿದ್ದರೆ ಹಳ್ಳಿಯವರು ಏನು ಅಂದು ಕೊಳ್ಳುತ್ತಾರೆ? ಎಂದು ಹೇಳುತ್ತಾಳೆ.

ಆತ ಏನೂ ಉತ್ತರ ಕೊಡುವುದಿಲ್ಲ. ನಮಾಜು ಮಾಡೋಕೆ ಬರೊಲ್ಲ ಮತ್ತು ಕಲಿಯೋಕೆ ಸಮಯವಿಲ್ಲವೆಂಬ ವಿಷಯದ ಬಗ್ಗೆ ಸಹ ಆತ ಕಪಾಹಿಗೆ ಏನೂ ಹೇಳುವುದಿಲ್ಲ.

ಮಸೀದಿಗೆ ಹೋಗದೇ ಇದ್ದರೆ ಕಪಾಹಿಯೇನೂ ವಿಶೇಷವಾಗಿ ಆಕ್ಷೇಪಿಸುವುದಿಲ್ಲ. ಹಳ್ಳಿಯಲ್ಲಿ ಎಷ್ಟು ಜನ ನಮಾಜು ಮಾಡುತ್ತಾರೆ? ತರುಣ, ವಯಸ್ಸಾದಂತೆಲ್ಲಾ ಎಲ್ಲವನ್ನೂ ಮಾಡುತ್ತಾನೆ. ಅದಲ್ಲದೆ ಮಸೀದಿ ಸಾಕಷ್ಟು ದೂರ ಇದೆ. ಹೋದರೆ ಅರ್ಧದಿನ ಕಳೆದು ಹೋಗತ್ತೆ. ಒಮ್ಮೊಮ್ಮೆ ಚೇನಿಮಾಣಿ ಮನೆಗೆ ಗುಲಬ್ ಹೋಗುತ್ತಾನೆ. ಹಾಗೆಯೇ ಯೋಗಕ್ಷೇಮ ವಿಚಾರಿಸಿಕೊಂಡು ಬರುತ್ತಾನೆ. ಕೊಟ್ಟರೆ ಒಂದು ಗುಟುಕು ಟೀ ಕುಡಿದು ಬರುತ್ತಾನೆ. ಕೆಲಾಈ ಹೇಗಿದ್ದಾನೆ ?

ಏನು ಚಿಕಿತ್ಸೆ ನಡೆಯುತ್ತಿದೆ? ಎಂದು ವಿಚಾರಿಸುತ್ತಾನೆ. ಅವರ ಮನೆಗೆ ಹೋದರೆ

ಚೇನಿಮಾಇ ಸಹ ಗುಲಬ್‌ನ ಜೊತೆಯಲ್ಲಿ ಒಂದೆರಡು ಮಾತನಾಡುತ್ತಾಳೆ. ಮಾಮೂಲಿ ಮನೆಯ ಕಷ್ಟಸುಖದ ಮಾತು. ಇಬ್ಬರೂ ಆದಷ್ಟು ಒಬ್ಬರಿಂದ ಒಬ್ಬರು ದೂರ ಇರಲು ಪ್ರಯತ್ನಿಸುತ್ತಾರೆ. ಇಬ್ಬರ ಜೀವನದ ಗತಿ ಇಂದು ಬದಲಾಗಿದೆ. ಈ ಬೇರ್ಪಡೆ ಅಸಾಧ್ಯವಾದರೂ ಆಗಿರದಿದ್ದರೆ ವಿಧಿಯಿಲ್ಲ.

ಮತ್ತೊಂದು ವಿಷಯ ಗುಲಬ್ ಮತ್ತು ಚೇನಿಮಾಇ ಒಬ್ಬರನ್ನೊಬ್ಬರು ವಿರೋಧಿಸಿ ಆಕ್ಷೇಪಿಸುವುದಿಲ್ಲ. ಇಂದು ಅವರ ಸಂಬಂಧ ಲೆಕ್ಕಕ್ಕೇ ಇಲ್ಲದಾಗಿದೆ. ಅಷ್ಟೇ ಅಲ್ಲದೆ ಅವರ ಹಳೆಯ ಸಂಬಂಧ ಮೋಲೋಕಾ, ಕೆಲಾಈ, ತಿಖಿರ್ -ಯಾರಿಗೂ ಗೊತ್ತಿಲ್ಲ.

ಆಷಾಢದ ಮಧ್ಯಾವಧಿ.

ಬೇಸಾಯದ ಕೆಲಸ ಆರಂಭವಾಗಿದೆ. ಅಲ್ಲಿನ ಜನರು ಆಷಾಢದ ಆರಂಭದಲ್ಲೇ ಕೆಲವು ಗದ್ದೆಗಳ ನಾಟಿ ಹಾಕತೊಡಗುತ್ತಾರೆ. ಆದರೆ ಕೆಲವು ಗದ್ದೆಗಳ ನಾಟಿ ಆಶ್ವೀಜ ಮಾಸದವರೆಗೂ ಆಗುತ್ತೆ. ಈ ಜಮೀನು ನದಿಯ ಬುಡದಲ್ಲೇ ಇರೋ ತಗ್ಗಾದ ಜಮೀನು.

ಕಪಾಹಿ ಮತ್ತು ತರಾ ಇಬ್ಬರೂ ನಾಟಿ ಹಾಕೋದಕ್ಕೆ ಬತ್ತದ ಪೈರು ಕೀಳಲು ಹೋಗಿದ್ದರು. ಉರಿಬಿಸಿಲು. ಸೂರ್ಯ ಸ್ವಲ್ಪ ಪಶ್ಚಿಮದ ಕಡೆ ತಿರುಗಿದ್ದ.

ಅಂಗಳದ ಒಂದು ಮೂಲೆಯಲ್ಲಿ ಕುಳಿತು ಗುಲಬ್ ಎತ್ತುಗಳನ್ನು ಹೊಡೆಯುವ ಬಾರುಗೋಲು ರೆಡಿ ಮಾಡುತ್ತಿದ್ದ.

ಚಂದ್ರನ ಜೊತೆಯಲ್ಲಿ ಒಬ್ಬ ವ್ಯಕ್ತಿ ಆತನ ಅಂಗಳಕ್ಕೆ ಬಂದ.

"ಏನು ಗುಲಬ್? ಚೆನ್ನಾಗಿದ್ದಿಯೇ ತಾನೇ?" - ಚಂದ್ರ ಕೇಳಿದ.

"ಹೂಂ, ಏನು ಬಂದದ್ದು? ಬಾ ಕುಳಿತುಕೊ. ನಿನ್ನ ಜೊತೆಯಲ್ಲಿ ಬಂದಿರೋ ಇವರು ಯಾರು?"

ಚಂದ್ರ ಮತ್ತು ಇಬ್ಬರು ಒಂದೊಂದು ಮೋಡದ ಮೇಲೆ ಕುಳಿತರು.

"ನೀನು ಇವರನ್ನು ಗುರುತಿಸಲಿಲ್ವೇ? ಸರಿ, ಗುರುತಿಸಲಾರೆ. ಬಹಳ ದಿವಸಗಳಾದ ಮೇಲೆ ಈವೊತ್ತು ಈ ಹಳ್ಳಿಗೆ ಬಂದಿದ್ದಾರೆ. ಇವರು ನಮ್ಮ ಬಸೀರತ್ ಬಾಬಾ.

ಬಸೀರತ್ ಮುಖವನ್ನು ಗುಲಬ್ ದೃಷ್ಟಿಸಿ ಚೆನ್ನಾಗಿ ನೋಡಿದ. ಮೂವತ್ತಮೂರು-ಮೂವತ್ತನಾಲ್ಕು ವರ್ಷ ವಯಸ್ಸಿನ ಎತ್ತರವಾದ ವ್ಯಕ್ತಿ. ಶ್ಯಾಮಲ ವರ್ಣ. ಪುಟ್ಟ ಗಡ್ಡ ಇದೆ. ಒಂದು ಹೊಸ ಅಂಗಿ ಮತ್ತು ಒಂದು ಲುಂಗಿ ಧರಿಸಿದ್ದಾನೆ.

"ಇವರ ವಿಷಯದಲ್ಲಿ ಏನು ಹೇಳಿದೆ?" ಗುಲಬ್ ಕೇಳಿದ. ಆತ ಆ ವ್ಯಕ್ತಿಯನ್ನು ಗುರುತಿಸೋಕೆ ಆಗಲಿಲ್ಲ. ಇದಕ್ಕಿಂತ ಮೊದಲೇ ಯಾವೊತ್ತೋ ಆ ಮನುಷ್ಯನನ್ನು ನೋಡಿದ್ದೇನೆಂಬ ನೆನಪು ಸಹ ಇಲ್ಲ.

ಈ ಸಾರಿ ಆ ವ್ಯಕ್ತಿಯೇ ಮಾತನಾಡಿದ-"ನೀವು ನನ್ನನ್ನು ಗುರುತಿಸಲಾರಿರಿ. ನಾನು ಸಹ ನಿಮ್ಮನ್ನು ಇಂದೇ ನೋಡಿದ್ದು. ನಾನು ಇಲ್ಲಿಯ ನಿವಾಸಿಯಲ್ಲ. ಬಹಳ ದಿನಗಳ ಹಿಂದೆ ಇಲ್ಲಿ ಸುಮಾರು ಎರಡು ವರ್ಷ ಇದ್ದೆ. ಇತ್ತೀಚೆಗೆ ಎಂದೋ ಒಮ್ಮೆ ಬರುತ್ತೇನೆ. ವ್ಯಾಪಾರ ಮಾಡೋ ವ್ಯಕ್ತಿ ಒಂದೇ ಸ್ಥಳದಲ್ಲಿ ಹೆಚ್ಚಿನ ದಿನ ಇರೋಕೆ ಆಗೋಲ್ಲ."

ಚಂದ್ರ ಹೇಳಿದ - "ಇವರು 'ಬಿಜಿನೆಸ್' ಮಾಡ್ತಾರೆ. ಒಳ್ಳೆಯ ಕೆಲಸಕ್ಕೆ ಕೈ ಹಾಕಿದ್ದಾರೆ. ನಮ್ಮ ಅಸ್ಸಾಮಿ ಜನರು ಬಿಜಿನೆಸ್ ಮಾಡೊಲ್ಲ. ಮಾಡಿದರೂ ಪ್ರಾಫಿಟ್ ಬರೋ ಹಾಗೆ

ಮಾಡಲಾರರು. ಇವರ ವಿಷಯ ಡಿಫಾರೆಂಟ್ ಅಂದರೆ ಬಿಗ್ ಬಿಜಿನೆಸ್, ಬಿಗ್ ಪ್ರಾಫಿಟ್."

ಎಲೆಅಡಿಕೆ ತಟ್ಟೆಯಲ್ಲಿ ಬೀಡಾ ತಂದು ಗುಲಬ್ ಆತನ ಮುಂದಿಟ್ಟ.

"ಇಲ್ಲಿ ಏನು ವ್ಯಾಪಾರ ಮಾಡ್ತೀರಿ?" - ಆತ ಕೇಳಿದ.

ಈ ಸಲ ಬಸೀರತ್ ಸ್ವಲ್ಪ ಗಂಭೀರವಾಗಿ ಮಾತನಾಡಿದ. ನಿಧಾನ ನಿಧಾನವಾಗಿ ಹೇಳಿದ - "ಮುಂಗಾರು ಬೆಳೆ ಅಥವಾ ಹಿಂಗಾರು ಬೆಳೆ - ಬೇಸಾಯ ಮಾಡುವವರಿಗೆ ಸಾಮಗ್ರಿಯ ಅವಶ್ಯಕತೆ ಇರೋದಿಲ್ವೇ? ಉದಾಹರಣೆಗೆ ಒಳ್ಳೆಯ ಬೀಜ, ಎತ್ತುಗಳು, ಕೋಣ, ಬೇಸಾಯಕ್ಕೆ ಬೇಕಾದ ಅನ್ಯ ಉಪಕರಣಗಳು- ಎಷ್ಟೊಂದು ಪದಾರ್ಥಗಳ ಅಗತ್ಯವಿದೆ. ದುಡ್ಡಿದ್ದರೆ ಇವೆಲ್ಲಾ ಸಿಗುತ್ತದೆ. ಆದರೆ ನಮ್ಮ ರೈತರ ಹತ್ತಿರ ಎಷ್ಟು ಹಣ ಇರುತ್ತೆ?"

ಬಸೀರತ್ ಹೇಳಿದುದರ ಜೊತೆಗೆ ಇನ್ನೂ ಸ್ವಲ್ಪ ಸೇರಿಸಿ ಚಂದ್ರ ಹೇಳಿದ - "ಯಾರಿಗಾದರೂ ಅವಶ್ಯಕತೆಯಿದ್ದರೆ ಬಸೀರತ್ ಮುಂಗಡವಾಗಿ ಹಣ ಕೊಡ್ತಾರೆ; ಬೀಜದ ವ್ಯವಸ್ಥೆ ಮಾಡ್ತಾರೆ; ಎತ್ತು ಮತ್ತು ಕೋಣ ಕೊಂಡುಕೊಳ್ಳಲು ಮುಂಗಡವಾಗಿ ಹಣ ಕೊಡ್ತಾರೆ. ಅದಕ್ಕೆ ಬಡ್ಡಿ ತಗೋಳ್ಳಲ್ಲ. ಸ್ವಲ್ಪ ಲಾಭ ಸಂಪಾದಿಸುತ್ತಾರೆ. ಅದನ್ನು ಈಗಲೇ ಕೇಳೋದಿಲ್ಲ. ಬೆಳಸು ಮನೆಗೆ ತಂದಮೇಲೆ ತೆಗೆದುಕೊಳ್ಳುತ್ತಾರೆ. ದುಡ್ಡಿನ ರೂಪದಲ್ಲಾದರೂ ತೆಗೆದುಕೊಳ್ಳುತ್ತಾರೆ ಅಥವಾ ಬೇಳೆ, ಸಾಸಿವೆ, ಆಲೂಗಡ್ಡೆ ರೂಪದಲ್ಲಾದರೂ ತೆಗೆದುಕೊಳ್ಳುತ್ತಾರೆ. ಚುಟುಕದಲ್ಲಿ ಹೇಳೋದಾದರೆ ಇಷ್ಟು ದಿನಗಳವರೆಗೂ ಮಾರ್ವಾಡಿ ಮತ್ತು ಬಿಹಾರಿ ವ್ಯಾಪಾರಿಗಳು ಪಾಹಿಯ ರೈತರಿಗೆ ಮೋಸ ಮಾಡಿ ತಿನ್ನುತ್ತಿದ್ದರು. ಈಗ ನಮ್ಮವರೇ ಆದ ಬಸೀರತ್ ರೈತರಿಗೆ ಸಹಾಯ ಮಾಡಲು ಮುಂದೆ ಬಂದಿದ್ದಾರೆ. ಬಸೀರತ್ ಅವರ ಹತ್ತಿರ ಸ್ವಂತ ದುಡ್ಡಿಲ್ಲ. ಅದು ಅವರ ಲೇವಾದೇವಿಗಾರರ ಹಣ. ಆದರೆ ಬಸೀರತ್‌ಗೂ ಲೇವಾದೇವಿಗಾರರಿಗೂ ಬಹಳ ಸ್ನೇಹ. ಬಸೀರತ್ ಏನು ಹೇಳ್ತಾರೋ ಅದನ್ನು ಲೇವಾದೇವಿಗಾರರು ಕೇಳ್ತಾರೆ. ಅವರಿಗೆ ಅಪನಂಬಿಕೆ ಇಲ್ಲ. ಹದಿನೇಳು-ಹದಿನೆಂಟು ವರ್ಷದಿಂದ ಲೇವಾದೇವಿಗಾರರ ಜೊತೆಯಲ್ಲಿ ವ್ಯವಹಾರ ಮಾಡುತ್ತಿದ್ದಾರೆ."

ಗುಲಬ್ ಹೇಳಿದ - "ನನಗೆ ಇನ್ನೇನೂ ಅವಶ್ಯಕತೆಯಿಲ್ಲ. ಒಂದು ಕೋಣ ಕೊಳ್ಳಬೇಕಾದ ಅಗತ್ಯವಿತ್ತು. ಆದರೆ ನೀವು ಎಲ್ಲಿ ಇಳಿದುಕೊಂಡಿದ್ದೀರಿ?"

ಬಸೀರತ್ ಹೇಳಿದ - "ಇಲ್ಲೇ ಹತ್ತಿರದಲ್ಲಿ ಧನಶಿರಿಯ ಆ ದಡದಿಂದ ದೋಣಿಯಲ್ಲಿ ಬಂದೆ. ಆಲದ ಮರದ ಹತ್ತಿರ ಹಳೆಯ ಡಾಲಿಮ್ ಘಟ್ಟದಲ್ಲಿ ನನ್ನ ದೋಣಿ ಇದೆ. ಕೆಲವು ದಿನಗಳಿದ್ದು ಆನಂತರ ಮೇಲುದಂಡೆ ಕಡೆ ಹೋಗ್ತೀನಿ."

ಅದೇ ಸಮಯಕ್ಕೆ ಕಪಾಹಿ ಮತ್ತು ತರಾ ಗದ್ದೆ ಕೆಲಸದಿಂದ ಬಂದರು. ಬಿಸಿಲಿನಲ್ಲಿ ಬತ್ತದ ಪೈರು ಕೀಳುತ್ತಿದ್ದುದರಿಂದ ಅವರಿಬ್ಬರ ಮುಖ ಕೆಂಪಗಾಗಿತ್ತು. ಕೆನ್ನೆಗಳ ಮೇಲೆ ಬೆವರು ಹರಿಯುತ್ತಿತ್ತು. ಬತ್ತದ ಪೈರು ನೀರಿನಲ್ಲಿ ಕೀಳಬೇಕಾಗಿದ್ದುದರಿಂದ ಕೆಸರು ಮೆತ್ತಿದ ಸೀರೆ ಶರೀರಕ್ಕೆ ಅಂಟಿಕೊಂಡಿತ್ತು.

ಅಂಗಳದಲ್ಲಿ ಗಂಡಸರನ್ನು ಕಂಡು ಇಬ್ಬರೂ ಹಿತ್ತಿಲ ಬಾಗಿಲ ಕಡೆ ಹೋದರು. ಗಂಡಸರ ಕಡೆ ನೋಡಲಿಲ್ಲ. ಆದರೆ ಬಸೀರತ್ ನೋಡಿದ.

ಗುಲಬ್ ಹೇಳಿದ - "ಸರಿ, ನಾನು ಮನೆಯವರ ಅಭಿಪ್ರಾಯ ಕೇಳ್ತೀನಿ. ಅಗತ್ಯಬಿದ್ದರೆ

ಚಂದ್ರನ ಕೈಯಲ್ಲಿ ಹೇಳ್ತೀನಿ."

"ಸರಿ. ಆಗಬಹುದು" - ಬಸೀರತ್ ಹೇಳಿದ. "ನಾವು ಬರ್‍ತೀವಿ." ಅವರು ಹೊರಟರು.

ಸ್ನಾನ ಮಾಡಲು ಬಟ್ಟೆ ತರುವ ಉದ್ದೇಶದಿಂದ ಕಪಾಹಿ ಒಳಗಡೆ ಹೋದಳು. ಗೋಡೆಯ ಕಂಡಿಯಿಂದ ಆಕೆ ಬಸೀರತ್‌ನನ್ನು ಇಣುಕಿ ನೋಡಿದಳು. ಸ್ವಲ್ಪ ಹೊತ್ತು ನೋಡಿ ಹೊರಟು ಹೋದಳು.

ತರಾ ಯಾರನ್ನೂ ನೋಡದೆ ಸ್ನಾನ ಮಾಡಲು ಹೋದಳು. ಇತ್ತೀಚೆಗೆ ಸ್ನಾನ ಮಾಡಲು ನದಿಗೆ ಹೋಗಬೇಕಾಗಿಲ್ಲ. ಮನೆಗೆ ತಳಹದಿ ಹಾಕುವಾಗ ಒಂದು ಕಡೆ ಭೂಮಿಯಲ್ಲಿ ಮಣ್ಣಿಗಾಗಿ ಗುಂಡಿ ತೋಡಬೇಕಾಯಿತು. ಅದನ್ನೇ ಸ್ವಲ್ಪ ಸರಿಮಾಡಿ ಕೊಳದ ಹಾಗೆ ಮಾಡಿದ್ದಾಗಿದೆ. ಮಳೆ ನೀರಿನಿಂದ ಅದು ತುಂಬಿದೆ.

ರಾತ್ರಿ ಊಟ ಮಾಡುವಾಗ ಕಪಾಹಿ ಕೇಳಿದಳು - "ಚಂದ್ರನ ಜೊತೆಯಲ್ಲಿ ಬಂದಿದ್ದೋರು ಯಾರು?"

"ಯಾವನೋ ಬಸೀರತ್ ಅಂತೆ. ವ್ಯಾಪಾರಿ. ಬೇಸಾಯ ಮಾಡೋಕೆ ಮುಂಗಡವಾಗಿ ದುಡ್ಡು, ಬೀಜ ಮುಂತಾದುವನ್ನು ಕೊಡುತ್ತಾನಂತೆ. ನಾನು ಒಂದು ಕೋಣ ತೆಗೆದುಕೊಳ್ಳಬೇಕು ಅಂತ ಯೋಚಿಸಿದ್ದೀನಿ."

"ಹಾಗೇನೇ ಕೊಡ್ತಾರಾ?"

"ಹಾಗೇನೇ ಯಾರು ಯಾರಿಗೆ ಕೊಡ್ತಾರೆ? ಬೆಳಸು ಬಂದ ಮೇಲೆ ದುಡ್ಡು ವಾಪಸುಕೊಡಬೇಕು. ಮೇಲೆ ಸ್ವಲ್ಪ ಲಾಭ ಕೊಡಬೇಕು."

"ಈ ರೀತಿ ಸಾಲ ನಮಗೆ ಬೇಕಿಲ್ಲ. ಬೇರೆಯವರು ಮೊದಲು ತೆಗೆದುಕೊಳ್ಳಲಿ. ಅನಂತರ ಬೇಕಾದರೆ ನಾವು ತೆಗೆದುಕೊಳ್ಳೋಣ."

"ಸರಿ" - ಗುಲಚ್ ಹೇಳಿದ.

ಅದಾದ ಮೇಲೆ ಯಾವ ಜಮೀನಿನಲ್ಲಿ ಯಾವ ಬೀಜ ಬಿತ್ತಿದರೆ ಹುಲುಸಾದ ಬೆಳೆ ಬರುತ್ತೆ? ಯಾವ ಜಮೀನಿನಲ್ಲಿ ಯಾವಾಗ ನಾಟಿ ಹಾಕ್ಬೇಕು? ಯಾವ ಜಮೀನನ್ನು ಎಷ್ಟು ಬಾರಿ ಉಳುಮೆ ಮಾಡ್ಬೇಕು? - ಮುಂತಾದ ಮುಖ್ಯ ವಿಷಯಗಳ ಬಗ್ಗೆ ರಾತ್ರಿ ಹೊತ್ತಿನವರೆಗೂ ಮಾತನಾಡುತ್ತಿದ್ದರು.

ಆದರೆ ಬಹಳ ದಿನಗಳಾದ ಮೇಲೆ ಬಸೀರತ್ ಮತ್ತೆ ಬಂದ. ಆಗ ಮನೆಯಲ್ಲಿ ಗುಲಚ್ ಇರಲಿಲ್ಲ. ಕಪಾಹಿ ಮತ್ತು ತರಾ ಇದ್ದರು.

ಕೂಗಿದಾಗ ಯಾರೂ ಉತ್ತರ ಕೊಡಲಿಲ್ಲ. ಅನಂತರ ಸಂಕೋಚದಿಂದಲೇ ಕಪಾಹಿ ಬಂದಳು.

"ಗುಲಚ್ ಮನೆಯಲ್ಲಿಲ್ವೇ?"

"ಎಲ್ಲಿಗೆ ಹೋದ?"

"ಈಗ ಬರೋದಿಲ್ವೇ?"

"ಗೊತ್ತಿಲ್ಲ."

"ಕೋಣ ಕೊಂಡುಕೊಳ್ಳಬೇಕು ಅಂತ ಹೇಳಿದ್ದ."

"ಈಗ ಬೇಕಿಲ್ಲ. ಒಂದು ಜೊತೆ ಎತ್ತುಗಳಿವೆ."

"ಏನು? ಒಂದು ಜೊತೆ ಎತ್ತುಗಳಲ್ಲೇ ಹೊಸ ಜಮೀನಿನ ಗದ್ದೆ ಕೆಲ್ಸ, ನಾಟಿ ಆಗುತ್ತಾ?"

ಕಪಾಹಿ ಉತ್ತರ ಕೊಡಲಿಲ್ಲ.

"ಕೇವಲ ಎತ್ತುಗಳಿಂದಲೇ ಹುಲ್ಲು ಬೆಳೆದು ನಿಂತಿರೋ ಹೊಸ ಜಮೀನನ್ನು ಉಳೋದಕ್ಕೆ ಆಗ್ತದೆಯೇ? ಕೋಣವನ್ನು ಕಟ್ಟಿ ಉತ್ತು ಒಂದು ಸಾರಿ ಭೂಮಿ ಮಣ್ಣು ಸಡಿಲ ಆದಮೇಲೆ ಎತ್ತುಗಳಿಂದ ಉಳಬಹುದು."

"ಈಗಲೇ ದುಡ್ಡುಕಾಸು ಕೊಡೋ ಅಗತ್ಯವಿಲ್ಲ. ಬೆಳಸು ಕೊಯ್ಯಲು ಆದಮೇಲೆ ಕೊಟ್ಟರೂ ಆಗುತ್ತೆ. ಈ ವರ್ಷ ಕೊಡದಿದ್ದರೂ ಮುಂದಿನ ವರ್ಷ ಕೊಟ್ಟರೂ ಪರವಾಗಿಲ್ಲ. ಯಾರು ಎಲ್ಲಿ ಓಡಿ ಹೋಗ್ತಾರೆ?"

ಕಪಾಹಿ ಒಳಗಡೆ ಹೊರಟು ಹೋದಳು. ಅಡಿಕೆ-ಎಲೆ ತಟ್ಟೆಯಲ್ಲಿ ಎರಡು ಬೀಡಾ ತಂದು ಬಸೀರತ್‌ನ ಮುಂದಿಟ್ಟಳು.

ಬಸೀರತ್ ಒಂದು ಸಾರಿ ಕಣ್ತುಂಬ ಕಪಾಹಿಯನ್ನು ನೋಡಿದ. ಕಪಾಹಿ ಸಹ ಒಂದು ಸಾರಿ ಆತನ ಕಡೆ ನೋಡಿ ತಲೆ ತಗ್ಗಿಸಿದಳು.

ಅವಳು ಒಳಗಡೆ ಹೊರಡಲನುವಾದಾಗ ಬಸೀರತ್ ಹೇಳಿದ - "ನಾನು ದುಡ್ಡು ಕೊಟ್ಟು ಹೋಗ್ತೀನಿ. ಒಂದು ಕೋಣ ಕೊಂಡುಕೊಳ್ಳಿ."

ಕಪಾಹಿ ಮೆಲುದನಿಯಲ್ಲೇ ಹೇಳಿದಳು - "ಸರಿ, ನಾನು ತಿಳಿಸ್ತೀನಿ."

"ಕಾಗದ ಪತ್ರ ಏನೂ ಬರೆದುಕೊಡಬೇಕಾಗಿಲ್ಲ " - ಗುಲಬ್‌ಗೆ ಕೊಡಲು ಬಸೀರತ್ ನಗದು ಮೂರಿಪ್ಪತ್ತು ಕೊಟ್ಟು ಹೋದ.

ನಲವತ್ತೆಂಟು ರೂಪಾಯಿ ಕೊಟ್ಟು ಗುಲಬ್ ಒಂದು ವಿಲಾಯಿತಿ ಕೋಣವನ್ನು ಕೊಂಡುಕೊಂಡ. ಸುಂದರವಾದ ಕಟ್ಟುಮಸ್ತಾದ ಕೋಣ. ಅದರ ಎರಡು ಕೊಂಬುಗಳು ಬಹಳ ಚೆನ್ನಾಗಿವೆ. ಅವನ ಅದೃಷ್ಟ ಚೆನ್ನಾಗಿದ್ದರೆ ಅದು ಎಂಟು ಹತ್ತು ವರ್ಷಗಳವರೆಗೆ ಕೆಲಸ ಮಾಡಬಲ್ಲದು. ಅದಕ್ಕೆ ಇನ್ನೂ ಬಹಳ ವರ್ಷ ಆಯುಸ್ಸು ಇದೆ.

ಕೋಣವನ್ನು ತಂದ ಮೇಲೆ ಮನೆಯವರೆಲ್ಲರಿಗೂ ಆನಂದವಾಯಿತು.

ಇಂದು ಗುಲಬ್ ಕೋಣ ಕಟ್ಟಿಕೊಂಡು ಉಳುಮೆ ಮಾಡುವ ಬೇಸಾಯಗಾರ. ವರ್ಷದ ಕೊನೆಯಲ್ಲಿ ಕೋಣವನ್ನು ಕೊಂಡ ಬೆಲೆಯ ಜೊತೆಗೆ ಇನ್ನೂ ಹದಿನೈದು ರೂಪಾಯಿಗಳನ್ನು ಸೇರಿಸಿ ಕೊಡಬೇಕಾಗುತ್ತೆ. ಬೆಳಸು ಹುಲುಸಾಗಿ ಬಂದರೆ ಇದೆಲ್ಲ ಲೆಕ್ಕವಿಲ್ಲ.

ಈ ವರ್ಷದ ಆಶ್ವೀಜ ಮಾಸದ ಅನಂತರ ಇನ್ನೂ ಸ್ವಲ್ಪ ಜಮೀನು ಆಬಾದು ಮಾಡಿದರೆ ಹಿಂಗಾರು ಬೆಳೆಯನ್ನು ಸ್ವಲ್ಪ ಜಾಸ್ತಿ ಹಾಕ್ಬೇಕು. ಬೇಳೆ, ಸಾಸಿವೆ, ಕೋಸುಗೆಡ್ಡೆ, ಮೂಲಂಗಿ - ಎಲ್ಲ ಹಾಕ್ಬೇಕು.

ಗುಲಬ್‌ನ ಕಣ್ಣುಗಳಲ್ಲಿ ಹೊಂಗನಸುಗಳ ಮಿಂಚು.

ಕಪಾಹಿ ಮತ್ತು ತರಾಳ ಜೊತೆಯಲ್ಲೇ ಗುಲಬ್ ಮನೆಗೆ ಲಕ್ಷ್ಮಿಯಾಗಮನವಾಗಿದೆ. ಬೀಳುನೀರಿನ ಗದ್ದೆ ಫಲವತ್ತಾಗಿದೆ. ಸಾಲದ್ದಕ್ಕೆ ಪ್ರತಿವರ್ಷ ನದಿಯ ಮೆಕ್ಕಲು ಮಣ್ಣಿನಿಂದ ಕೂಡಿ ಅದು ಮತ್ತಷ್ಟು ಫಲವತ್ತಾಗಿದೆ. ಕೈಯಿಂದ ಸುಮ್ಮನೆ ಯಾವುದೋ ಒಂದು ಬೀಜ ಎಲ್ಲೋ ಬೀಸಾಡಿದರೆ ಸಾಕು ಬಹುಬೇಗ ಅದು ಸೊಂಪಾದ ಗಿಡವಾಗಿ ಬೆಳೆಯುತ್ತೆ. ಕುಂಬಳಕಾಯಿ ಗಿಡದಲ್ಲಿ ಚೈತ್ರಮಾಸದಿಂದಲೇ ಕಾಯಿ ಬಂತು. ತಿಂದು ತಿಂದು ಬೇಸರವಾಗಿದೆ.

ಎರಡು ಪಾತಿಗೆ ಹಸಿಶುಂಠಿ ನೆಟ್ಟಿದ್ದರು. ಹುಲುಸಾಗಿ ಬಂದಿದೆ. ಅದನ್ನು ನೋಡೋದೆ ಒಂದು ಸಂತೋಷ. ವಿಳ್ಳೆದೆಲೆಯ ಹಂಬು ನೆಟ್ಟಿದ್ದಾರೆ. ಸಣ್ಣ ಮೆಣಸಿನಕಾಯಿಯ ಗಿಡ ಮನೆ ಪಕ್ಕದಲ್ಲೇ ನೆಟ್ಟಿದ್ದಾರೆ. ನಿತ್ಯ ಒಂದು ಹುಪ್ಪಡಿ ತುಂಬ ಮೆಣಸಿನಕಾಯಿ ಬಿಡಿಸಿದರೂ ಅದರ ತುಂಬಾ ಕಾಯಿ ಇದ್ದೆ ಇರುತ್ತೆ. ಹುಲುಸಾಗಿ ಬೆಳೆದಿದೆ.

ಇಂದು ಗುಲಚ್‌ನ ಮನೆ ನೋಡಿದರೆ ಅದು ಬಹಳ ಹಳೆಯ ಮನೆಯ ಹಾಗೆ ಕಾಣುತ್ತೆ. ಹೊಸ ಮನೆ ಅಲ್ಲ ಅನ್ನಿಸುತ್ತೆ.

ದೂರದಿಂದಲೇ ತನ್ನ ಮನೆಯನ್ನು ನೋಡಿದರೆ ಸಾಕು, ಗುಲಚ್‌ನ ಮನಸ್ಸು ಆನಂದದಿಂದ ತುಂಬಿ ತುಳುಕಾಡುತ್ತದೆ. ಕಪಾಹಿ ಮತ್ತು ತರಾ ಯಾರೂ ಕೆಲಸ ಇಲ್ಲದಿದ್ದರೆ ಒಂದು ಗಳಿಗೆಯೂ ಕುಳಿತು ಕೊಳ್ಳುವುದಿಲ್ಲ. ಮನೆಯ ಒಳಗಡೆ ಏನೂ ಕೆಲಸ ಇಲ್ಲದಿದ್ದರೆ ತೋಟದಲ್ಲಿ ಏನಾದರೂ ಕೆಲಸ ಮಾಡುತ್ತಿರುತ್ತಾರೆ. ಮನೆಯ ಸುತ್ತಲೂ ಇರುವ ತೋಟದಲ್ಲಿ ಬೆಳಸು ಬಿಟ್ಟರೆ ಇನ್ನೇನು ಇಲ್ಲ. ಮಾವು, ಸೀಬೆ, ನೇರಿಳೆ - ಮೊದಲಾದ ಗಿಡಗಳನ್ನು ಹುಡುಕಿ ತಂದು ಮೂವರೂ ನೆಟ್ಟಿದ್ದಾರೆ. ಮುಂಜಾನೆ ಮತ್ತು ಸಂಜೆ ದೂರದಿಂದ ಕೇಳಿ ಬರುವ ಸಾರಸ ಪಕ್ಷಿಗಳ ಸ್ವರ ಗುಲಚ್‌ನಿಗೆ ಆಹ್ಲಾದವನ್ನುಂಟು ಮಾಡುತ್ತದೆ. ರಾತ್ರಿಯ ಕೊನೆಯ ಜಾವದ ಕೋಳಿ ಕೂಗು ಕೇಳಿದಾಗ ಆತನಿಗೆ ಮತ್ತಷ್ಟು ಉತ್ಸಾಹ ಹಾಗೂ ಉಲ್ಲಾಸ. ಅನಂತರ ಸ್ವಲ್ಪ ಹೊತ್ತಾದ ಮೇಲೆ ಅವರು ಏಳುತ್ತಾರೆ.

ಬೇಸಾಯದಿಂದ ಪುರುಸೊತ್ತು ಸಿಕ್ಕಿದ ಕೂಡಲೇ ಕಪಾಹಿ ಮತ್ತು ತರಾ ಇಬ್ಬರೂ ಬಟ್ಟೆ ನೇಯುವ ಕೆಲಸ ಆರಂಭಿಸುತ್ತಾರೆ. ಕಪಾಹಿ ಎರಡು ಮಡಿಕೆಯ ದುಪ್ಪಟಿ ನೇಯುತ್ತಾಳೆ. ತರಾ ರಿಹಾ ನೇಯುತ್ತಾಳೆ. ಬಟ್ಟೆಯ ಮೇಲೆ ಹಕ್ಕಿಯ ಉಗುರಿನಂತೆ ತರಾ ಹಾಕುವ ಕಸೂತಿ ಎಲ್ಲರಿಗೂ ಈರ್ಷ್ಯೆಯನ್ನುಂಟು ಮಾಡುವಂಥದ್ದಾಗಿರುತ್ತದೆ.

ಡಾಲಿಮ್ ಹಳ್ಳಿಯಲ್ಲಿ ಇದ್ದಾಗಲೂ ಅವಳನ್ನು ಜೇಡರ ಹುಳುವಿನ ಬಲೆ ನೇಯುವವಳು ಎಂದು ಹೇಳಿ ಹಾಸ್ಯ ಮಾಡುತ್ತಿದ್ದರು. ಅವಳ ಕೈಗೆಲಸ ಬಹಳ ನಾಜೂಕಾಗಿದೆ.

ಮಗ್ಗದ ಮೇಲೆ ಬಟ್ಟೆ ನೇಯುವ ಸದ್ದು ಕೇಳಿ ಗುಲಚ್‌ನ ಮನಸ್ಸು ನೃತ್ಯ ಮಾಡತೊಡಗುತ್ತದೆ. ಒಂದು ಜೀವಂತ ಪರಿವಾರ. ಚೈತನ್ಯದಿಂದ ಕೂಡಿದ ಪರಿವಾರ. ಸುತ್ತಲೂ ಉಲ್ಲಾಸದಾಯಕ ಜೀವನದ ಸಮೃದ್ಧಿ.

ಇಷ್ಟಾದರೂ ಆತನ ಪರಿವಾರದಲ್ಲಿ ಒಂದು ವಸ್ತುವಿನ ಅಭಾವವಿದೆ. ತರಾಳ ನಗೆ, ತರಾಳ ಸದ್ದು. ತರಾ ಈಗಲೂ ಮೌನವಾಗಿರುತ್ತಾಳೆ. ಮನೆಯ ಒಳಗೆ-ಹೊರಗೆ ಎಲ್ಲಾ ಕೆಲಸ ಮಾಡುತ್ತಾಳೆ. ಸ್ವಲ್ಪವೂ ಆರಾಮ ತೆಗೆದುಕೊಳ್ಳುವುದಿಲ್ಲ. ಆಕೆಗೆ ಸ್ವಲ್ಪವೂ ಆಯಾಸವಿಲ್ಲ. ಆದರೆ ಯಾವಾಗಲೂ ತಲೆ ತಗ್ಗಿಸಿಕೊಂಡೇ ನಡೆಯುತ್ತಾಳೆ. ಆಕೆಯ ಮನಸ್ಸು ಸದಾ ವಿಷಾದದಿಂದ ತುಂಬಿರುತ್ತೆ. ಕಪಾಹಿ ಮತ್ತು ಗುಲಚ್ ಸದಾ ಮಾತುಕತೆಯಲ್ಲಿ ಮಗ್ನರಾಗಿರುತ್ತಾರೆ. ಅವರು ನಗುತ್ತಾ ಮಾತಾಡುತ್ತಿರುತ್ತಾರೆ. ತರಾ ಮೌನವಾಗಿರುತ್ತಾಳೆ. ಏನೂ ಹೇಳುವುದಿಲ್ಲ. ತುಟಿ ಪಿಟಕ್ಕೆನ್ನುವುದಿಲ್ಲ. ಏನೂ ಕೇಳುವುದೂ ಇಲ್ಲ. ಬಹುಶಃ ಮನೆಯಲ್ಲಿ ಅವಳು ಇಲ್ಲವೇನೋ ಎನ್ನುವಂತೆ ಇರುತ್ತಾಳೆ. ಆ ಪರಿವಾರದಲ್ಲಿ ಅವಳಿದ್ದೂ ಸಹ ಇಲ್ಲದಂತಾಗಿದೆ. ಆನಂದದಾಯಕ ಎಲ್ಲ ಸಾಮಗ್ರಿ ಜೀವನದಲ್ಲಿ ಲಭಿಸಿದ್ದರೂ ತರಾಳಿಗೆ ಯಾವ ಆನಂದವೂ ಇಲ್ಲ. ಆದರೆ ಆಕೆಯ ಮನಸ್ಸು ಮೊದಲಿಗಿಂತ ಸ್ವಲ್ಪ ಹಗುರವಾಗಿದೆ.

ಅವಳ ಚೇತನದ ಉಲ್ಲಾಸ ಹಾಳಾಗಿ ಹೋದಂತಿದೆ. ಬಹಿರಂಗದ ಜಗತ್ತನ್ನು ತೊರೆದು ಈಗ ತನ್ನ ಅಂತರಂಗದ ಜಗತ್ತಿನ ಅಂತರಾರ್ಥವನ್ನು ಅರಿಯಲು ಸಾಧನೆ ಕೈಗೊಂಡಿದ್ದಾಳೆ.

# ಇಪ್ಪತ್ತೊಂದು

ಕೋಣದ ಮೇಲೆ ಸವಾರಿ ಮಾಡಿಕೊಂಡು ಬತ್ತದ ಗದ್ದೆಯನ್ನು ನೋಡುತ್ತಾ ಗುಲಬ್ ನದಿಯ ದಡದ ಕಡೆ ಹೋಗುತ್ತಿದ್ದ. ಕಾರ್ತಿಕ ಮಾಸದ ಮಧ್ಯಾವಧಿ ಇರಬಹುದು. ಸುಮಾರು ಬತ್ತದ ಗದ್ದೆಯಲ್ಲಿ ಒಡೆ ಹಾಲುದುಂಬಿತ್ತು. ಅದರ ಸುವಾಸನೆ ಸೂಸುತ್ತಿತ್ತು. ಅಷ್ಟು ಹೊತ್ತಿನವರೆಗೂ ಮಂಜು ಪೂರ್ತಿಯಾಗಿ ಹೋಗಿರಲಿಲ್ಲ.

ಬತ್ತದ ಹುಲ್ಲು ಕೊಯ್ದು ಕೋಣನಿಗೆ ಹಾಕಬೇಕಾದ ಅಗತ್ಯವಿಲ್ಲ. ಧನಶಿರಿಯ ದಡದಲ್ಲಿ ಮೇವಿಗೆ ಅಭಾವವಿಲ್ಲ. ಮಂಡಿಯವರೆಗೂ ಬಯಲಿನಲ್ಲಿ ಹುಲ್ಲು ಬೆಳೆದಿದೆ. ಮತ್ತು ಬದಿಯಲ್ಲಂತೂ ಬೆಳೆದು ನಿಂತಿದೆ.

ಸಿಪರಿಯಾ ಹಳ್ಳಿಯ ದಕ್ಷಿಣದ ಕಡೆಗೆ ನದಿಯ ದಡದಲ್ಲಿ ಒಂದು ಕಾಡಿದೆ. ಆದರೆ ಡಾಲಿಮ್ ಹಳ್ಳಿಯ ಪಶ್ಚಿಮದ ಕಡೆಗಿರುವ ಕಾಡಿನಂತೆ ದೊಡ್ಡದು ಮತ್ತು ಭಯಂಕರವಾದುದಲ್ಲ.

ಈ ಕಡೆ ಆನೆಗಳು ಹೆಚ್ಚಾಗಿ ಬರೊಲ್ಲ. ಆದರೆ ಜಿಂಕೆ ಮತ್ತು ಹುಲಿಗಳಿವೆ. ಆಗಾಗ್ಗೆ ಜಿಂಕೆ ಗದ್ದೆಗೆ ನುಗ್ಗಿ ಬತ್ತದ ಬೆಳೆಯನ್ನು ಹಾಳುಮಾಡುತ್ತೆ. ಆದರೆ ಗುಲಬ್‌ನ ಜಮೀನಿಗೆ ಸ್ವಲ್ಪ ದೂರದಲ್ಲಿ ಕಾಡಿದೆ. ಸುತರಾಂ ಹತ್ತಿರದಲ್ಲಿಲ್ಲ.

ಕೋಣವನ್ನು ಒಂದು ಬದಿಯಲ್ಲಿ ಮೇಯಲು ಬಿಟ್ಟು ಗುಲಬ್ ಕಾಡಿನ ಕಡೆ ಹೊರಟ. ಇಬ್ಬನಿಯಿಂದ ತೋಯ್ದ ಹುಲ್ಲನ್ನು ನೋಡಿ ಆತನಿಗೆ ಆತ್ಮೀಯ ಭಾವ ಮೂಡಿತ್ತು. ಆತನ ಚೇತನದ ಒಂದು ಮೂಲೆಯಲ್ಲಿ ಕಾಡಿನ ಬಗ್ಗೆ ಪ್ರಾರಂಭದ ಸ್ನೇಹ ಮನೆ ಮಾಡಿತ್ತು. ಕಾಡಿನ ಕೋಮಲ ಪ್ರಶ್ವಾಸ ಆತನನ್ನು ಹುರಿದುಂಬಿಸಿತು. ಅತಿಶಯವಾದ ಆನಂದದಿಂದ ಆತ ರಸ್ತೆಯನ್ನು ಲೆಕ್ಕಿಸದೆ ಹುಲ್ಲಿನ ಮಧ್ಯೆ ಮನಬಂದೆಡೆ ಹೋಗುತ್ತಿದ್ದ. ಇಕ್ಕೆಲದಲ್ಲೂ ಹುಲ್ಲು ಬೆಳೆದಿತ್ತು. ಇಬ್ಬನಿಯಿಂದಾಗಿ ಬಗ್ಗಿತ್ತು.

ಮಂಜನ್ನು ಸೀಳಿಕೊಂಡು ಎಳೆಬಿಸಿಲು ನಿಧಾನ ನಿಧಾನವಾಗಿ ಹರಡುತ್ತಿದೆ. ಜಗತ್ತೆಲ್ಲ ಬಿಸಿಲಿನಿಂದ ತೇಜೋಮಯವಾಗುತ್ತಿದೆ. ಮರಗಿಡಗಳಿಗೆ ಚೈತನ್ಯ ಒದಗುತ್ತಿದೆ.

ಸ್ವಲ್ಪ ದೂರ ಹೋದ ಮೇಲೆ ಗುಲಬ್‌ನಿಗೆ ಒಂದು ಸಣ್ಣ ದಾರಿ ಸಿಕ್ಕಿತು. ನದಿಯ ದಡದಿಂದ ಆರಂಭವಾಗಿ ಹುಲ್ಲುಗಾವಲಿನ ಮಧ್ಯೆ ಹಾದು ಸಿಪರಿಯಾ ಹಳ್ಳಿಗೆ ಹೋಗುವ ಕಾಲುದಾರಿ. ಒಂದೆರಡು ಅಡಿ ಅಗಲವಿದೆ. ದನಕರುಗಳು ತಿರುಗಾಡಿದ್ದ ಕಾರಣ ಹುಲ್ಲು-ಗಿಡಗೆಂಟೆ ಒಣಗಿ ಹೋಗಿ ಗೆದ್ದೆಯಾಗಿವೆ.

ಪಶ್ಚಿಮದ ಕಡೆ ತಿರುಗಿ ಕಾಲುದಾರಿಯಲ್ಲೇ ಗುಲಬ್ ನದಿಯ ಕಡೆಗೆ ಮೂರು ನಾಲ್ಕು ಹೆಜ್ಜೆ ಮುಂದೆ ಹೋದ. ತಲೆಯೆತ್ತಿ ಮುಂದುಗಡೆ ನೋಡಿದಾಗ ಯಾರೋ ಆ ಕಡೆಯಿಂದ

ಬರುತ್ತಿದ್ದುದು ಕಾಣಿಸಿತು. ಗುಲಬ್ ಇನ್ನೂ ಮುಂದೆ ಹೋದ.

ಆಕೆ ಚೇನಿಮಾಇ.

ಆಕೆ ಸಹ ಈತ ಬರುವುದನ್ನು ನೋಡಿ ಬೆರಗಾಗಿ ನಿಂತಳು. ಒಬ್ಬರನ್ನೊಬ್ಬರು ನೋಡಿ ಇಬ್ಬರಿಗೂ ಸಂಕೋಚವಾಯಿತು. ಬೆಳೆದಿರುವ ಹುಲ್ಲಿನ ಮಧ್ಯೆ ಇಕ್ಕಟ್ಟಾದ ಕಾಲುದಾರಿ. ಅಕ್ಕಪಕ್ಕದಲ್ಲಿ ಯಾರೂ ಇಲ್ಲ.

"ನೀನು-ನೀನು ಎಲ್ಲಿಂದ ಬಂದೆ ಚೇನಿ?" - ಗುಲಬ್ ಕೇಳಿದ.

"ಸರಬಾ ಹಳ್ಳಿಯ ಯಜಮಾನನನ್ನು ನೋಡಲು ಹೋಗಿದ್ದೆ."

"ಯಜಮಾನನ ಮನೆಗೆ? ಯಾಕೆ? ಹೊತ್ತರಂಟೆ ಹೋದೆಯಾ? ಯಾಕೆ?"

"ಐದು ರೂಪಾಯಿನ ಬತ್ತ ತೆಗೆದುಕೊಂಡಿದ್ದೆ. ಅದನ್ನು ಹಸನುಮಾಡಿ ಬಂದೆ. ತಿಖಿರ್ ಆಮೇಲೆ ತಗೊಂಡು ಬರ್ತಾನೆ."

"ನಿಮ್ಮ ಕಣಜದಲ್ಲಿ ಬತ್ತ ಇಲ್ವೇ?"

"ಇಂದಿಗೆ ಸುಮಾರು ಇಪ್ಪತ್ತು ದಿನಗಳ ಮೊದಲೇ ಅದು ಬರಿದಾಯಿತು."

ಸ್ವಲ್ಪ ಹೊತ್ತು ಇಬ್ಬರೂ ಮೌನವಾಗಿದ್ದರು.

"ನೀವು ಎಲ್ಲಿಗೆ ಹೊರಟಿರಿ?" - ಚೇನಿಮಾಇ ಕೇಳಿದಳು.

"ಎಲ್ಲಿಗೂ ಇಲ್ಲ; ಕೋಣ ಹುಡ್ಕೊಂಡು ಈ ಕಡೆ ಸುಮ್ನೆ ಬಂದಿದ್ದೆ."

"ನಾನು ಬರಲೇ, ಯಾರಾದರೂ ಬರಬಹುದು." ಆಕೆ ಹೊರಟಳು.

"ಚೇನಿ, ಸ್ವಲ್ಪ ಕೇಳಿಸಿಕೊ."

"ಏನು?"

"ಎಲ್ಲ ತಿರುಗುಮುರುಗು ಆಗಿದೆ. ಏನು ಮಾಡ್ತೀಯೆ?"

ಏನೂ ಉತ್ತರ ಕೊಡದೆ ಚೇನಿಮಾಇ ತಲೆ ತಗ್ಗಿಸಿದಳು.

"ಯಾವಾಗಲೂ ನಿನ್ನ ವಿಷಯ ನೆನಪಿಗೆ ಬರುತ್ತೆ."

"ಯಾಕೆ ? ಕಪಾಹಿ ಪ್ರೀತಿಸೋದಿಲ್ವೇ?"

"ಪ್ರೀತಿಸ್ತಾಳೆ. ಆದಾಗ್ಯೂ ನಿನ್ನ ವಿಷಯ ನನಗೆ ಪದೇಪದೇ ನೆನಪಿಗೆ ಬರುತ್ತೆ. ಜೊತೆಗೆ ನಿನ್ನ ಮದುವೆ ಕೆಲಾಈ ಜೊತೆಯಲ್ಲಿ ಆಯಿತು."

"ಆ ವಿಷಯದ ಬಗ್ಗೆ ಹೆಚ್ಚಿಗೆ ಯೋಚಿಸಬೇಡಿ. ಹಣೆಯ ಬರಹವಿದ್ದಂತೆ ಆಯಿತು. ನೀವು ಚೆನ್ನಾಗಿದ್ದರೆ ನಾನು ಚೆನ್ನಾಗಿ ಇರ್ತೀನಿ."

ಇನ್ನೇನು ಮಾತನಾಡದೆ ಚೇನಿಮಾಇ ಹೊರಟು ಹೋದಳು. ಆತ ಏನೋ ಹೇಳಬೇಕು ಅಂತಿದ್ದರೂ ಹೇಳಲಾಗಲಿಲ್ಲ. ಚೇನಿಮಾಇ ಕಡೆಯೇ ಒಂದೇ ಸಮನೇ ನೋಡುತ್ತಾ ನಿಂತ.

ಆದರೆ ಸ್ವಲ್ಪ ದೂರ ಹೋಗಿ ಚೇನಿಮಾಇ ನಿಂತಳು. ಹಿಂದಕ್ಕೆ ತಿರುಗಿಕೊಂಡು ಗುಲಬ್‌ನೊಡನೆ ಹೇಳಿದಳು - "ಸ್ವಲ್ಪ ಕೇಳಿಸಿಕೊಳ್ಳಿ."

ಗುಲಬ್ ಹತ್ತಿರಕ್ಕೆ ಹೋದ.

"ಚೇನಿ, ಏನು ವಿಷಯ?"

ಸ್ವಲ್ಪ ಉತ್ತೇಜಿತ ಸ್ವರದಲ್ಲಿ ಚೇನಿ ಹೇಳಿದಳು - "ನಿಮ್ಮ ತಂದೆ ಮತ್ತು ನಮ್ಮ ದೊಡ್ಡಪ್ಪ ಇಬ್ಬರೂ ಸೇರಿ ನನ್ನ ಭಾಗ್ಯವನ್ನು ಇಂಥ ದುಸ್ಥಿತಿಗೆ ತಂದರು. ಈ ಸಾಯೋನ ಕತ್ತಿಗೆ ಕಟ್ಟಿದರು.

ಆತನ ಕತ್ತಿಗೆ ಕಟ್ಟೋದು ಒಂದೇ ಗುರಿಯಾಗಿತ್ತು. ಯಾವೊತ್ತು ಆತ ಕಣ್ಮುಚ್ಚುತ್ತಾನೋ ಹೀಗೇ ಅಂತ ಹೇಳೋಕ್ಕಾಗಲ್ಲ. ನಾನು ಕೆಲಸಕ್ಕೆ ಬಾರದವಳಾದೆ. ಅವನ ಸೇವೆ- ಶುಶ್ರೂಷೆ ಮಾಡ್ಬೇಕು. ಮನೆಯ ನಿರ್ವಹಣೆ ಸಹ ನೋಡಿಕೊಳ್ಳಬೇಕು. ಕೈಯಲ್ಲಿ ಬುಟ್ಟಿ ಮತ್ತು ಮೊರ ಹಿಡಿದುಕೊಂಡು ಬತ್ತ ಹುಡುಕಿಕೊಂಡು ಹಳ್ಳಿಹಳ್ಳಿ ಸುತ್ತಬೇಕು. ನನ್ನಿಂದ ಇನ್ನು ಕೆಲ್ಸ ಸಾಧ್ಯವಿಲ್ಲ. ನಾನು ಸಮಯ ಕಾಯ್ತಾದೀನಿ. ಧನಶಿರಿ ದಾರಿ ನಿಶ್ಚಯಿಸಿದ್ದೇನೆ. ಈವೊತ್ತು ಹೇಳಿದ್ದೇನೆ. ಎಂದೋ ಒಂದು ದಿನ ಚೇನಿ ನದಿಗೆ ಬಿದ್ದು ಸತ್ತಳು ಅಂತ ಸುದ್ದಿ ಬರುತ್ತೆ. ''

ಅವಳ ಮಾತನ್ನು ಕೇಳಿ ಗುಲಬ್‌ನಿಗೆ ದಿಗಿಲಾಯಿತು. ಆತ್ಮಹತ್ಯೆ ಮಾಡಿಕೊಳ್ತೀನಿ ಅಂತ ಸಲೀಸಾಗಿ ಹೇಳ್ತಿದ್ದಾಳೆ. ಪಾಪ, ಆಕೆ ಈಗ ಏನು ತಾನೇ ಮಾಡ್ತಾಳೆ?

ಗುಲಬ್ ಹೇಗೋ ಹೇಳಿದ - ''ಸಿಟ್ಟು ಮಾಡಿಕೊಂಡರೆ ಏನು ಲಾಭ? ನಾನು ಹತ್ತಿರದಲ್ಲೇ ಇರ್ತೀನಿ. ನೀನು ತಪ್ಪು ತಿಳಿದುಕೊಳ್ಳದಿದ್ದರೆ ನಾನು ನಿನ್ನ ಯೋಗಕ್ಷೇಮ ವಿಚಾರಿಸಿಕೊಳ್ತಾ ಇರ್ತೀನಿ?''

ಗುಲಬ್‌ನ ಕಡೆ ಚೇನಿ ತಲೆಯೆತ್ತಿ ನೋಡಿದಳು.

''ನಿನ್ನದೂ ಒಂದು ಸಂಸಾರ ಇಲ್ವೇ?''

''ಇದ್ದರೇನು? ಅದಕ್ಕೋಸ್ಕರ ನಾನು ನಿನ್ನ ಯೋಗಕ್ಷೇಮ ವಿಚಾರಿಸಬಾರದೇ? ಬೇರೆಯವರು ಅನ್ಯಥಾ ಭಾವಿಸದಿದ್ದರೆ ಸರಿ. ''

''ಯಾರು ಏನು ಬೇಕಾದರೂ ಯೋಚಿಸಲಿ! ನನ್ನ ಜೊತೆಯಲ್ಲಿ ನಿನಗೆ ಸ್ನೇಹವಿದ್ದರೆ ನನ್ನ ಮನೆ ಕಡೆ ಆಗಿಂದಾಗ್ಗೆ ಬರ್‍ತಿರಿ. ಇಲ್ಲದಿದ್ದರೆ ನಾನು ಈ ರೀತಿಯಾದರೆ ಹೆಚ್ಚು ದಿವಸ ಬದುಕೊಲ್ಲ.''

''ಅಂದಹಾಗೆ ನೀನು ಏನೂ ಚಿಂತಿಸಬೇಡ. ಹೋಗು.''

ಅನಂತರ ಚೇನಿ ಹೊರಟು ಹೋದಳು. ಅವಳಿಗೆ ಬಹಳ ನೆಮ್ಮದಿ ಸಿಕ್ಕಿತು. ಹಾಗೂ ವಿಶ್ವಾಸ ಮೂಡಿತು.

ಗುಲಬ್‌ನ ಮನಸ್ಸಿನಲ್ಲಿ ಈಗಲೂ ಆಕೆಯ ಬಗ್ಗೆ ಸ್ನೇಹವಿದೆ.

ಗುಲಬ್ ಸ್ವಲ್ಪ ಹೊತ್ತಿನ ತನಕ ಅಲ್ಲೇ ನಿಂತಿದ್ದು ಚೇನಿ ಹೋಗುತ್ತಿದ್ದ ಕಡೆ ನೋಡುತ್ತಿದ್ದ. ಚೇನಿ ಈಗಲೂ ಮೊದಲಿನಂತೆಯೇ ಇದ್ದಾಳೆ. ನಾಮಕಾವಾಸ್ತೆಗೆ ಮದುವೆಯಾಯಿತು. ಆಕೆಯ ಗಂಡ ರೋಗಿಷ್ಠ. ಚೇನಿ ಸ್ಥಿತಿ ಕಂಡು ಅವನಿಗೆ ದುಃಖವಾಯಿತು.

ಅವನು ಕಾಲು ಹಾದಿಯಲ್ಲಿ ಹೋಗದೆ ಹುಲ್ಲಿನ ನಡುವೆ ನುಗ್ಗಿ ಮನೆಕಡೆ ಹೊರಟ.

ಆಗ ಹಿತವಾದ ಬಿಸಿಲು, ಹುಲ್ಲಿನ ಮೇಲೆ ಹರಡುತ್ತಿತ್ತು. ನದಿಯ ಕಡೆಯಿಂದ ಗಾಳಿ ತಣ್ಣಗೆ ಬೀಸುತ್ತಿತ್ತು. ಗಾಳಿ ಮೈ ಸೋಕಿದ ಕೂಡಲೇ ಆತ ಚೇನಿ ಮಾತು ಮರತೇ ಬಿಟ್ಟ. ಆಕಾಶದ ಕಡೆ ದೃಷ್ಟಿಸಿ ನೋಡಿದ; ಗಾಢವಾಗ ನೀಲಾಕಾಶ. ಎಲ್ಲಿಯೂ ಒಂದು ಚೂರೂ ಮೋಡ ಇಲ್ಲ. ನೀಲಾಕಾಶ ದಿಗಂತದಲ್ಲಿ ಕೆಳಗಿಳಿದು ಪೃಥ್ವಿಯನ್ನು ಸ್ಪರ್ಶಿಸುತ್ತಿರುವಂತೆ ಕಾಣುತ್ತದೆ.

ಗಾಳಿ ಬಡಿತದಿಂದಾಗಿ ಅಲುಗಾಡುತ್ತಿರುವ ಹುಲ್ಲು ಸರ್ರ್ ಸರ್ರ್ ಎಂದು ಶಬ್ದ ಮಾಡುತ್ತಿದೆ. ಬಿಸಿಲಿನಿಂದಾಗಿ ಅದರಲ್ಲಿ ಚೈತನ್ಯ ಮೂಡಿದೆ. ದಾರಿಯಿಲ್ಲದ ಕಡೆ ತಾನೇ ದಾರಿ ಮಾಡಿಕೊಂಡು ಮುಂದೆ ಮುಂದೆ ಹೋಗುತ್ತಿದ್ದಾನೆ.

ಆತ ಅಕಸ್ಮಾತ್ತಾಗಿ ಉದ್ದವಾಗಿ ಬೆಳೆದಿರೋ ಹುಲ್ಲಿನ ಮಧ್ಯೆ ನಿಂತ. ಸ್ವಲ್ಪ ಹೆದರಿದ.

"ತರಾ!"

ಅವಳೂ ನಿಂತಳು.

ತರಾ ಈ ಕಡೆ ಎಲ್ಲಿಗೆ ಹೋಗುತ್ತಾಳೆ? ಎಲ್ಲಿಂದ ಬಂದಿದ್ದಾಳೆ? ಈ ಕಡೆ ದಾರಿಯೇ ಇಲ್ಲವಲ್ಲಾ!

ತರಾ ಆತನ ಬಳಿ ಬಂದಳು.

"ತರಾ"

ಅವನ ಮುಂದೆ ತಲೆ ತಗ್ಗಿಸಿ ನಿಂತಳು.

"ನೀನು ಈ ಕಡೆ ಎಲ್ಲಿಗೆ ಹೋಗ್ತಿದ್ದೀಯೇ? ತರಾ"

"ಚಂದ್ರ ಬಂದಿದ್ದಾನೆ. ಬರಹೇಳ್ತಾನೆ."

"ನಾನು ಇಲ್ಲಿದ್ದೀನಿ ಅನ್ನೋದು ಹೇಗೆ ಗೊತ್ತಾಯಿತು?"

ತರಾ ಏನೂ ಮಾತನಾಡಲಿಲ್ಲ.

ತರಾ ಬಳಿ ಗುಲಬ್ ಬಂದ. ಅವಳ ಹೆಗಲಮೇಲೆ ಕೈಹಾಕಿ ಹೇಳಿದ - "ನಿಜವಾಗಿಯೂ ಚಂದ್ರ ಬಂದಿದ್ದಾನೆಯೆ?"

ತರಾ ಏನೂ ಮಾತನಾಡಲಿಲ್ಲ.

"ಹೇ ತರಾ. ನೀನು ಮೊದಲಿನ ಹಾಗೆ ನನ್ನ ಜೊತೆಯಲ್ಲಿ ಯಾಕೆ ಮಾತಾಡುವುದಿಲ್ಲ?"

ಸ್ವಲ್ಪ ಬಿಕ್ಕಿಬಿಕ್ಕಿ ಅಳುತ್ತಾ ಆಕೆ ಉತ್ತರಿಸಿದಳು - "ನೀವು .... ನೀವು ನನಗೆ ಏಕೆ ಮೋಸ ಮಾಡಿದಿರಿ?"

ಗುಲಬ್ ಮೌನವಾದ. ಏನೋ ಸ್ವಲ್ಪ ಹೇಳಬೇಕೆನಿಸಿದರೂ ಹೇಳಲಾಗಲಿಲ್ಲ. ಆತ ತರಾಳಿಗೆ ಮೋಸ ಮಾಡುವುದಿಲ್ಲ. ಆದರೆ 'ಇದು ಹೇಗೆ ಸಂಭವಿಸಿತು?'- ಎಂದು ಆತ ತರಾಳಿಗೆ ಸಮಜಾಯಿಷಿ ಸಹ ಹೇಳಲಾರ. ಆತನೇ ಇಲ್ಲಿಯವರೆಗೂ ಸರಿಯಾಗಿ ಅರ್ಥಮಾಡಿಕೊಂಡಿಲ್ಲ. ಈವೊತ್ತು ತರಾಳ ಈ ಪ್ರಶ್ನೆಗೆ ಅವನಲ್ಲಿ ಉತ್ತರವಿಲ್ಲ.

ಸ್ವಲ್ಪ ಹೊತ್ತು ಮೌನವಾಗಿದ್ದು ಗುಲಬ್ ಕೇಳಿದ - "ಮನೆಯಲ್ಲಿ ನಿಮ್ಮ ಚಿಕ್ಕಮ್ಮ ಇದ್ದಾಳೋ ಅಥವಾ ಇಲ್ಲವೋ?"

"ಇಲ್ಲ. ಸಿಪರಿಯಾ ಹಳ್ಳಿಗೆ ಹೋದಳು. ಯಾರ ಮನೆಯಲ್ಲೋ ಹುಂಜ ಇದೆಯಂತೆ. ಅದನ್ನು ಹುಡುಕಿಕೊಂಡು ಹೋಗಿದ್ದಾಳೆ."

ಗುಲಬ್ ಹುಲ್ಲನ್ನು ಕಾಲಿನಿಂದ ಚೆನ್ನಾಗಿತುಳಿದು ಸ್ವಲ್ಪಜಾಗ ಅಗಲ ಮಾಡಿದ. ಅನಂತರ ಹೇಳಿದ - "ಇಲ್ಲೇ ಸ್ವಲ್ಪ ಹೊತ್ತು ಕುಳಿತಿರೋಣ ಬಾ."

"ಬೇಡ. ಯಾರಾದರೂ ಬರಬಹುದು."

"ಯಾರು ಬರ್ತ್ತಾರೆ? ಇದೇನು ದಾರಿಯೇ? ಹುಲ್ಲಿನ ಈ ವಿಶಾಲವಾದ ಮೈದಾನದಲ್ಲಿ ನಾವಿರೋದು ಯಾರಿಗೆ ಗೊತ್ತಾಗುತ್ತೆ"

ಹಾಸಿಗೆಯೋಪಾದಿಯಲ್ಲಿದ್ದ ಹುಲ್ಲಿನ ಮೇಲೆ ಇಬ್ಬರೂ ಕುಳಿತುಕೊಂಡರು.

ಗುಲಬ್ ಹೇಳಿದ - "ಮನೆಯಲ್ಲಿ ನೀನು ಏನೂ ಮಾತನಾಡದೆ ಸದಾ ಖಿನ್ನಳಾಗಿರುತ್ತೀಯೇ. ನನಗೆ ಬಹಳ ನೋವಾಗುತ್ತೆ."

"ನೀವಿಬ್ಬರೂ ತಮಾಷೆ ಮಾಡುತ್ತಾ ಖುಷಿಯಾಗಿರುತ್ತೀರಿ. ನಾನು ಯಾವ ಸುಖಕ್ಕಾಗಿ ಹಾಗೆ ಮಾಡಲಿ?"

ಗುಲಬ್ ಹೇಳಿದ - "ನೀನು ಖಿನ್ನಳಾಗಿದ್ದರೆ ನನಗೆ ಬಹಳ ಬೇಸರ ಆಗುತ್ತೆ. ಮನೆಯಲ್ಲಿರೋದಿಕ್ಕೆ ನನಗೆ ಇಷ್ಟವಾಗುವುದಿಲ್ಲ. ನೀನು ಏನು ಯೋಚಿಸ್ತೀಯೋ ತಿಳಿಯೋದೇ ಇಲ್ಲ."

ಗುಲಬ್ ತರಾಳ ಕೈಹಿಡಿದುಕೊಂಡು ಹೇಳಿದ - "ಮೊದಲಿಗಿಂತ ದಪ್ಪಗೆ ಆಗಿದ್ದೀಯೆ."

ತರಾ ಏನೂ ಮಾತನಾಡದೆ ಏನೋ ಯೋಚಿಸುತ್ತಾ ಕುಳಿತಿದ್ದಳು.

ಆತ ಹೇಳಿದ - "ನನ್ನಲ್ಲಿ ನೀನು ಇಟ್ಟಿದ್ದ ಪ್ರೀತಿ ಮುಗಿದುಹೋಯಿತೇ?"

"ನನಗೆ ನಿಮ್ಮಲ್ಲಿ ಪ್ರೀತಿ ಇಲ್ಲದಿದ್ದರೆ ನಿಮ್ಮ ಮನೆ ಬಾಗಿಲಿಗೆ ಕಾಲಿಡುತ್ತಿರಲಿಲ್ಲ. ನೀವು ನನ್ನ ಪ್ರೀತಿಯನ್ನು ಮರೆತಿದ್ದೀರಿ. ಅದರರ್ಥ ನಾನೂ ಮರೆತಿದ್ದೀನಿ ಅಂತ ಅಲ್ಲ."

ಗುಲಬ್ ತನ್ನೆರಡು ತೋಳುಗಳಿಂದಲೂ ತರಾಳನ್ನು ಅಪ್ಪಿಕೊಂಡು ತನ್ನ ಕಡೆಗೆ ಎಳೆದುಕೊಂಡನು. ತರಾ ಸಹ ಆತನನ್ನು ಅಪ್ಪಿಕೊಂಡಳು.

ಸ್ವಲ್ಪ ಹೊತ್ತಾದ ಮೇಲೆ ಇಬ್ಬರೂ ಎದ್ದರು. ಗುಲಬ್ ಹೇಳಿದ- "ಈಗಲೇ ನೀನು ಹೋಗು. ನಾನು ಕೋಣನನ್ನು ಅಟ್ಟಿಕೊಂಡು ಬರ್ತೀನಿ."

ಮತ್ತೊಮ್ಮೆ ಗುಲಬ್‌ನ ಬಾಹುಪಾಶದಲ್ಲಿ ತರಾ ಬಂಧಿತಳಾದಳು.

ಕೋಣನನ್ನು ಹುಡುಕಿಕೊಂಡು ಗುಲಬ್ ಸಹ ನದಿಯ ದಡದ ಕಡೆಗೆ ಹೊರಟ. ಸ್ವಲ್ಪ ಹೊತ್ತಾದ ಮೇಲೆ ಕೋಣನ ಮೂಗುದಾರ ಹಿಡಿದುಕೊಂಡು ಮನೆಕಡೆ ಹೊರಟ.

ಕಾರ್ತಿಕ ಮಾಸದ ಸೂರ್ಯ ನೆತ್ತಿಯ ಮೇಲಿದ್ದ. ಹೊಂಬಿಸಿಲು ಎಲ್ಲ ಕಡೆ ಪಸರಿಸುತ್ತಾ ಬಾನಿನಿಂದ ಬುವಿಗಿಳಿಯುತ್ತಿತ್ತು.

ತನ್ನ ಗದ್ದೆಯ ಒಂದು ಮೂಲೆಯಲ್ಲಿ ನಿಂತು ಗುಲಬ್ ಗಾಳಿ ಬಡಿತಕ್ಕೆ ಓಲಾಡುತ್ತಾ ಹಸಿರಾಗಿರುವ ಬತ್ತದ ಬೆಳಸನ್ನು ತದೇಕ ಚಿತ್ತದಿಂದ ನೋಡಿದ. ಬತ್ತದ ಗದ್ದೆ ಹುಲುಸಾಗಿ ಬೆಳೆದಿದೆ. ಹಸಿರು ಪೈರು ಬೆಳೆದು ಹರಡಿಕೊಂಡಿದೆ. ಸಾಧಾರಣವಾಗಿ ಒಡಕಡೆದಿದೆ. ಎಲ್ಲವೂ ಇನ್ನೂ ಅಕ್ಕಿಯಾಗಿಲ್ಲ. ಇನ್ನೂ ಹಾಲುತುಂಬಿಕೊಂಡಿದೆ. ಆತನ ಮನಸ್ಸು ಜಯಭೇರಿಯಿಂದ ಅರಳಿತು. ನದಿಯ ದಡದವರೆಗೂ ಈ ದೊಡ್ಡ ಜಮೀನಿಗೆ ಆತನೇ ಒಡೆಯ. ಮತ್ತಾರೂ ಅಲ್ಲ. ಮುಂದಿನ ವರ್ಷ ಸುಮಾರು ಇನ್ನೂ ಆರು ಎಕರೆ ಆಬಾದು ಮಾಡಿದರೆ ಆಗ ಯಾವ ಚಿಂತೆಯೂ ಇರುವುದಿಲ್ಲ. ಈ ಸಾರಿ ಆತನ ಎತ್ತುಗಳು ಹಾಗೆಯೇ ಆರಾಮವಾಗಿವೆ. ಒಂದೇ ಕೋಣನನ್ನು ಕಟ್ಟಿಕೊಂಡು ಉಳುಮೆ ಮಾಡುತ್ತಾನೆ. ಅದೇ ಸಮಯದಲ್ಲಿ ಎತ್ತುಗಳನ್ನೂ ಕಟ್ಟಿ ಉಳುಮೆ ಮಾಡಲು ಒಬ್ಬನಿಗೆ ಹೇಗೆ ಸಾಧ್ಯ. ಯಾರಾದರೂ ಇನ್ನೊಬ್ಬರು ಜೊತೆಗೆ ಇದ್ದರೆ?.

ಬಹಳ ವಿಷಯಗಳನ್ನು ಕುರಿತು ಯೋಚಿಸುತ್ತಾ ಆನಂದಭರಿತನಾಗಿ ನಿಧಾನವಾಗಿ ಮನೆ ತಲುಪಿದ. ಅಷ್ಟು ಹೊತ್ತಿಗೆ ಕಪಾಹಿ ಸಹ ಬಂದಿದ್ದಳು.

# ಇಪ್ಪತ್ತೆರಡು

ಧನಶಿರಿಯ ವಕ್ಷದಲ್ಲಿ ಮತ್ತೊಂದು ಪ್ರವಾಹ ಬಂತು. ಅಷ್ಟು ತುಂಬು ಪ್ರವಾಹವೇನೂ ಅಲ್ಲ. ಈ ಸಾರಿ ಗುಲಚ್ ಇನ್ನೆರಡು ಎಕರೆ ಜಮೀನು ಆಬಾದು ಮಾಡಿದ. ಮೊದಲೇ ಮಾಡಿದ್ದ ಜಮೀನಿನ ವಾರ್ಷಿಕ ಪೋಡು-ಪಟ್ಟೆ ತನ್ನ ಹೆಸರಿಗೆ ಚಂದ್ರನ ಸಹಾಯದಿಂದ ಮಾಡಿಸಿದ. ಮೊದಲಿಗಿಂತ ಬಾತುಕೋಳಿ ಮತ್ತು ಕೋಳಿಗಳ ಸಂಖ್ಯೆ ಆತನ ಮನೆಯಲ್ಲಿ ಸ್ವಲ್ಪ ಹೆಚ್ಚಾಗಿದೆ. ಗುಲಚ್ ಹೊಸ ಉತ್ಸಾಹ ಮತ್ತು ಹೊಸ ಆಶೆಯಿಂದ ಕೆಲಸ ಮಾಡಿದ. ಇದೇ ಸಮಯ. ಆತನಿಗೆ ಈಗ ಯೌವ್ವನ. ಕೇವಲ ಇಪ್ಪತ್ತಾರು ವರ್ಷ ವಯಸ್ಸು. ಈಗ ಏನಾದರೂ ಸ್ವಲ್ಪ ಸಂಪಾದನೆ ಮಾಡದೆ ಹೋದರೆ ಮತ್ತೆ ಯಾವಾಗ ಮಾಡುವುದು?

ಕಪಾಹಿ ಮತ್ತು ತರಾ ಸಹ ಕೈಕಟ್ಟಿ ಕುಳಿತುಕೊಳ್ಳುವುದಿಲ್ಲ. ಒಂದಾದ ಮೇಲೊಂದು ಬಟ್ಟೆ ನೇಯ್ದು, ಅದನ್ನು ಮಾರಿ, ತರಕಾರಿ ಬೆಳೆದು ಅದನ್ನು ಸಹ ಸಂತೆಯಲ್ಲಿ ಮಾರಾಟ ಮಾಡಿ ಬಂದಷ್ಟು ಅಲ್ಪಸ್ವಲ್ಪ ಹಣ ಸಂಪಾದಿಸುತ್ತಾರೆ.

ತರಾ ಮೊದಲಿನಂತೆಯೇ ಉದಾಸೀನಳಾಗಿದ್ದಾಳೆ. ಮನೆಯಲ್ಲಿರುವಾಗ ಆಕೆ ಮಾತನಾಡುವುದೂ ಇಲ್ಲ, ನಗುವುದೂ ಇಲ್ಲ. ತಮಾಷೆ ಸಹ ಮಾಡುವುದಿಲ್ಲ. ಎಂದಾದರೂ ಕಪಾಹಿ ಎಲ್ಲಿಯಾದರೂ ಹೋದರೆ ಆಕೆ ಮತ್ತು ಗುಲಚ್ ಇಬ್ಬರೇ ಮನೆಯಲ್ಲಿರುತ್ತಾರೆ. ಆದರೆ ಆ ಸಮಯದಲ್ಲೂ ಆಕೆ ನಗುವುದಿಲ್ಲ; ಮಾತನಾಡುವುದೂ ಇಲ್ಲ. ಹತ್ತಿರಕ್ಕೆ ಬಂದು ಗುಲಚ್ ಪ್ರೀತಿಸಬಯಸಿದರೆ ಆಕೆ ದೂರ ಸರಿಯುತ್ತಾಳೆ. ಮತ್ತು ಹೀಗೆ ಹೇಳುತ್ತಾಳೆ :

"ಹಾಗೇನೇ ಪ್ರೀತಿಸಿ. ಆದರೆ ಇನ್ನೇನೂ ಮಾಡಬೇಡಿ."

ಗುಲಚ್ ಇಲ್ಲಿಯವರೆಗೂ ಮನೆಯಲ್ಲಿ ಯಾವುದೇ ಅಚಾತುರ್ಯವಾದ ಕಾರ್ಯ ಏನೂ ಮಾಡಲಿಲ್ಲ. ಖಿನ್ನ ಮನಸ್ಸಿನಿಂದ ಕುಳಿತಿರುವ ತರಾಳ ಕೈ-ಮುಖವನ್ನು ನೇವರಿಸಿ ಪ್ರೀತಿಸುತ್ತಿದ್ದನೇ ಹೊರತು ಮತ್ತೇನು ಮಾಡಬಲ್ಲ? ತನ್ನ ಮನಸ್ಸಿನ ಪ್ರೀತಿಯನ್ನು ತೋಡಿಕೊಳ್ಳುವ ಬಗೆ ಆತನಿಗೆ ಗೊತ್ತಿಲ್ಲ.

ಗುಲಚ್ ಸ್ವಲ್ಪ ಚಿಂತಾಕ್ರಾಂತನಾಗುತ್ತಾನೆ. ತರಾಳಿಗೆ ಏನೂ ಅರ್ಥವಾಗುವುದಿಲ್ಲ. ಆಕೆ ಅಷ್ಟೊಂದು ಮೌನವಾಗಿರುತ್ತಾಳೆ. ಯಾವಾಗ ಏನು ಯೋಚಿಸುತ್ತಾಳೆ, ಯಾವಾಗ ಏನೂ ಹೇಳುತ್ತಾಳೆ ಎಂಬುದು ಅರ್ಥವಾಗುವುದೇ ಇಲ್ಲ. ತರಾಳ ಮನಸ್ಸಿಗೆ ನೋವಾಗದ ಹಾಗೆ ನಡೆದುಕೊಳ್ಳಲು ಯಥಾಶಕ್ತಿ ಗುಲಚ್ ಪ್ರಯತ್ನಿಸುತ್ತಾನೆ.

ತಿಖಿರ್ ಇತ್ತೀಚೆಗೆ ಗುಲಚ್ ಮನೆಗೆ ಬರುತ್ತಾನೆ. ತಿಖಿರ್ ಜೊತೆಯಲ್ಲಿ ತರಾ ಹೆಚ್ಚಿಗೆ ಮಾತನಾಡುವುದಿಲ್ಲ. ಕೆಲವು ಸಾರಿ ಮಾತಾಡಲೇ ಬೇಕಾದ ಪ್ರಸಂಗ ಒದಗಿದರೆ ಒಂದೆರಡು ಮಾತನಾಡುತ್ತಾಳೆ. ಕಪಾಹಿಯ ಜೊತೆಯಲ್ಲೇ ಹೆಚ್ಚು ಹೊತ್ತು ಮಾತನಾಡುತ್ತಾ ಕುಳಿತಿದ್ದು ತಿಖಿರ್ ಹೊರಟು ಹೋಗುತ್ತಾನೆ. ತಿಖಿರ್ ಬಂದು ಹೋಗುವುದು, ಮಾತಿನ ಮೋಡಿ ಮೊದಲಾದವುಗಳಿಂದ ತರಾಳ ಬಗ್ಗೆ ತಿಖಿರನಿಗೆ ಒಲವು ಇದೆ ಎಂಬುದು ಕಪಾಹಿಗೆ ಅಷ್ಟು

ಹೊತ್ತಿಗೆ ಅರ್ಥವಾಗಿತ್ತು. ಇತ್ತೀಚೆಗೆ ಕಪಾಹಿ ಮನೆಗೆ ಬರುವಾಗ ತಿಖರ್ ಸ್ವಲ್ಪ ಠಾಕೂಠೀಕಾಗಿ ಡ್ರೆಸ್ ಮಾಡಿಕೊಂಡು ಬರ್‍ತಾನೆ. ಬಾಚಲು ಬಟ್ಟೆ ತೆಗೆದು ತಲೆ ಬಾಚಿಕೊಂಡು. ಷರಟು ಹಾಕಿಕೊಂಡು ಕರವಸ್ತ್ರವನ್ನು ಮಡಿಚಿಕೊಂಡು ಅದರ ತುದಿ ಜೇಬಿನಿಂದ ಹೊರಗೆ ಕಾಣಿಸುವಂತೆ ಜೇಬಿನಲ್ಲಿಟ್ಟುಕೊಂಡು ಬರ್‍ತಾನೆ. ಇದುವರೆಗೂ ಆತ ತನ್ನ ಮನಸ್ಸಿನ ಅಭಿಪ್ರಾಯವನ್ನು ಯಾರಿಗೂ ತಿಳಿಸಿಲ್ಲ. ಆತ ಲೋಕಾಭಿರಾಮವಾಗಿ ಕಪಾಹಿ ಜೊತೆಯಲ್ಲಿ ಬೇಸಾಯ ಮತ್ತು ದನಕರುಗಳ ವಿಷಯ ಕುರಿತು ಮಾತನಾಡುತ್ತಾನೆ.

ಆತ ಒಂದು ವಿಷಯ ಯೋಚಿಸಿ ತನ್ನ ಮನಸ್ಸಿನಲ್ಲೇ ಇಟ್ಟುಕೊಂಡಿದ್ದಾನೆ. ಅವರ ಮನೆಗೆ ಗುಲಬ್ ಆಗಾಗ್ಗೆ ಬರುತ್ತಿರುತ್ತಾನೆ. ಚೇನಿಮಾಇ ಜೊತೆಯಲ್ಲಿ ಮಾತಾಡುತ್ತಾನೆ. ಕಲಾಈ ಜೊತೆಯಲ್ಲೂ ಮಾತನಾಡುತ್ತಾನೆ. ಚೇನಿಮಾಇ ಆಗಾಗ್ಗೆ ಕಪಾಹಿ ಮನೆಗೆ ಬರುತ್ತಿರುತ್ತಾಳೆ. ಆತ ತನ್ನ ಅಭಿಪ್ರಾಯವನ್ನು ಅತ್ತಿಗೆ ಚೇನಿಗೆ ತಿಳಿಸಿದರೆ ಅವಳು ಕಪಾಹಿ ಮತ್ತು ಗುಲಬ್ ಅಭಿಪ್ರಾಯವನ್ನು ತಿಳಿದುಕೊಳ್ಳುತ್ತಾಳೆ. ಆದರೆ ಇಲ್ಲಿಯವರೆಗೂ ಚೇನಿಮಾಇ ಮುಂದೆ ಹೇಳಲು ಅವನಿಗೆ ಧೈರ್ಯ ಬರುತ್ತಿಲ್ಲ. ಅವನ ಅತ್ತಿಗೆ ಏನು ಮಾಡ್ತಾಳೋ! ಅದಲ್ಲದೆ ಕಲಾಈ ಕಟ್ಟಿಕೊಂಡು ಚೇನಿಮಾಇ ಸುಖವಾಗಿಲ್ಲ ಎಂಬುದನ್ನೂ ತಿಖರ್ ಅರ್ಥ ಮಾಡಿಕೊಂಡಿದ್ದ. ಈ ಮನೆಯಲ್ಲಿ ಅವಳು ನಿರ್ವಾಹವಿಲ್ಲದೆ ಇದ್ದಾಳೆ. ಆದುದರಿಂದ ತಿಖರ್‌ನಿಗಾಗಿ ಚೇನಿಮಾಇ ಏನಾದರೂ ಸಹಾಯ ಮಾಡುತ್ತಾಳೆಂಬ ಆಶೆ ಬಹಳ ಕಡಿಮೆ.

ತಿಖರ್ ಇನ್ನೂ ಸ್ವಲ್ಪ ಕಾಲ ಕಾಯಲು ಸಿದ್ಧನಾಗಿದ್ದಾನೆ. ಆತನಿಗೆ ತರಾಳನ್ನು ಕೊಟ್ಟು ಮದುವೆ ಮಾಡೋದಿಲ್ಲ ಅನ್ನೋದಕ್ಕೆ ಕಾರಣವೇ ಇಲ್ಲ. ಆಕೆಯ ಜೊತೆಯಲ್ಲಿ ಮಾತುಕತೆ ಆಡಲು ಅವಕಾಶ ಸಿಕ್ಕಿದರೆ ಸಾಕು. ಆಕೆಯನ್ನು ಕದ್ದು ಕರೆದುಕೊಂಡು ಬರಬಲ್ಲ. ಆದರೆ ಆ ಅವಕಾಶ ಇಲ್ಲಿಯವರೆಗೂ ಸಿಕ್ಕಲಿಲ್ಲ.

ಕಳೆದ ಚೈತ್ರ ಮಾಸದಲ್ಲಿ ಬಸೀರತ್ ಬಂದಿದ್ದ. ಆತ ಗುಲಬ್‌ನ ಬೇಸಾಯದ ಬಗ್ಗೆ ವಿಚಾರಿಸಿಕೊಂಡು ಹೋಗಿದ್ದ. ಬಸೀರತ್ ಬೇಡ ಅಂದರೂ ಗುಲಬ್‌ನೇ ಅವನಿಗೆ ಹತ್ತು ರೂಪಾಯಿ ಕೊಟ್ಟ. ಕೋಣ ಕೊಂಡುಕೊಳ್ಳಲು ಕೊಟ್ಟಿದ್ದ ದುಡ್ಡನ್ನು ಮುಂದಿನ ವರ್ಷ ಕೊಡುವುದಾಗಿ ವಿನಯದಿಂದ ತಿಳಿಸಿದ. ಕೋಣವನ್ನು ಕೊಂಡುಕೊಳ್ಳಲು ಸಮಯಕ್ಕೆ ಸರಿಯಾಗಿ ಹಣ ಕೊಟ್ಟಿದ್ದರಿಂದ ಆತ ಬಸೀರತ್‌ಗೆ ಕೃತಜ್ಞನಾಗಿದ್ದಾನೆ.

ಒಂದೆರಡು ಮಾಮೂಲಿ ವಿಷಯ ಮಾತನಾಡಿ ಬಸೀರತ್ ಹೊರಟು ಹೋದ. ಆತ ಧನಶಿರಿಯ ತೀರದ ಕಡೆ ತಂಗಿದ್ದಾನೆ. ಆದರೆ ತನ್ನವರು ಅಂತ ಆತನಿಗೆ ಯಾರೂ ಇಲ್ಲ. ಲೇವಾದೇವಿಗಾರರ ಸ್ನೇಹ ಬೆಳಸಿ, ವ್ಯಾಪಾರ-ಸಾಪಾರ ಮಾಡಿ ಆತ ಸ್ವಲ್ಪ ಹಣ ಸಂಪಾದಿಸಿದ್ದಾನೆ. ಆದರೆ ಇನ್ನೂ ಮದುವೆ ಮಾಡಿಕೊಂಡಿಲ್ಲ. ಆತನಿಗೂ ಸುಮಾರು ಮೂವತ್ತೈದು ವರ್ಷ ವಯಸ್ಸು.

''ಮದುವೆ ಮಾಡಿಕೊಳ್ಳಬೇಕಾಗಿತ್ತು'' ಗುಲಬ್ ಹೇಳಿದ.

ಏನೂ ಮಾತನಾಡದೆ ಬಸೀರತ್ ನಕ್ಕ. ಗುಲಬ್‌ನಿಗೆ ಅದು ಅರ್ಥವಾಗಲಿಲ್ಲ. ಅರ್ಥ ಮಾಡಿಕೊಳ್ಳಲೂ ಆತ ಪ್ರಯತ್ನಿಸಲೂ ಇಲ್ಲ. ಕೆಲವರಂತೂ ಮದುವೆ ಮಾಡಿಕೊಳ್ಳೋದಿಲ್ಲ.

ಗುಲಬ್‌ನ ತಂದೆಗೆ ಸಖತ್ತು ಕಾಯಿಲೆ ಅನ್ನೋ ಸುದ್ದಿಯನ್ನು ಒಂದು ದಿನ ಚಂದ್ರ ಬಂದು

ತಿಳಿಸಿ ಹೋದ - "ಉಳಿಯೋ ಆಶೆ ತೀರಾ ಕಡಿಮೆ. ಬಹಳ ಸೀರಿಯಸ್. ನೀನು ಹೋಗಿ ಒಂದು ಸಾರಿ ನೋಡಿಕೊಂಡು ಬಾ."

ಕಪಾಹಿ ಜೊತೆಯಲ್ಲಿ ಆ ವಿಷಯ ಕುರಿತು ಗುಲಬ್ ಚರ್ಚೆ ಮಾಡಿದ. ಆಕೆ ಚಹಾ ಮತ್ತು ಬರಾ ಅಕ್ಕಿ, ಉದ್ದಿನ ಬೇಳೆ ಮತ್ತು ಸ್ವಲ್ಪ ಸಿಹಿ ಆಲೂಗಡ್ಡೆ - ಇವುಗಳನ್ನು ಒಂದು ಗಂಟಿನಲ್ಲಿ ಕಟ್ಟಿ ಗುಲಬ್‌ಗೆ ಕೈಗೆ ಕೊಟ್ಟು ಕಪಾಹಿ ಹೇಳಿದಳು - "ನಿಮ್ಮ ತಂದೆ ಜೊತೆಯಲ್ಲಿ ನೀವು ಅಹಂಕಾರದಿಂದ ಹಠ ಸಾಧಿಸೋದು ಜಾಸ್ತಿಯಾಗಿದೆ. ಬದುಕಿರೋವಾಗ ಹೋಗಿ ನೋಡದೆ ಆ ಮುದುಕ ಕಣ್ಮುಚ್ಚಿದ ಮೇಲೆ ನಿಮ್ಮ ಅಣ್ಣ ಆಸ್ತಿಪಾಸ್ತಿಯಲ್ಲಿ ನಿಮಗೆ ಹಿಸ್ಸೆ ಕೊಡುತ್ತಾನೆಯೇ? ನೀವೇಕೆ ಹೋಗೋದಿಲ್ಲ?"

ಗಂಟನ್ನು ಒಂದು ಕಡೆ ಹೆಗಲಮೇಲೆ ಹಾಕಿಕೊಂಡು ನಾಚಿಕೆ ಮತ್ತು ಸಂಕೋಚದಿಂದ ಡಾಲಿಮ್ ಹಳ್ಳಿಯ ಕಡೆ ಗುಲಬ್ ಹೊರಟ.

ಆಗ ಆತನ ತಂದೆಗೆ ಮಾತು ನಿಂತು ಹೋಗಿತ್ತು. ಆದಾಗ್ಯೂ ಕಿರಿಯ ಮಗ ಬಂದದ್ದು ನೋಡಿ ಮುದುಕನ ಮನಸ್ಸಿಗೆ ಸಂತೋಷವಾಯಿತು.

ತಂದೆ ಸತ್ತ ನಂತರ ಇಬ್ಬರೂ ಸಹೋದರರು ತುಂಬಾ ಅತ್ತರು. ಆತನ ತಾಯಿ ಸಹ ಅತ್ತಳು.

ಸತ್ತ ಮೂರು ದಿವಸಗಳನಂತರ ಹಳ್ಳಿಯವರು ಸಲಹೆ ನೀಡಿದರು - "ಸದ್ಯಕ್ಕೆ ಮುದುಕನ ಆಸ್ತಿ ಒಟ್ಟಿಗೇ ಇರಲಿ. ಗುಲಬ್ ಪಾಹಿಗೆ ಹೋದ ಮೇಲೆ ಸ್ವಲ್ಪ ಆಸ್ತಿಪಾಸ್ತಿ ಮಾಡಿದ್ದಾನೆ. ಇಂಥ ಸಂದರ್ಭದಲ್ಲಿ ಆತ ಜಮೀನಿನ ಹಿಸ್ಸೆಗೆ ಆಶೆ ಪಡಬಾರದು. ಮುದುಕನ ಕಾಯಿಲೆಯಲ್ಲಿ ಹಿರಿಯವನು ಸಾಕಷ್ಟು ಖರ್ಚು ಮಾಡಿದ್ದಾನೆ. ಅನಂತರ ಇಬ್ಬರೂ ಸೋದರರು ಆಸ್ತಿಪಾಸ್ತಿ ಭಾಗ ಮಾಡಿಕೊಳ್ಳಲಿ." ಗುಲಬ್ ಶಾಂತವಾಗಿದ್ದ. ತನ್ನ ತಂದೆಯ ಸೇವೆ-ಶುಶ್ರೂಷೆ ಸ್ವಲ್ಪವೂ ಮಾಡಲಿಲ್ಲವಲ್ಲಾ ಎಂಬ ದುಃಖ ಆತನನ್ನು ಬಾಧಿಸುತ್ತಿತ್ತು. ಆದುದರಿಂದ ಮುದುಕನ ತೀರ್ಥದರ್ಶನದ ಖರ್ಚಿಗಾಗಿ ಹದಿನೈದು ರೂಪಾಯಿ ಕೊಟ್ಟ. ಈಗ ಆತ ಸ್ವಲ್ಪ ದುಡ್ಡುಕಾಸು ಕೊಡಬಲ್ಲ. ಆತನ ಮುಖ ನೋಡಿ ತಿಳಿದುಕೊಳ್ಳಬಹುದು. ಮುಖ ಸದಾ ಅರಳಿರುತ್ತದೆ.

ತೀರ್ಥದರ್ಶನ ಮುಗಿದ ಮೇಲೆ ಹಳ್ಳಿಯ ಹಿರಿಯರು ಮುದುಕ ಕೂಡಿಟ್ಟಿದ್ದ ಹಣವನ್ನು ಲೆಕ್ಕಾಚಾರ ಹಾಕಿದರು. ನಗದು ಹಣ ಏಳಿಪ್ಪತ್ತು ಇತ್ತು. ಮುದುಕ ಇಷ್ಟೊಂದು ಹಣ ಯಾಕೆ ಉಳಿಸಿ ಇಟ್ಟಿದ್ದ ಎಂದು ಬಹಳ ಮಂದಿ ಆಶ್ಚರ್ಯಪಟ್ಟರು. ಎಲ್ಲರ ತೀರ್ಮಾನದಂತೆ ಆ ಹಣದಲ್ಲಿ ನೂರು ರೂಪಾಯಿಗಳನ್ನು ಮುದುಕಿಗೆ ಕೊಟ್ಟರು. ಅವಳ ಕೊನೆಗಾಲದ ದಿನಗಳಲ್ಲಿ ಯಾರು ಅವಳ ಸೇವೆ-ಶುಶ್ರೂಷೆ ಮಾಡುತ್ತಾರೋ ಅವರಿಗೆ ಆ ಹಣ ಸಲ್ಲುತ್ತದೆ. ಮುದುಕಿ ಈ ವಯಸ್ಸಿನಲ್ಲಿ ತನಗಾಗಿ ಒಡವೆ ಮಾಡಿಸಿಕೊಳ್ಳುತ್ತಾಳೆಯೋ? ಬಾಕಿ ಹಣದಲ್ಲಿ ಇಪ್ಪತ್ತು ರೂಪಾಯಿಗಳನ್ನು ಗುಲಬ್‌ಗೆ ಕೊಟ್ಟರು. ಹಿರಿಯವನಿಗೂ ಇಪ್ಪತ್ತು ರೂಪಾಯಿ ಕೊಟ್ಟರು. ಹದಿಮೂರು ರೂಪಾಯಿ ಸೊಸೆಗೆ ಕೊಟ್ಟರು. ಆಕೆ ಮುದುಕನಿಗೆ ಬಹಳ ಸೇವೆ ಮಾಡಿದ್ದಳು.

ಮುದುಕಿ ಹೇಳಿದಳು - "ಹಳ್ಳಿಯ ಹಿರಿಯರ ಎದುರಿನಲ್ಲೇ ನಾನೊಂದು ಮಾತು ಹೇಳ ಬಯಸುತ್ತೇನೆ. ನನ್ನ ದೊರೆ ಹೊರಟು ಹೋದ. ನಾನು ತಾನೇ ಎಷ್ಟು ದಿನ ಬದುಕಿರ್ತೀನಿ? ಹಿರಿಯ ಸೊಸೆಯನ್ನು ನೋಡಿ ತಂದವಳು ನಾನೇ. ಅವಳಿಗೆ ನಾನು ಏನೂ ಸಹಾಯ ಮಾಡಿಲ್ಲ. ಕಿರಿಯ ಸೊಸೆಯನ್ನು ಈವೊತ್ತಿನವರೆಗೂ ನೋಡಲಿಲ್ಲ. ನಾನು ಒಡವೆ ಹಾಕಿಕೊಳ್ಳುವ ದಿನ

ಕಳೆದು ಹೋದುವು. ಈಗ ನನ್ನ ಹತ್ತಿರ 'ಬಿರಿ'(ಒಂದು ಒಡವೆ), ಮಣಿಸರ, ಅರಳಿನ ಉಂಗುರ ಇವೆ. ಮಣಿಸರ ನನ್ನ ಗಂಡ ತೆಗೆದುಕೊಟ್ಟಿದ್ದ. ನಾನು ಬದುಕಿರುವ ತನಕ ಅದನ್ನು ಯಾರಿಗೂ ಕೊಡೊಲ್ಲ. ನನ್ನ ಈ ಎರಡು ಉಂಗುರಗಳಲ್ಲಿ ಒಂದನ್ನು ಹಿರಿಯ ಸೊಸೆಗೆ ಕೊಡ್ತೀನಿ. ಒಂದನ್ನು ಕಿರಿಯ ಮಗನಿಗೆ ಕೊಡ್ತೀನಿ. ಈ 'ಬಿರಿ' ಕಿರಿಯ ಸೊಸೆಗೆ ಕೊಡ್ತೀನಿ. ಅವಳ ಮದುವೆಯಲ್ಲಿ ನಾನೇನೂ ಕೊಡಲಿಲ್ಲ."

ಗುಲಬ್ ಕೈನೀಡಿ ತಾಯಿಯಿಂದ ಒಡವೆ ತೆಗೆದುಕೊಂಡ. ಯಾರೂ ಚಕಾರ ಎತ್ತಲಿಲ್ಲ. ಆಕ್ಷೇಪಿಸಲು ಅವಕಾಶವಿರಲಿಲ್ಲ. ತಾಯಿ ತನ್ನ ಪದಾರ್ಥಗಳನ್ನು ಇಷ್ಟ ಬಂದವರಿಗೆ ಕೊಡುತ್ತಾಳೆ. ಇಷ್ಟವಿಲ್ಲದವರಿಗೆ ಕೊಡೊಲ್ಲ.

ಬಿರಿ, ಉಂಗುರ, ಇಪ್ಪತ್ತು ರೂಪಾಯಿ ಮತ್ತು ತೀರ್ಥದರ್ಶನದ ಕಡಲೆ ಮತ್ತು ತೆಂಗಿನಕಾಯಿ ತೆಗೆದುಕೊಂಡು ಗುಲಬ್ ತನ್ನ ಮನೆಗೆ ಬಂದ. ಮುದುಕ ಸತ್ತದ್ದು ಆಗಲೇ ಕಪಾಹಿಗೆ ಗೊತ್ತಾಗಿತ್ತು. ಆದುದರಿಂದ ನಾಲ್ಕು ದಿವಸಗಳಾದ ಮೇಲೆ ಗುಲಬ್ ಬಂದರೂ ಅವಳು ಏನೂ ಮಾತಾಡಲಿಲ್ಲ. ಬಹುಶಃ ಮುದುಕ ಸತ್ತಿದ್ದಕ್ಕೆ ಅಳೋದಕ್ಕೆ ಆಕೆಗೆ ಯಾವುದೂ ಕಾರಣ ಸಿಗಲಿಲ್ಲ. ಆದಾಗ್ಯೂ ಮುದುಕನ ಬಗ್ಗೆ ಒಂದೆರಡು ಮಾತು ಕೇಳಿ ಆತನನ್ನು ಸಮಾಧಾನಪಡಿಸಲು ಪ್ರಯತ್ನಿಸಿದಳು. ತಂದೆ ಸತ್ತಿದ್ದು ಗುಲಬ್‌ನ ಮನಸ್ಸಿಗೆ ನೋವಾಯಿತು. ಆದರೆ ಹೆಂಗಸರ ಮುಂದೆ ಅಳೋದು-ಕರೆಯೋದು ಆತನಿಗೆ ಸರಿಯಲ್ಲವೆನಿಸಿತು. ಆದುದರಿಂದ ಕಟ್ಟಿ ಹಾಕಿದ್ದ ಕೋಣನನ್ನು ಬಿಚ್ಚಿ ಹಿಡಿದುಕೊಂಡು ನದಿಯ ದಡದ ಕಡೆ ಹೊರಟ. ಅಲ್ಲಿ ಕುಳಿತು ಗಟ್ಟಿಯಾಗಿ ಹಸುಗೂಸಿನಂತೆ ಅತ್ತ. ತಂದೆ ತೀರಿಕೊಂಡರೆ ಏನಾಗುತ್ತೆಂಬುದು ಆತನಿಗೆ ಇಂದು ಅರ್ಥವಾಯಿತು.

ನದಿಯ ದಡದಲ್ಲಿ ಒಬ್ಬರೇ ಕುಳಿತು ಅತ್ತೂ ಕರೆದೂ ಬಂದಿದ್ದಾನೆಂಬುದು ಆತನ ಮುಖ ನೋಡಿದ ಕೂಡಲೇ ತರಾ ಅರ್ಥ ಮಾಡಿಕೊಂಡಳು. ಆಕೆ ಏನೂ ಮಾತಾಡಲಿಲ್ಲ.

ರಾತ್ರಿ ಎಲ್ಲರೂ ಮಲಗಿಕೊಂಡರು. ಇತ್ತೀಚೆಗೆ ಗುಲಬ್, ಕಪಾಹಿ ಮತ್ತು ತರಾ ಮೂವರೂ ಬೇರೆ ಬೇರೆ ಹಾಸಿಗೆಯಲ್ಲಿ ಮಲಗುತ್ತಿದ್ದರು. ಏಂದಾದರೊಮ್ಮೆ ಯಾರಾದರೂ ನೆಂಟರಿಷ್ಟರು ಬಂದರೆ ಮಾತ್ರ ಗುಲಬ್ ಬಂದು ಕಪಾಹಿ ಹಾಸಿಗೆಯಲ್ಲಿ ಮಲಗುತ್ತಿದ್ದ. ತರಾ ಯಾವಾಗಲೂ ಒಬ್ಬಳೇ ಮಲಗುತ್ತಿದ್ದಳು. ಅವಳ ರೂಮು ಸಹ ಪ್ರತ್ಯೇಕವಾಗಿತ್ತು.

ರಾತ್ರಿ ಬಹಳ ಹೊತ್ತಾಗಿರಲಿಲ್ಲ. ಆದರೆ ಇಡೀ ದಿನದ ಶ್ರಮದಿಂದಾಗಿ ರಾತ್ರಿ ಹೊತ್ತು ಹಾಸಿಗೆಯ ಮೇಲೆ ಮಲಗಿದ ಕೂಡಲೇ ಕಪಾಹಿಗೆ ನಿದ್ರೆ ಹತ್ತುತ್ತದೆ. ಈ ಪೊತ್ತು ಸಹ ಕಪಾಹಿಗೆ ಗಾಢ ನಿದ್ರೆ ಹತ್ತಿತ್ತು.

ಬಹಳ ಸಾವಧಾನದಿಂದ ತರಾ ತನ್ನ ಹಾಸಿಗೆಯಿಂದ ಎದ್ದಳು. ಲಾಟೀನು ಆರಿತ್ತು. ಕತ್ತಲೆಯಲ್ಲೇ ಬಂದು ಆಕೆ ಗುಲಬ್‌ನ ಹತ್ತಿರ ನಿಂತುಕೊಂಡಳು. ಮಲಗಿದ್ದ ಗುಲಬ್‌ನ ದೇಹದ ಮೇಲೆ ತನ್ನ ಕೈ ಇಟ್ಟಳು. ಗುಲಬ್‌ನಿಗೆ ನಿದ್ದೆ ಹತ್ತಿರಲಿಲ್ಲ. ಆತ ತರಾ ಕೈಯಿನ ಮೇಲೆ ತನ್ನ ಕೈಯಿಟ್ಟ. ಅದು ಕಪಾಹಿಯ ಕೈ ಅಲ್ಲ. ತರಾಳ ಕೈ ಎಂದು ಗುರುತಿಸಿದ.

"ತರಾ..................."

"ಗಟ್ಟಿಯಾಗಿ ಮಾತನಾಡಬೇಡಿ."

"ಯಾಕೆ ಬಂದೆ? ನಿದ್ದೆ ಬರಲಿಲ್ವೇ?" - ಆತ ಪಿಸುಮಾತಿನಲ್ಲಿ ಕೇಳಿದ.

ಆತನ ಪಿಸುಮಾತಿನಲ್ಲಿ ರೋದನ ಹಾಸುಹೊಕ್ಕಾಗಿತ್ತು.

ಏನೂ ಮಾತನಾಡದೆ ತರಾ ಆತನ ತಲೆ ನೇವರಿಸಿದಳು. ಆತನ ಮುಖ ಮತ್ತು ಕಣ್ಣುಗಳನ್ನು ಪ್ರೀತಿಯಿಂದ ನೇವರಿಸುತ್ತಾ ಹೇಳಿದಳು - "ಏತಕ್ಕೆ ಅಳುತ್ತೀರಿ? ಈವೊತ್ತು ಇಡೀ ದಿನ ಅತ್ತಿದ್ದೀರಿ. ತುಂಬಾ ದುಃಖ ಆಗಿದೆ ಅಲ್ವೇ?"

ಒಬ್ಬ ಮುಗ್ಧ ಹಾಗೂ ಅನಾಥ ಶಿಶುವಿನಂತೆ ಗುಲಬ್ ತನ್ನ ತಲೆಯನ್ನು ತರಾ ಮಡಿಲಿನಲ್ಲಿಟ್ಟ. ತರಾ ಆತನ ಕೂದಲುಗಳ ಮಧ್ಯೆ ಮಧ್ಯೆ ಕೈಯಾಡಿಸುತ್ತಾ ತಲೆ ಹಾಗೂ ಬೆನ್ನನ್ನು ನೇವರಿಸಿದಳು. ಈಕೆ ತರಾ ಅಲ್ಲ, ವಾತ್ಸಲ್ಯಮಯಿ ತಾಯಿ ಎಂದು ಗುಲಬ್‌ನಿಗೆ ಅನ್ನಿಸಿತು. ಆತನಿಗೆ ಇನ್ನೂ ಹೆಚ್ಚಾಗಿ ಅಳು ಬಂತು.

ಗುಲಬ್ ಬಹಳ ಹೊತ್ತಿನವರೆಗೂ ಅದೇ ರೀತಿ ತರಾಳ ಮಡಿಲಿನಲ್ಲಿ ತಲೆಯಿಟ್ಟುಕೊಂಡೇ ಇದ್ದ. ತರಾ ಆತ ಮುಖ, ತಲೆ ಮತ್ತು ದೇಹವನ್ನು ನೇವರಿಸುತ್ತಾ ಆತನನ್ನು ಸಮಾಧಾನ ಪಡಿಸಲು ಪ್ರಯತ್ನಿಸಿದಳು.

ಆತನ ಮುಖದ ಹತ್ತಿರ ಹೋಗಿ ತರಾ ಪಿಸು ಮಾತಿನಲ್ಲಿ ಹೇಳಿದಳು- "ನಿಮ್ಮ ದುಃಖ ನೋಡಿ ನನಗೆ ಬಹಳ ನೋವಾಗುತ್ತದೆ. ನೀವು ಅಳಬೇಡಿ."

ಗುಲಬ್ ಅಸಹಾಯಕನಂತೆ ತನ್ನ ಶರೀರದ ಮೇಲೆ ಬಾಗಿದ್ದ ತರಾಳ ಕೊರಳನ್ನು ಅಪ್ಪಿಕೊಂಡ. ಆತ ಸುತರಾಂ ನಿಸ್ಸಹಾಯಕನಾಗಿ ಒಂದು ನಿಶ್ಚಿತ ಆಶ್ರಯಕ್ಕಾಗಿ ಹುಡುಕಾಡುತ್ತಿರುವವನಂತೆ ಕಂಡ. ತರಾ ಹೇಳಿದಳು- "ನಾನಂತೂ ಇದ್ದೇನೆ. ಇಷ್ಟೊಂದು ಚಿಂತೆ ಯಾಕೆ?"

ತರಾಳನ್ನು ಗುಲಬ್ ತನ್ನ ಹತ್ತಿರಕ್ಕೆ ಎಳೆದುಕೊಂಡು ಆಕೆಯ ಕೆನ್ನೆಯ ಮೇಲೆ ಒತ್ತಿ ಕೊಟ್ಟು, ತನ್ನ ಕೆನ್ನೆಗಳನ್ನಿಟ್ಟ. ತರಾ ಸಹ ಸಾಮಿಪ್ಯ ಹಾಗೂ ಪರಮ ವಿಶ್ವಾಸದಿಂದ ಆತನ ದುಃಖವನ್ನು ಮರೆಸಲು ಪ್ರಯತ್ನಿಸಿದಳು.

ಆ ಸಮಯದಲ್ಲಿ ಕಪಾಹಿ ಮತ್ತೊಂದು ರೂಮಿನಲ್ಲಿ ಗಾಢ ನಿದ್ರೆಯಲ್ಲಿದ್ದಳು.

ಹಾಸಿಗೆಯಿಂದ ಎದ್ದು ಗುಲಬ್‌ನ ಕೆನ್ನೆಗಳ ಮೇಲೆ ಪ್ರೀತಿಯಿಂದ ತನ್ನ ಕೆನ್ನೆಯನ್ನು ಉಜ್ಜುತ್ತಾ ತರಾ ಹೇಳಿದಳು- "ಇನ್ನೂ ನೀವು ಅಳೋದಾದರೆ ನಾನೂ ಅಳ್ತೀನಿ."

ಅನಂತರ ಆಕೆ ತನ್ನ ಹಾಸಿಗೆ ಬಳಿ ಹೋದಳು.

ಗುಲಬ್ ಚಿಕ್ಕ ಹುಡುಗ.

ಗುಲಬ್ ಮುಗ್ಧ ಶಿಶು.

ತಲೆ ನೇವರಿಸಿ ಸಮಾಧಾನ ಪಡಿಸದ್ದಿದ್ದರೆ ಆತ ಅಳುತ್ತಲೇ ಇರುತ್ತಾನೆ. ತರಾ ಮಲಗಿಕೊಳ್ಳುತ್ತಾ ಯೋಚಿಸಿದಳು.

ಮಾರನೆಯ ದಿನ 'ಬಿರಿ'ಯನ್ನು ಕಪಾಹಿ ಕೈಗೆ ಕೊಟ್ಟು ಗುಲಬ್ ಹೇಳಿದ - "ನನ್ನ ತಾಯಿ ನಿನಗೆ ಇದನ್ನು ಕೊಟ್ಟಿದ್ದಾಳೆ."

ಕಪಾಹಿ ಆಗಲೇ 'ಬಿರಿ'ಯನ್ನು ಹಾಕಿಕೊಂಡಳು. ಆಕೆಯ ಮುಖ ಆನಂದದಿಂದ ಅರಳಿತು.

"ತರಾ, ಈ ಕಡೆ ಬಾ ನೋಡು. ಹೇಗಿದೆ?"

ತರಾ ಅವನ ಹತ್ತಿರಕ್ಕೆ ಬಂದು ಏನೂ ಮಾತಾಡದೆ ತಲೆ ತಗ್ಗಿಸಿಕೊಂಡು ನಿಂತಳು.

'ಈ ಉಂಗುರ ನಿನ್ನ ಯಾವ ಬೆರಳಿಗೆ ಆಗುತ್ತೆ ನೋಡು. ಇದನ್ನು ನನ್ನ ತಾಯಿ ನನಗೆ

ಕೊಟ್ಟಿದ್ದಳು. ನನಗೆ ಅದರ ಅವಶ್ಯಕತೆಯಾದರೂ ಏನು?"

ತರಾ ಉಂಗುರ ಹಾಕಿಕೊಂಡಳು.

"ನಿಮ್ಮ ಚಿಕ್ಕಮ್ಮನಿಗೆ ತೋರಿಸು."

ಇಂದು ಗುಲಬ್‌ನಿಗೆ ಆನಂದವಾಯಿತು. ಕಪಾಹಿ ಮತ್ತು ತರಾ ಇಬ್ಬರಿಗೂ ವಂಶದ ಉತ್ತರಾಧಿಕಾರದ ರೂಪದಲ್ಲಿ ಒಬ್ಬೊಬ್ಬರಿಗೊಂದು ಒಡವೆ ಸಿಕ್ಕಿದೆ. ಸ್ವಲ್ಪ ದಿನಗಳಾದ ಮೇಲೆ ನಮ್ಮ ತಾಯಿಯನ್ನು ಕರೆದುಕೊಂಡು ಬರುತ್ತೇನೆಂದು ಆತ ಹೇಳಿದ. ಕಪಾಹಿ ಈ ವಿಷಯವನ್ನು ಸಹಜವಾಗಿಯೇ ಸ್ವೀಕರಿಸಿದಳು. ಆದರೆ ತರಾ ಮೌನವಾಗಿ ಹೊರಟು ಹೋದಳು. ಆಕೆ ಏನೂ ಹೇಳಲಿಲ್ಲ.

# ಇಪ್ಪತ್ತಮೂರು

ಕಪಾಹಿಯ ಸಲಹೆ-ಸಮ್ಮತಿ ಕೇಳದೆಯೇ ಗುಲಬ್ ಸಮಯ ಸಂದರ್ಭ ನೋಡಿ ಮೂವತ್ಮೂರು ರೂಪಾಯಿಗಳನ್ನು ಕೊಟ್ಟು ಒಂದು ಹಾಲು ಕೊಡುವ ಎಮ್ಮೆಯನ್ನು ಕರು ಸಮೇತ ಕೊಂಡುಕೊಂಡ. ತನ್ನನ್ನು ಕೇಳದಯೇ ಇಷ್ಟೊಂದು ಹಣ ಖರ್ಚು ಮಾಡಿದ ಕಾರಣ ಕಪಾಹಿ ಮೊದಲಿಗೆ ಸಿಟ್ಟಾದಳು.

ಗುಲಬ್ ಹೇಳಿದ- "ಕೊಂಡು ಕೊಂಡದ್ದು ಒಂದು ಎಮ್ಮೆ. ಅದಕ್ಕೂ ನಿನ್ನನ್ನೇ ಕೇಳಿಕೊಂಡು ಕೊಳ್ಳಬೇಕೇ? ಮೂವತ್ಮೂರು ರೂಪಾಯಿಗೆ ಕರು ಸಮೇತ ಎಮ್ಮೆ ಸಿಕ್ಕಿರೋದು ಅದೃಷ್ಟ. ಐವತ್ಮೂರು ರೂಪಾಯಿ ಕೊಟ್ಟರೂ ಸಿಗೋದಿಲ್ಲಾ. ಆ ಎಮ್ಮೆಯ ಮಾಲಿಕನಿಗೆ ಹಣದ ಅಗತ್ಯವಿದ್ದುದರಿಂದ ಈ ಕಡಿಮೆ ಬೆಲೆಗೆ ಮಾರಿದ್ದಾನೆ. ನಮಗೆ ಕನಿಷ್ಠ ವರ್ಷ ಮೂವತ್ತು ರೂಪಾಯಿಗೆ ಮೂವತ್ತು ರೂಪಾಯಿಯೇ ಲಾಭ ಸಿಕ್ಕಿದೆ."

ಕಪಾಹಿಗೆ ವಿಷಯ ಅರ್ಥವಾಯಿತು. ಆದಾಗ್ಯೂ ಅವಳು ಹೇಳಿದಳು - "ಹಸು-ಎಮ್ಮೆ ಎಲ್ಲವನ್ನೂ ನನ್ನ ಕತ್ತಿಗೆ ಗಂಟುಹಾಕಿ ಧನಸಿರಿಯ ಬಯಲಿಗೆ ಅಟ್ಟಿಕೊಂಡು ಹೋಗಿ ಮೇಯಿಸಲು ಹೇಳದಿದ್ದರೆ ಬಹಳ ಲೇಸು. ನಾನು ಯಾವಯಾವುದೂ ಅಂತ ನೋಡಿಕೊಳ್ಳಲಿ."

ತರಾ ಸಹಜವಾಗಿ ಹೇಳಿದಳು - "ಮನೆಯ ಕೆಲಸಕಾರ್ಯ ನಾನು ನೋಡಿಕೊಳ್ತೀನಿ."

"ಅಹುದು. ನೀನು ಮನೆಯೊಳಗಡೆ ಆರಾಮವಾಗಿರು. ನಾನು ಎಮ್ಮೆ ಹಿಂದೆ ಕಾಡಿನಲ್ಲೆಲ್ಲಾ ಸುತ್ತಾಡ್ತೀನಿ. ಈ ಕಡೆ ಮೋಲೋಕಾ ಮನೆಗೆ ಹೋಗಿ ಇಡೀ ದಿನ ಹುಕ್ಕಾ ಸೇದುತ್ತಿರಲಿ."

ಗುಲಬ್ ಇಷ್ಟು ಮಾತ್ರ ಹೇಳಿದ - "ಇದೂ ಒಂದು ಎಮ್ಮೆ ಕರು."

ಅನಂತರ ಆತ ಎಮ್ಮೆ ಅಟ್ಟಿಕೊಂಡು ಮೇಯಿಸಲು ಹೊರಟು ಹೋದ.

ಹಿಂಗಾರು ಬೆಳೆಯಲ್ಲಿ ಗುಲಬ್‌ನಿಗೆ ಒಳ್ಳೆಯ ಲಾಭ ಸಿಕ್ಕಿತು. ಆಲೂಗಡ್ಡೆ, ಸಾಸಿವೆ ಮತ್ತು ಉದ್ದಿನ ಫಸಲಿನಲ್ಲಿ ಸಾಕಷ್ಟು ಲಾಭ ಬಂದಿತ್ತು.

ಗುಲಬ್ ಕೋಣವನ್ನು ಕೊಂಡು ಕೊಳ್ಳಲು ಬಸೀರತ್‌ನಿಂದ ಸಾಲವಾಗಿ ಪಡೆದಿದ್ದ ಎಲ್ಲಾ

ಹಣವನ್ನೂ ತೀರಿಸಲು ನದಿಯ ಘಟ್ಟದಲ್ಲಿ ಇಳಿದುಕೊಂಡಿದ್ದ ಅವನನ್ನು ಭೇಟಿ ಮಾಡಿ, ಕೊಟ್ಟು ಬಂದ. ಆತನ ಮನಸ್ಸು ಹಗುರವಾಯಿತು. ಸಾಲದ ಹೊರೆಯಿದ್ದರೆ ಆತನ ಮನಸ್ಸಿಗೆ ನೆಮ್ಮದಿಯಿಲ್ಲ. ಬಸೀರತ್ ಸಹಾಯಕ್ಕೆ ಆತ ಕೃತಜ್ಞತೆ ಸಲ್ಲಿಸುತ್ತಾ ಹೇಳಿದ - "ಬಹಳ ಉಪಕಾರವಾಯಿತು. ದೋಣಿ ಈಗಲೂ ಗಟ್ಟಿಮುಟ್ಟಾಗಿದೆ. ಅದು ಸಾಯದಿದ್ದರೆ ಇನ್ನೂ ಕೆಲವು ವರ್ಷಗಳು ಅದು ಕೆಲಸ ಮಾಡಬಲ್ಲದು. ಬಿತ್ತನೆಗಾಗಿ 'ಆಹು' ಬತ್ತ ಬೇಕಾಗಿದೆ. ಸಿಗುತ್ತದೆಯೇ?"

ಒಂದು ದಿನ ಬಸೀರತ್ ತಾನಾಗಿಯೇ ಗುಲಚ್‌ನ ಮನೆಗೆ ಬಂದು ಬಿತ್ತನೆಗಾಗಿ ಬತ್ತ ತಂದು ಕೊಟ್ಟ.

ಅಂದು ಗುಲಚ್‌ನ ಮಾತಿನ ಮೇರೆಗೆ ಕಪಾಹಿ ಮನೆಯೊಳಗಡೆಯೇ ಬಸೀರತ್‌ಗೆ ಉಪಾಹಾರ ಕೊಟ್ಟಳು. ಯಾವ ಮಾತುಕತೆಯೂ ನಡೆಯಲಿಲ್ಲ. ಬಸೀರತ್ ಸಹ ತಲೆ ತಗ್ಗಿಸಿಕೊಂಡು ಉಪಾಹಾರ ತಿಂದು ಹೊರಗಡೆ ಎದ್ದು ಬಂದ.

ಬಸೀರತ್ ಹೇಳಿದ - "ಕೆಲವು ದಿನಗಳಲ್ಲೇ ನಾನು ಧನಸಿರಿಯ ಸಂಗಮ ಸ್ಥಾನಕ್ಕೆ ಹೋಗುತ್ತೇನೆ. ಮತ್ತೆ ಅಶ್ವೀಜ-ಕಾರ್ತಿಕ ಮಾಸದಲ್ಲಿ ಹಿಂದಿರುಗಿ ಬರ್‍ತೀನಿ. ಮಳೆಗಾಲದಲ್ಲಿ ನನಗೆ ಇಲ್ಲಿ ಏನೂ ಕೆಲಸ ಇಲ್ಲ."

ಬಸೀರತ್ ಒಂದು ದಿನ ದೋಣಿ ಸಮೇತ ಹೊರಟು ಹೋದ. ಹೋಗುವ ಮುನ್ನ ಕಪಾಹಿಗೆ 'ಹೋಗಿ ಬರ್‍ತೀನಿ' ಅಂತ ತಿಳಿಸಿ ಹೋದ.

ಮೊದಲಿಗಿಂತಲೂ ಗುಲಚ್‌ನಿಗೆ ಈಗ ಕೆಲಸ ಬಹಳ ಜಾಸ್ತಿಯಾಯಿತು. ಎಮ್ಮೆಯ ಹಾಲು ಕರೆದು, ಹಾಲು ಮಾರುವ ಇನ್ನೊಂದು ಕೆಲಸ ಹೊಸದಾಗಿ ಮಾಡಬೇಕಾಯಿತು. ನೇಪಾಲಿಯ 'ಬಥಾನ್'ನಲ್ಲಿ ಎಮ್ಮೆ ಬಿಟ್ಟು ಬಾ ಎಂದು ಒಮ್ಮೆ ಕಪಾಹಿ ಸಲಹೆ ನೀಡಿದ್ದಳು. ಆದರೆ ಗುಲಚ್ ಒಪ್ಪಲಿಲ್ಲ. ಎಮ್ಮೆ ಬಹಳ ಸಾಧುವಾಗಿದೆ. ಅದರ ಕರು ಬಹಳ ಮುದ್ದಾಗಿದೆ. ಅದು ಉಳಿದುಕೊಂಡರೆ ಎರಡು ಮೂರು ವರ್ಷಗಳಲ್ಲೇ ಉಳುಮೆ ಕೆಲಸಕ್ಕೆ ಬರುತ್ತೆ. ನೇಪಾಲಿಗೆ ಕೊಟ್ಟರೆ ಹಾಲು ಕರೆದೂ ಕರೆದೂ ಅದನ್ನು ಬಡಕಲು ಮಾಡ್ತಾನೆ. ಹಾಲಿನ ಪೂರ್ತಾ ಹಣ ಸಹ ನಮ್ಮ ಕೈಗೆ ಸಿಗುತ್ತದೆಯೇ?

ಆಗಾಗ್ಗೆ ತರಾ ಎಮ್ಮೆ ಮೇಯಿಸಲು ಹೋಗುತ್ತಾಳೆ. ಅವಳಿಗೆ ಎಮ್ಮೆ ಕಂಡರೆ ತುಂಬಾ ಅಕ್ಕರೆ.

ಎಲ್ಲಿಯಾದರೂ ಹೋಗುವ ಸಂದರ್ಭ ಒದಗಿದರೆ ಕಪಾಹಿ 'ಬಿರಿ' ಹಾಕಿಕೊಳ್ಳುತ್ತಾಳೆ. ತರಾ ಉಂಗುರ ಹಾಕಿಕೊಳ್ಳುವುದಿಲ್ಲ. ಕೊಡೋ ಪದಾರ್ಥ ಇತ್ತು - ಆತ ಕೊಟ್ಟ. ಹಾಕಿಕೊಳ್ಳೋದು ಬಿಡೋದು ಅಕೆಗೆ ಸೇರಿದ್ದು. ಗುಲಚ್ ಈ ಬಗ್ಗೆ ಏನೂ ಹೇಳುವುದಿಲ್ಲ.

ತರಾ ಉಂಗುರ ಹಾಕಿಕೊಂಡಿದ್ದುದನ್ನು ಒಮ್ಮೆ ಗುಲಚ್ ನೋಡಿದ. ಆತ ನೋಡದವನಂತೆ ಹೋಗಲು ಬಯಸಿದ - "ಸ್ವಲ್ಪ ನಿಂತುಕೊಳ್ಳಿ" ಎಂದು ತರಾ ಕೂಗಿದಳು.

ಮೆಲುದನಿಯಲ್ಲೇ ಆತ ಕೇಳಿದ '- "ನಿಮ್ಮ ಚಿಕ್ಕಮ್ಮ ಮನೆಯಲ್ಲಿಲ್ವೇ?'

ತರಾ ಮಡಿಸಿಟ್ಟಿದ್ದ ಬಟ್ಟೆಯೊಂದನ್ನು ಒಳಗಡೆಯಿಂದ ತೆಗೆದುಕೊಂಡು ಬಂದು ಗುಲಚ್‌ನ ಕೈಗೆ ಕೊಟ್ಟು ಹೇಳಿದಳು - " ಇದು ಈ ಸಾರಿ ನೇಯ್ದಿದ್ದು. ಈವೊತ್ತು ತಾನೇ ನೇಯ್ದು ಮುಗಿಸಿದೆ. 'ಈದ್'ಗೆ ಹಾಕಿಕೊಳ್ಳಲು ಒಂದು ಅಂಗಿ ಹೊಲಿಸಿಕೊಳ್ಳಿ."

ಗುಲಬ್‌ನ ಮುಖ ಆನಂದದಿಂದ ಅರಳಿ ಕೆಂಪೇರಿತು.

"ಸರಿ. 'ಈದ್'ಗೆ ಒಂದು ಚೆನ್ನಾಗಿರೋ ಅಂಗಿ ಹೊಲಿಸಬೇಕು ಅಂತ ಯೋಚಿಸ್ತಾ ಇದ್ದೆ."

ಆತ ಮಡಿಸಿದ ಬಟ್ಟೆ ಬಿಚ್ಚನೋಡಿದ. ನುಣುಪಾದ ತೆಳ್ಳನೆಯ ಬಟ್ಟೆ, ಕಂದು ಬಣ್ಣ. ಥಾನಿನ ಬಟ್ಟೆಯಂತಿತ್ತು.

"ಈದ್‌ಗೆ ಹಾಕಿಕೊಳ್ಳಲು ನಿನಗೆ ಹೊಸಬಟ್ಟೆ ಇದೆಯೋ?"

"ನನಗಿದೆ; ಏನೂ ಬೇಕಾಗಿಲ್ಲ."

ಕಪಾಹಿ ಮತ್ತು ತರಾ ಇಬ್ಬರಿಗೂ ಚೀಟಿ ಬಟ್ಟೆಯ ಎರಡು ಕುಪ್ಪಸ ಹೊಲಿಸಿಕೊಡಬೇಕೆಂದು ಗುಲಬ್ ಬಹಳ ದಿನಗಳಿಂದಲೂ ಯೋಚಿಸುತ್ತಿದ್ದ. ಆದರೆ ಅಲ್ಲಿ ಯಾವುದೂ ಒಳ್ಳೆಯ ಅಂಗಡಿಯಿರಲಿಲ್ಲ. ಎರಡು ಗಜ ಬಟ್ಟೆಗಾಗಿ 'ಗೋಲಾ'ಗೆ ಹೋಗಲು ಆತನಿಗೆ ಇಷ್ಟವಿಲ್ಲ. ಹಿಂದೆ ಯಾವೊತ್ತೂ ಅಲ್ಲಿಗೆ ಹೋಗಿಲ್ಲ. ಆತನಿಗೆ ಅಷ್ಟಾಗಿ ಬಟ್ಟೆ ಕೊಳ್ಳುವ ಅನುಭವ ಸಹ ಇಲ್ಲ. ಯಾರಾದರೂ ಆತನಿಗೆ ಮೋಸ ಮಾಡಬಹುದು. ಆದರೆ ಆತ ಒಮ್ಮೆಯಾದರೂ ಖಂಡಿತ ಟೌನ್ (ಪಟ್ಟಣ)ಗೆ ಹೋಗ್ತಾನೆ ಕನಿಷ್ಟಪಕ್ಷ ಒಂದಿಪ್ಪತ್ತು ರೂಪಾಯಿಗೆ ಏನಾದರೂ ಅಲ್ಪಸ್ವಲ್ಪ ಕೊಂಡುಕೊಂಡು ಬರುತ್ತಾನೆ. ಅದೇ ಬಹಳ ಜಾಸ್ತಿ.

ಗುಲಬ್ ಪ್ರೀತಿಯಿಂದ ತರಾಳನ್ನು ನೋಡಿದ. ಆಕೆ ತಲೆ ತಗ್ಗಿಸಿದಳು.

ತರಾ ಕೊಟ್ಟಿದ್ದ ಬಟ್ಟೆಯನ್ನು ಮತ್ತೆ ಆಕೆಯ ಕೈಗೆ ಕೊಟ್ಟು ಗುಲಬ್ ಹೇಳಿದ- "ಸದ್ಯಕ್ಕೆ ನಿನ್ನ ಹತ್ತಿರವೇ ಇಟ್ಟಿರು. ನಾಳೆ ದರ್ಜಿಗೆ ಕೊಟ್ಟು ಬರ್‍ತೀನಿ."

ಅನಂತರ ಆತ ಉಲ್ಲಾಸಭರಿತನಾಗಿ ಮನೆಯಿಂದ ಹೊರಟ. ತರಾಳಿಗೆ ಆತನ ಬಗ್ಗೆ ಬಹಳ ಪ್ರೀತಿ. ಇಲ್ಲಿಯವರೆಗೂ ಯಾರೂ ಆತನಿಗೆ ಈದ್ ಅಥವಾ ಬಕ್ರೀದ್ ಸಂದರ್ಭದಲ್ಲಿ ಹೊಸ ಬಟ್ಟೆ ಅಂತ ಒಂದು ತುಂಡು ಸಹ ಕೊಟ್ಟಿರಲಿಲ್ಲ.

ತರಾಳಿಗೆ ಆತನನ್ನು ಕಂಡರೆ ತುಂಬಾ ಪ್ರೀತಿ.

ಅಚಾತುರ್ಯವಾಯಿತು. ಇಲ್ಲದಿದ್ದರೆ..........

ಬಿಸಿಲು ಸಾಕಷ್ಟು ತೀಕ್ಷ್ಣವಾಗಿತ್ತು. ಗದ್ದೆಯಲ್ಲಿ ಒಂದು ಕಡೆ ನಿಂತಿದ್ದ ನೀರನ್ನು ಹೊರಗಡೆ ಎರಚಿ ಒಂದು ಕುಕ್ಕೆ ತುಂಬ ಮಾಗೂರ್ ಮತ್ತು ಗರ್ಕೆ ಮೀನು ಹಿಡಿದು ಮನೆಗೆ ತಂದ. ತರಾ ಮೀನು ಹಾಕುವ ವಂದರಿಯಲ್ಲಿ ಮೀನುಗಳನ್ನು ಇಡುತ್ತಿದ್ದಳು.

ಎಲ್ಲಿಂದಲೋ ಚಂದ್ರ ಮತ್ತು ನಾಲ್ಕಾರು ಹುಡುಗರು ಅವರ ಮನೆಗೆ ಬಂದರು.

"ಮೀನು ಹಿಡಿದಿದ್ದೀರಾ?" ಚಂದ್ರ ಕೇಳಿದ

ಗುಲಬ್ ಹೇಳಿದ. "ತರಾ, ಇವರು ಇಲ್ಲೇ ಕುಳಿತುಕೊಳ್ಳಲಿ."

"ಚಂದ್ರ, ನಾನು ಸ್ನಾನ ಮಾಡಿ ಬರ್‍ತೀನಿ. ನೀವು ಇಲ್ಲೇ ಕುಳಿತ್ಕೊಳ್ಳಿ."

ಚಂದ್ರ ಮತ್ತು ಆತನ ಜೊತೆಯಲ್ಲಿ ಬಂದಿದ್ದವರು ಅಂಗಳದಲ್ಲೇ ಮೋಡಾದ ಮೇಲೆ ಕುಳಿತುಕೊಂಡರು.

"ಏನು, ಹೇಗಿದ್ದೀಯಾ ತರಾ? ಮೊದಲಿಗಿಂತ ದಪ್ಪಗಾಗಿದ್ದೀಯೇ"- ಚಂದ್ರ ತರಾ ಕಡೆ ನೋಡಿ ಕೇಳಿದ. ತರಾ ತಲೆ ತಗ್ಗಿಸಿದಳು. ಯಾವ ಸಂದರ್ಭದಲ್ಲಿ ಏನು ಮಾತಾಡಬೇಕು ಅಂತ ಚಂದ್ರ ಯೋಚಿಸೋದೇ ಇಲ್ಲ.

"ನಿಜ. ಈಗಂತೂ ಮನೆಮಠ ನೋಡೋಕೆ ಬಹಳ ಚೆನ್ನಾಗಿ ಕಾಣುತ್ತೆ. ಓಹೋ,

ಹೂವುಗಿಡ ಸಹ ನೆಟ್ಟಿದ್ದೀರಿ. ಮನೆ ಮತ್ತು ಹೂವಿನ ತೋಟ ತುಂಬಾ ಸೊಗಸಾಗಿ ಕಾಣುತ್ತೆ" ಎಂದು ಚಂದ್ರ ಹೇಳಿದ. " ಗಾರ್ಡನ್ ಇರಬೇಕು."

ಮನೆ ಮುಂದೆ ಯಾವ ಜಾಗದಲ್ಲಿ ಹೂಗಿಡ ನೆಡಬೇಕು ಅಂತ ಗುಲಬ್ ಮೊದಲಿಂದಲೂ ಅಂದುಕೊಂಡಿದ್ದನೋ ಅದೇ ಜಾಗದಲ್ಲಿ ತರಾ ಎರಡು ಚೆಂಡು ಮಲ್ಲಿಗೆ ಹೂಗಿಡ ನೆಟ್ಟಿದ್ದಾಳೆ. ದೊಡ್ಡ ಎಸಳುಗಳ ಚೆಂಡುಮಲ್ಲಿಗೆ ಹೂವು ಅರಳುವುದರಲ್ಲಿವೆ. ಹತ್ತಿರದಲ್ಲೇ ಸೂರ್ಯಕಾಂತಿಯ ಗಿಡವೂ ಇದೆ. ಆ ಗಿಡ ಬಹಳ ಸೊಗಸಾಗಿ ಬೆಳೆದಿದೆ.

ತರಾ ಎಲೆ ಅಡಿಕೆ ತಟ್ಟೆ ತಂದು ಚಂದ್ರನ ಮುಂದಿಟ್ಟಳು.

ಅಷ್ಟರಲ್ಲೇ ಗುಲಬ್ ಕೊಳದಲ್ಲಿ ಸ್ನಾನ ಮಾಡಿ ಬಂದ.

"ಸ್ನಾನ ಎಲ್ಲಿ ಮಾಡಿದೆ?"

"ಒಂದು ಕೊಳ ಕಟ್ಟಿಸಿದ್ದೀನಿ."

"ಒಳ್ಳೆಯ ಕೆಲ್ಸ ಮಾಡಿದೆ. ನಿಜಕ್ಕೂ ಒಳ್ಳೆಯ ಕೆಲ್ಸ. ಬಾವಿಯ ನೀರಿನಂತೆ ಇರಲು ಹೇಗೆ ಸಾಧ್ಯ? ರಿವರ್ (ನದಿ)ನ ನೀರು ಮತ್ತು............"

"ಕೊಳಚೆ" ಶಬ್ದಕ್ಕೆ ಇಂಗ್ಲಿಷ್ ಶಬ್ದ ಹೊಳೆಯದೆ ಸುಮ್ಮನಾದ.

ಒಂದು ಮೋಡಾ ತೆಗೆದುಕೊಂಡು ಬಂದು ಅದರ ಮೇಲೆ ಗುಲಬ್ ಕುಳಿತ.

ಚಂದ್ರ ಹೇಳಿದ- "ಒಂದು ಕೆಲ್ಸ ಆಗ್ಬೇಕು. ಅದಕ್ಕಾಗಿ ಬಂದೆ."

"ಮೊದಲು ಬೀಡಾ ಹಾಕಿಕೊ."

ಅನಂತರ ಚಂದ್ರ ತಾನು ಬಂದ ಕಾರಣದ ವಿವರಣೆ ನೀಡಿದ."ಈ ಸಿಪರಿಯಾ ಹಳ್ಳಿಯಲ್ಲಿ ಯಾವ ಶಾಲೆಯೂ ಇಲ್ಲ. ಇಲ್ಲಿ ಜನಸಂಖ್ಯೆ ಕಡಿಮೆ ಏನೂ ಇಲ್ಲ. ಒಂದೊಂದೇ ಕುಟುಂಬ ಬಂದು ನೆಲಸಿ ಈಗ ಒಂದು ಭರ್ಜರಿ ಹಳ್ಳಿಯಾಗಿದೆ. ಈಗ ಇದನ್ನು ಪಾಹಿ ಅಂತ ಹೇಳೋಕಾಗೋಲ್ಲ. ಆದರೆ ಇಲ್ಲಿಯವರೆಗೂ ಈ ಹಳ್ಳಿಯಲ್ಲಿ ಇಲ್ಲಿನ ಹುಡುಗರು ಮತ್ತು ಹುಡುಗಿಯರು ಓದಲು ಒಂದು ಪಾಠಶಾಲೆ ಸಹ ಇಲ್ಲ. ಸರಕಾರ ನಮ್ಮನ್ನು ಮನುಷ್ಯರು ಎಂದೇ ಭಾವಿಸಿಲ್ಲ. ಆದುದರಿಂದ ಹಳ್ಳಿಯವರೆಲ್ಲರನ್ನೂ ಭೇಟಿ ಮಾಡಿ ನಾವೇ ಒಂದು ಪಾಠಶಾಲೆ ತೆರೆಯಬೇಕು. ಇಲ್ಲದಿದ್ದರೆ ನಮ್ಮ ಹುಡುಗರು ಮತ್ತು ಹುಡುಗಿಯರು ಅನಕ್ಷರಸ್ಥರಾಗಿಯೇ ಉಳಿಯುತ್ತಾರೆ. ಸಿಪರಿಯಾ ಹಳ್ಳಿಯ ಧನಸಿರಿ ದಡದ ಕಡೆ ಬೊಂಬು ಮತ್ತು ಗಳಕ್ಕೆ ಅಭಾವವಿಲ್ಲ. ಕೆಲ್ಸ ಮಾಡೋ ತರುಣರು ಮತ್ತು ಹಿರಿಯರಿಗೂ ಅಭಾವವಿಲ್ಲ. ಹಳ್ಳಿಯವರೇ ಒಂದು ವೇಳೆ ಪಾಠಶಾಲೆಗಾಗಿ ಒಂದು ಕಟ್ಟಡ ಕಟ್ಟಿ ಕೆಲವು ಹುಡುಗರು ಮತ್ತು ಹುಡುಗಿಯರನ್ನು ಸೇರಿಸಿ ಒಬ್ಬ ಉಪಾಧ್ಯಾಯರನ್ನು ನೇಮಿಸಿದರೆ ಆಗ ಬೋರ್ಡ್ ಇದನ್ನು ತಾನೇ ವಹಿಸಿಕೊಳ್ಳುವುದಿಲ್ಲ ಎಂದು ಹೇಳೋಕೆ ಏನೂ ಕಾರಣವಿಲ್ಲ. ವಹಿಸಿಕೊಳ್ಳದಿದ್ದರೆ ಐ ಶಲ್ ಸೀ. ನಾನೇ ಹೋಗಿ ಡಿ.ಪಿ.ಐ. ಅವರನ್ನು ಕರೆದುಕೊಂಡು ಬರ್‍ತೀನಿ. ನಮ್ಮ ವಿಲೇಜ್ ಇದೇ ರೀತಿ ಸದಾ 'ಇಲ್ಲಿಟರೇಟ್' ಆಗಿ ಉಳಿಯುತ್ತದೆಯೇ? ಪಟ್ಟಣದ ಹುಡುಗರು ಮತ್ತು ಹುಡುಗಿಯರಿಗೆ ಹೆಚ್ಚೆಹೆಚ್ಚಿಗೂ ಶಾಲೆಗಳಿವೆ. ನಮ್ಮಲ್ಲಿ ಎಜುಕೇಟ್ ಆಗದಿರುವುದಿಂದ ನಮ್ಮನ್ನು ಎಲ್ಲರೂ ನೆಗ್‌ಲೆಕ್ಟ್ ಮಾಡ್ತಾರೆ."

ಗುಲಬ್ ಎಲ್ಲವನ್ನೂ ಕೇಳುತ್ತಾ ಏನೋ ಯೋಚಿಸುತ್ತಿರುವವನಂತೆ ತೋರ್ಪಡಿಸುತ್ತಾ ಹೇಳಿದ- "ನೀನು ಹೇಳುತ್ತಿರುವುದು ಸರಿ. ಆದರೆ ನಾನು ಏನು ತಾನೇ ಮಾಡಲು ಸಾಧ್ಯ?"

"ನೀನು? ನೀನು ಮಾಡಬೇಕಾದುದು ಬಹಳ ಇದೆ. ಒಂದು ಸಾರ್ವಜನಿಕ ಸಭೆ ಸೇರಿಸುತ್ತೇವೆ. ಅಲ್ಲಿ ನಾನು ಎಲ್ಲ ವಿಷಯವನ್ನೂ ಜನರಿಗೆ ತಿಳಿಸುತ್ತೇನೆ. ನೀನು ಆ ಸಭೆಗೆ ಅಧ್ಯಕ್ಷನಾಗಬೇಕು."

"ಹೇ, ಬೇಡಪ್ಪ, ಬೇಡ. ನನಗೆ ಸಭೆಗೆ ಹೋಗೋದಕ್ಕೇ ಹೆದರಿಕೆ ಆಗುತ್ತೆ. ಅನಕ್ಷರಸ್ಥನನ್ನು ಅಧ್ಯಕ್ಷನನ್ನಾಗಿ ಮಾಡಿ ಅದರ ತಮಾಷೆ ನೋಡಬೇಕು ಅಂದುಕೊಂಡಿದ್ದೀಯಾ? ಅಂಥ ತಮಾಷೆ ನನ್ನ ಜೊತೆಯಲ್ಲಿ ಮಾಡಬೇಡ."

"ತಮಾಷೆ ಅಲ್ಲ. ನಮ್ಮಲ್ಲಿ ನೀನು ಹೇಗೋ ಬೇರೆಯವರೂ ಹಾಗೆಯೇ ಅನಕ್ಷರಸ್ಥರು. ಇತ್ತೀಚೆಗೆ ನೀನು ಸ್ವಲ್ಪ ಹಣಕಾಸು ಸಂಪಾದಿಸಿದ್ದೀಯೇ. ನೀನು ಅಧ್ಯಕ್ಷನಾಗಿ ನಾಲ್ಕು ಮಾತು ಹೇಳಿದರೆ ಎಲ್ಲರೂ ಒಪ್ಪಿಕೊಳ್ಳುತ್ತಾರೆ. ಮನಿ ಆಲ್ ರೆಸ್ಪೆಕ್ಟ್. ಹಣಕ್ಕೆ ಎಲ್ಲರೂ ಗೌರವ ತೋರಿಸುತ್ತಾರೆ."

ಹೆಮ್ಮೆ ಮತ್ತು ನಾಚಿಕೆಯಿಂದ ಆತನ ಮುಖ ಕೆಂಪೇರಿತು. "ನನಗಂತೂ ಏನೂ ಗೊತ್ತಿಲ್ಲ" ಎಂದು ತಿಳಿಸಿದ.

"ಬೇರೆಯವರಿಗೆ ತಾನೇ ಏನು ಗೊತ್ತು? ನೀನು ಮಾಡಬಲ್ಲೆ. ನಾನು ನಿನ್ನ ಜೊತೆಯಲ್ಲೇ ಇರೋದಿಲ್ವೇ? ಐ ಹ್ಯಾಮ್ ವಿಥ್ ಯು. ನೀನು ಅಧ್ಯಕ್ಷನಾಗಲೇಬೇಕು. ಶಾಲೆಗೂ ನಿನ್ನನ್ನೇ ಅಧ್ಯಕ್ಷನನ್ನಾಗಿ ಮಾಡುತ್ತೇನೆ."

"ಶಾಲೆಯ ಅಧ್ಯಕ್ಷ! ಅದು ಬೇರೆ ಯಾವುದು?"

"ಅದೂ ಒಂದಿದೆ. ಅದೂ ಆಗುತ್ತೆ. ಅನಂತರ ಗೊತ್ತಾಗುತ್ತೆ. ಶಾಲೆಯನ್ನು ಕಟ್ಟಿಸಲು ಫಂಡಿನ ಅವಶ್ಯಕತೆಯಿದೆ. ಬಹಳ ಹಣ ಖರ್ಚಾಗುತ್ತೆ. ನೀನು ಎಷ್ಟು ಕೊಡಲು ಸಾಧ್ಯವೋ ಕೊಡು............."

ಅದೇ ಸಮಯದಲ್ಲಿ ಚಂದ್ರನ ಜೊತೆಯಲ್ಲಿ ಬಂದಿದ್ದ ಹುಡುಗರು ಒಕ್ಕೊರಲಿನಿಂದ ಹೇಳಿದರು- "ಅಧ್ಯಕ್ಷರು ಇಪ್ಪತ್ತೈದು ರೂಪಾಯಿ ಚಂದಾ ಕೊಡಬೇಕು."

"ಇಪ್ಪತ್ತೈದು ರೂಪಾಯಿ? ಎಲ್ಲಿಂದ ತರಲಿ? ಒಳ್ಳೆಯ ಕೆಲ್ಸ ಮಾಡೋದಕ್ಕೆ ಹೊರಟಿದ್ದೀರಿ. ಆದುದರಿಂದ ನಾನು ಒಂದು ರೂಪಾಯಿ ಕೊಡ್ತೀನಿ."

"ಒಂದು ರೂಪಾಯಿ? ಹಾಗೆ ಮಾಡಬೇಡಿ. ನೀವೇ ಒಂದು ರೂಪಾಯಿ ಕೊಟ್ಟರೆ ಬೇರೆಯವರು ಎಷ್ಟು ಕೊಡ್ತಾರೆ?"

ಕೊನೆಗೆ ಶಾಲೆಯ ಕಟ್ಟಡಕ್ಕಾಗಿ ಗುಲಬ್‌ನಿಂದ ಐದು ರೂಪಾಯಿ ಚಂದಾ ವಸೂಲು ಮಾಡಿ ಚಂದ್ರ ಮತ್ತು ಅವನ ಜೊತೆಗಾರರು ಹೊರಟು ಹೋದರು. ಆತ ಸಹ ಸಂತೋಷದಿಂದ ಚಂದಾ ನೀಡಿದ.

ಅವರು ಹೊರಟು ಹೋದ ಮೇಲೆ ಕಪಾಹಿ ಮತ್ತು ತರಾಳೊಡನೆ ಗುಲಬ್ ಹೇಳಿದ- "ಐದು ರೂಪಾಯಿ ಏನೇನೂ ಅಲ್ಲ. ಒಳ್ಳೆಯ ಕೆಲ್ಸ ಮಾಡಲು ಹೊರಟಿದ್ದಾರೆ. ನಾವೇ ಕೊಡದೆ ಹೋದರೆ ಬೇರೆ ಯಾರು ಕೊಡ್ತಾರೆ? ಆದರೆ ಚಂದ್ರ ನನ್ನನ್ನು ಅಧ್ಯಕ್ಷ ಅಥವಾ ಇನ್ನೇನೋ ಮಾಡ್ತೀನಿ ಅಂತ ಹೇಳಿ ಹೋಗಿದ್ದಾನೆ. ಆತ ತಮಾಷೆ ಮಾಡೋಕೆ ಹೇಳಿದನೋ ಅಥವಾ ಅದು ನಿಜವೋ ಯಾರಿಗೆ ಗೊತ್ತು?"

"ತಮಾಷೆ ಮಾಡೋದು ಏನು ಬಂತು? ಹೇಳಿದ್ದಾನೆ; ಅಧ್ಯಕ್ಷರಾಗಿ. ಅದಕ್ಕೇನು?"

"ಹೂಂ. ಸರಿ."

ಅಧ್ಯಕ್ಷನಾಗುವ ವಿಷಯದ ಬಗ್ಗೆ ಯೋಚಿಸಿದ್ದಾಗ ಗುಲಬ್‌ನಿಗೆ ಒಳಗೊಳಗೇ ಭಯ. ಏನು ಮಾಡಬೇಕು? ಏನು ಮಾತನಾಡಬೇಕು? ಆದರೆ ಕಪಾಹಿ ಮತ್ತು ತರಾ ಜೊತೆಯಲ್ಲಿ ಆ ಭಯದ ಬಗ್ಗೆ ಏನೂ ಹೇಳಲಿಲ್ಲ. ಅವರು ಏನು ಅಂದುಕೊಳ್ತಾರೆ? ಹಣೆಯ ಬರಹವಿದ್ದಂತೆ!

ಸಾಯಂಕಾಲ ಮನೆಯಿಂದ ಹೊರಟಾಗ ಗುಲಬ್‌ನ ಹೊಸ ಉತ್ಸಾಹದಿಂದ ತುಂಬಿತ್ತು. ಆತ ಹಣ ಸಂಪಾದಿಸಿದ್ದು ಇಂದು ಸಾರ್ಥಕವಾಯಿತು. ಆತ ಜೀವನದಲ್ಲಿ ಎಂದೂ ಮಾಡದ ಕಾರ್ಯವೊಂದನ್ನು ಇಂದು ಮಾಡಿದ್ದಾನೆ. ಶಾಲೆಯ ಕಟ್ಟಡಕ್ಕಾಗಿ ಚಂದಾ ಕೊಟ್ಟಿದ್ದಾನೆ. ಇಪ್ಪತ್ತೈದು ರೂಪಾಯಿ ಕೇಳಿದ್ದರು. ಕೊಟ್ಟುಬಿಟ್ಟಿದ್ದರೆ ಚೆನ್ನಾಗಿತ್ತು. ಆತ ಯೋಚಿಸಿದ-ಇನ್ನೂ ಸಮಯ ಇದೆ. ಶಾಲೆ ಆದ ಮೇಲೆ ಅಗತ್ಯ ಬಿದ್ದರೆ ಇನ್ನೂ ಕೊಡೋಣ!

ಈವೊತ್ತು ಕೊಟ್ಟ ಐದು ರೂಪಾಯಿ ಕಡಮೆಯೇನೂ ಅಲ್ಲ. ಆತನಿಗೆ ತನ್ನ ಮನಸ್ಸಿನ ಆನಂದವನ್ನು ಮುಚ್ಚುಮರೆಯಿಲ್ಲದೆ ಬೇರೆಯವರಿಗೆ ತಿಳಿಸಬೇಕೆನಿಸಿತು. ಹಣ ಇಂಥದ್ದಕ್ಕೆ ಅಲ್ಲದೆ ಮತ್ತೆ ಯಾವುದಕ್ಕೆ?

# ಇಪ್ಪತ್ತುನಾಲ್ಕು

ಕೆಲಾಈಯ ಆರೋಗ್ಯ ದಿನೇ ದಿನೇ ಹದಗೆಟ್ಟಿತು. ಯಾವುದೇ ವಿಶೇಷ ರೀತಿಯ ಚಿಕಿತ್ಸೆ ಸಹ ಮಾಡಿರಲಿಲ್ಲ. ಆತ ತರುಣ. ಆರೋಗ್ಯವಂತನಾಗಿ ಬಾಳಿಬದುಕಲು ಆತನಿಗೆ ಉತ್ಕಟವಾದ ಅಭಿಲಾಷೆಯಿದೆ. ಆದರೆ ಕೆಟ್ಟಕಾಯಿಲೆ. ಜೊತೆಗೆ ಕಡುದಾರಿದ್ರ್ಯಕ್ಕೆ ಜಯಲಭಿಸುವುದು ಖಂಡಿತ.

ಆತ ಸದಾ ಹಾಸಿಗೆಯ ಮೇಲೆಯೇ ಬಿದ್ದಿರುತ್ತಾನೆ. ಹಸಿಶುಂಠಿ ರಸ, ತುಲಸಿ, ಜೇನು ತುಪ್ಪದೊಡನೆ ಔಷಧಿ ಸೇವಿಸುತ್ತಾನೆ. ವೈದ್ಯರು ಕೊಟ್ಟಿದ್ದ ಗುಳಿಗೆಗಳನ್ನು ನುಂಗುತ್ತಾನೆ. ಗುಣ ಕಾಣುತ್ತಿಲ್ಲ. ಕಾಯಿಲೆ ಮತ್ತಷ್ಟು ಮೆತ್ತಗೆ ಮಾಡುತ್ತದೆ. ಮೋಲೋಕಾ ಮತ್ತು ತಿಖಿರ್ ಆತ ಗುಣಮುಖನಾಗುವ ಆಶೆಯನ್ನು ಕೈಬಿಟ್ಟಿದ್ದಾರೆ. ಸಾಲದ್ದಕ್ಕೆ ಕೆಲಾಈ ಬಗ್ಗೆ ಯೋಚಿಸಲು ಅವರಿಗೆ ಬಿಡುವೇ ಸಿಗೋದಿಲ್ಲ. ಹಗಲಿರುಳೂ ಹೊಟ್ಟೆಪಾಡಿನ ಚಿಂತೆಯಲ್ಲೇ ಇರುತ್ತಾರೆ.

ಕೆಲಾಈ ಬಗ್ಗೆ ತನ್ನ ಹೊಣೆಗಾರಿಕೆ ಏನೆಂಬುದು ಚೇನಿಮಾಇಗೆ ಗೊತ್ತಿದೆ. ಆದರೆ ಅವಳಿಗೂ ಬೇಸರವಾಗಿದೆ. ದೃಢಕಾಯವಾದ ತರುಣಿ. ಸದಾ ರೋಗಿಷ್ಠನಾಗಿರುವವನ ಸೇವೆ-ಶುಶ್ರೂಷೆಯಲ್ಲಿ ತೊಡಗಿ ಯಾವುದೇ ಆನಂದಾನುಭವ ಪಡೆಯಲಾರಳು. ಕೆಲಾಈಯ ಕಾಯಿಲೆ ವಾಸಿಯಾಗುವುದಿಲ್ಲವೆಂಬುದು ಒಂದು ರೀತಿ ಅವಳ ಖಚಿತ ಅಭಿಪ್ರಾಯವಾಗಿತ್ತು. ಬಾಲ್ಯದಿಂದಲೂ ಇರುವ ರೋಗ. ಚಿಕಿತ್ಸೆಯಿಂದ ಎಳ್ಳಷ್ಟೂ ಗುಣ ಕಾಣುತ್ತಿಲ್ಲ. ಸಫಿಯತ್ ಮತ್ತು ತನ್ನ ತಂದೆಯ ಮೇಲೆ ಹಾಗೂ ಮೋಲೋಕಾ ಮತ್ತು ತಿಖಿರನ ಮೇಲೆ ಆಕೆಗೆ ಕೋಪ. ಕೆಲಾಈ ಮೇಲೆ ಆಕೆಗೆ ಕೋಪ ಇಲ್ಲ. ಅವನ ಬಗ್ಗೆ ಆಕೆಗೆ ಕನಿಕರವಿದೆ. ಸ್ನೇಹವಿದೆ. ಆದರೆ

ಆಕೆ ಏನುತಾನೇ ಮಾಡಬಲ್ಲಳು? ಎಲ್ಲರೂ ಸೇರಿ ಮದುವೆ ಮಾಡಿದರು. ಆಕೆ ಮದುವೆಯಾದಳು. ಹಳ್ಳಿಯಲ್ಲಿ ಕುರುಡ, ಕುಂಟ, ಮೂಗ ಯಾರೂ ಮದುವೆಯಾಗದೆ ಇರೋದಿಲ್ಲಾ. ಕಿಲಾಈ ಕೇವಲ ರೋಗಿಷ್ಟ.

ಆದಾಗ್ಯೂ ಒಮ್ಮೊಮ್ಮೆ ಅಪಮಾನಿತವಾದ ಚೇನಿಮಾಇಯ ಯೌವನ ಬಂಡಾಯವೆಬ್ಬಿಸಲು ಬಯಸುತ್ತದೆ. ಯಾವುದೇ ರೀತಿಯ ಸಂಬಂಧ-ಸಂಪರ್ಕ ಕಳೆದುಕೊಂಡಿರುವ ರೋಗಿಗಾಗಿ ದುಡಿಯುವುದರಲ್ಲಿ ಏನೂ ಅರ್ಥವಿಲ್ಲ. ಎಂದಾದರೊಮ್ಮೆ ಕಿಲಾಈಯನ್ನು ಬಿಟ್ಟು ಓಡಿ ಹೋಗಲು ಒಮ್ಮೊಮ್ಮೆ ಯೋಚಿಸುತ್ತಾಳೆ. ಗುಟ್ಟಾಗಿ ಅಲ್ಲ. ರಾಜಾರೋಷಾಗಿ. ಎಲ್ಲರ ಎದುರಿನಲ್ಲೇ ಹೋಗುತ್ತಾಳೆ. ಯಾರಾದರೂ ಪ್ರಶ್ನಿಸಿದರೆ ಕಿಲಾಈಯೊಡನೆ ನನಗೆ ಯಾವ ಸಂಬಂಧವೂ ಇಲ್ಲವೆಂದು ಖಡಾಖಂಡಿತವಾಗಿ ತಿಳಿಸುತ್ತಾಳೆ. ನಿಮಗೆ ಅವನ ಬಗ್ಗೆ ಸ್ನೇಹವಿದ್ದರೆ ನಿಮ್ಮ ಮಗಳನ್ನು ಅವನಿಗೆ ಕೊಟ್ಟು ಮದುವೆ ಮಾಡಿ. ನಾನು ಮಾತ್ರ ಇರುವುದಿಲ್ಲವೆಂದು ತಿಳಿಸುತ್ತಾಳೆ.

ಆದರೆ ಅಸಹಾಯಕತೆಯಿಂದ ಕಾತರನಾಗಿ ಪ್ರೀತಿಯಿಂದ ತನ್ನ ಕಡೆ ಕಿಲಾಈ ನೋಡಿದಾಗ ಒಮ್ಮೊಮ್ಮೆ ಅವನ ಬಗ್ಗೆ ಆಕೆಗೆ ಅತ್ಯಂತ ಸ್ನೇಹ ಮೂಡುತ್ತದೆ. ಅವನು ಮಾತು ಬರದ ಒಬ್ಬ ಬಾಲಕನಂತೆ ಕಾಣುತ್ತಾನೆ. ಚೇನಿಮಾಇಯ ಮಡಿಲಿನಲ್ಲಿ ಆಶ್ರಯ ಪಡೆದು ಬಾಳಲು ಬಯಸುತ್ತಿರುವಂತೆ ಕಾಣುತ್ತಾನೆ. ಒಂದುವೇಳೆ ಚೇನಿಮಾಇ ಅವನನ್ನು ಬಿಟ್ಟು ಹೊರಟು ಹೋದರೆ ಅವನು ಬಿಕ್ಕಿಬಿಕ್ಕಿ ಗೋಳಾಡಿ ಸಾಯುತ್ತಾನೆ. ಇದನ್ನು ಯೋಚಿಸಿದಾಗ ಚೇನಿಮಾಇ ಅವನ ಕೈಕಾಲುಗಳನ್ನು ಒರಸಿ ಸ್ವಲ್ಪ ಸಾಸಿವೆ ಎಣ್ಣೆ ಬೆಚ್ಚಗೆ ಮಾಡಿ ಅವನ ಎದೆಗೆ ತಿಕ್ಕುತ್ತಾಳೆ. 'ಕಿಲವು' ಪಲ್ಯ ಚೆನ್ನಾಗಿ ಮಾಡಿಕೊಡುತ್ತಾಳೆ. ಅವಳ ಈ ಪ್ರೀತಿ ಕಿಲಾಈಗೆ ಬಹುಶಃ ಹೆಚ್ಚು ಶಕ್ತಿ ನೀಡುತ್ತದೆ. ಅವನ ಒಣತುಟಿಗಳ ಮೇಲೆ ಕೃತಜ್ಞತೆಯ ಮೂಕ ಭಾವ ಉಕ್ಕುತ್ತದೆ. ಅಪಾರ ದುಃಖವನ್ನು ತೋಡಿಕೊಳ್ಳುತ್ತಾ ಚೇನಿಮಾಇ ಕೈ ಹಿಡಿದು ಕೊಳ್ಳುತ್ತಾನೆ.- "ನನ್ನಿಂದ ನಿನಗೆ ತುಂಬಾ ಕಷ್ಟ, ಅಲ್ಲವೇ ಚೇನಿ? ನೀನಂತೂ ಹೀಗೆ ಕಷ್ಟಪಡುತ್ತಿದ್ದೀಯೇ ನನ್ನ ಕಾಯಿಲೆ ವಾಸಿಯಾಗುತ್ತದೆಯೋ?" ಆಗ ಚೇನಿಗೆ ಅವನ ಬಗ್ಗೆ ಇನ್ನೂ ಹೆಚ್ಚು ಸ್ನೇಹ ಉಂಟಾಗುತ್ತದೆ. ಕೈಯಲ್ಲಿ ಹಣಕಾಸು ಇದ್ದರೆ ಅವನನ್ನು ಪಟ್ಟಣದ ಯಾವುದಾದರೂ ಆಸ್ಪತ್ರೆಗೆ ಸೇರಿಸಿ ಚಿಕಿತ್ಸೆ ಮಾಡಿಸುತ್ತಿದ್ದೆ. ಆಗ ಬಹುಶಃ ಕಾಯಿಲೆ ವಾಸಿಯಾಗುತ್ತಿತ್ತೇನೋ? ಎಂದು ಯೋಚಿಸುತ್ತಾಳೆ. ಹತ್ತಿರದಲ್ಲೆಲ್ಲಾದರೂ ಒಳ್ಳೆಯ ಆಸ್ಪತ್ರೆಯಿದ್ದರೆ ಕಿಲಾಈ ಗುಣಮುಖನಾಗುತ್ತಿದ್ದ. ಆದರೆ ಇದು ಸುತರಾಂ ಹಿಂದುಳಿದ ಹಳ್ಳಿ. ಇಲ್ಲಿ ಹುಲಿ, ಆನೆ, ಮನುಷ್ಯರು, ರೋಗ-ಎಲ್ಲ ಅನುಕೂಲ ಇದ್ದಿದ್ದರೆ ಕಿಲಾಈಗೆ ನಿರಾಶೆಯಾಗುತ್ತಿರಲಿಲ್ಲ.

ರೋಗಿಷ್ಟ ಕಿಲಾಈಯ ಪಕ್ಕದಲ್ಲಿ ಯಾವ ತೆರನಾದ ಉದ್ವಿಗ್ನತೆಯೂ ಇಲ್ಲದೆ ನಿದ್ರಿಸಲು ಪ್ರಯತ್ನಿಸುತ್ತಾ ಚೇನಿಮಾಇ ತನ್ನಷ್ಟಕ್ಕೆ ತಾನೇ ಯೋಚಿಸುತ್ತಾಳೆ- "ಕಿಲಾಈ ತೀರಿಕೊಂಡ ಮೇಲೆ ನಾನು ಇಲ್ಲಿಂದ ಎಲ್ಲೋ ಒಂದು ಕಡೆ ಹೋಗಿ ಇರೋದು ಬೇರೆ ಮಾತು. ಆದರೆ ಈತನ ಜೊತೆಯಲ್ಲಿರುವವರೆಗೂ ಈತನೇ ನನ್ನ ಗಂಡ. ಎಂದೂ ಈತನ ನಂಬಿಕೆಗೆ ದ್ರೋಹ ಬಗೆಯುವುದಿಲ್ಲ. ಸಂಬಂಧ ಕಿತ್ತುಹೋದರೆ ಆ ಮಾತು ಬೇರೆ."

ಆದರೆ ಕಿಲಾಈಯನ್ನು ಮನೆಯಲ್ಲೇ ಬಿಟ್ಟು ಚೇನಿಮಾಇ ಎಲ್ಲೋ ಹೊಲದಲ್ಲಿ ಕೆಲಸ ಮಾಡುವಾಗ ಈ ವಿಚಾರಗಳೆಲ್ಲವೂ ಅಪ್ರಯೋಜಕವೆಂದು ಭಾವಿಸುತ್ತಾಳೆ. ಕಿಲಾಈಯ

ಜೊತೆಯಲ್ಲಿ ನನ್ನ ಸಂಬಂಧ ಏನಿದೆ? ಈ ರೀತಿ ಒಂಟಿಯಾಗಿ ಬಾಳಿ ಮುದುಕಿಯಾಗುವುದರಲ್ಲಿ ಏನು ಮಜಾ ಇದೆ?

ಆದಾಗ್ಯೂ ತನ್ನ ಗಂಡ ಬದುಕಿರುವವರೆಗೂ ಬೇರೆಯವರ ಕಡೆಗೆ ದೃಷ್ಟಿ ಹಾಯಿಸುವುದು ಉಚಿತವಲ್ಲವೆಂದು ಅವಳು ಗಟ್ಟಿ ಮನಸ್ಸು ಮಾಡಿ ತನಗೆ ತಾನೆ ಹೇಳಿಕೊಳ್ಳುತ್ತಾಳೆ. ಗಂಡ ರೋಗಿಷ್ಠನಾದರೇನು? ಅಪಕೀರ್ತಿಯ ಭಯ ಅಕೆಗಿಲ್ಲ. ಆದರೆ ಒಮ್ಮೆ ಮದುವೆಯಾದ ಮೇಲೆ ಅವಳು ಗಂಡನ ಬಗ್ಗೆ ಅಗೌರವ ತೋರಿಸುವುದಿಲ್ಲ. ಅವಳು ಅಷ್ಟು ಕೆಟ್ಟ ಹೆಂಗಸಲ್ಲ. ಹಾಗೆ ಆಗಲು ಸಾಧ್ಯವೂ ಇಲ್ಲ.

ಅಗತ್ಯ ಬಿದ್ದಾಗ ಅವಳು ಗುಲಟ್‌ನ ಮನೆಗೆ ಬರುತ್ತಾಳೆ. ತನಗೆ ಬೇಕಾದ ಒಂದೆರಡು ವಸ್ತುಗಳನ್ನು ಕೇಳಿ ತೆಗೆದುಕೊಂಡು ಹೋಗುತ್ತಾಳೆ. ಕಪಾಹಿ ಮತ್ತು ತರಾ ಸಹ ಮನೆಯಲ್ಲಿರುವ ವಸ್ತುವನ್ನು ಕೊಡದೆ ಹಾಗೇಕಳುಹಿಸುವುದಿಲ್ಲ. ಚೇನಿ ಸಹ ಬಿಡುವು ಸಿಕ್ಕಿದಾಗ ಒಮ್ಮೊಮ್ಮೆ ಕೊಟ್ಟಣದ ಯಾತದಲ್ಲಿ ಬತ್ತ ಕುಟ್ಟಿ ಕೊಡುತ್ತಾಳೆ. ಮೂರು ನಾಲ್ಕು ತಕಲಿ ದಾರ ಸುತ್ತಿ ಕೊಡುತ್ತಾಳೆ. ಕೆಲವು ಸಾರಿ ಅಂಗಳದಲ್ಲಿ ಒಣಗಲು ಹಾಕಿರುವ ಬತ್ತವನ್ನು ಮತ್ತೊಮ್ಮೆ ಕೈಯ್ಯಾಡಿಸಿ ಹೋಗುತ್ತಾಳೆ. ಕೆಲವು ಸಾರಿ ಹೆಚ್ಚಿಗೆ ಮೀನಿದ್ದರೆ ಕತ್ತರಿಸಿ ಹಸನು ಮಾಡಿಕೊಟ್ಟು ಹೋಗುತ್ತಾಳೆ. ಈ ಕೆಲಸಗಳನ್ನು ಮಾಡಲು ಅವಳಿಗೆ ಯಾರೂ ಹೇಳಬೇಕಾಗಿಲ್ಲ.

ಗುಲಟ್‌ನ ಜೊತೆಯಲ್ಲೂ ಮಾತನಾಡುತ್ತಾಳೆ. ಗುಲಟ್ ಯಾರ ಜೊತೆಯಲ್ಲೂ ಹೆಚ್ಚಿಗೆ ಮಾತನಾಡುವುದಿಲ್ಲ. ಚೇನಿಯ ಯೋಗಕ್ಷೇಮ ವಿಚಾರಿಸುತ್ತಾನೆಯೇ ಹೊರತು ಮತ್ತೇನೂ ವಿಷಯ ಮಾತನಾಡುವುದಿಲ್ಲ. ಆದರೆ ತರಾ ಮೂಲಕ ಆದಷ್ಟು ಮಟ್ಟಿಗೆ ಏನಾದರೂ ಸಹಾಯ ಮಾಡುತ್ತಾನೆ. ಅಕ್ಕಿ, ಮೀನು, ತರಕಾರಿ ಮತ್ತು ನಾಲ್ಕಾರು ಕಾಸು ಕೊಡಿಸುತ್ತಾನೆ. ಅವಳೂ ಸಹ ತೆಗೆದುಕೊಳ್ಳಲು ಸಂಕೋಚಪಡುವುದಿಲ್ಲ. ಬಡವರು ಅಹಂಕಾರ ತೋರ್ಪಡಿಸಿದರೆ ಏನಾಗುತ್ತೆ?

ಅವಕಾಶ ಸಿಕ್ಕಿದಾಗ ಗುಲಟ್ ಒಮ್ಮೊಮ್ಮೆ ಚೇನಿಮಾಇ ಮನೆಗೆ ಹೋಗುತ್ತಾನೆ. ಅವಳ ಹಾಗೂ ಕೆಲಾಈಯ ಯೋಗಕ್ಷೇಮ ಮತ್ತು ಮನೆಮಠದ ವಿಷಯ ಮಾತಾಡಿಕೊಂಡು ಒಂದು ಬೀಡಾ ಹಾಕಿಕೊಂಡು ಹಿಂದಿರುಗುತ್ತಾನೆ. ಗುಲಟ್ ಅವಳ ಮನೆಗೆ ಹೋದಾಗ ಚೇನಿ ಆತನನ್ನೂ ಗೌರವದಿಂದ ಕಾಣುತ್ತಾಳೆ. ಎಲೆ ಅಡಿಕೆ ತಟ್ಟೆ ಮುಂದಿಟ್ಟುಕೊಂಡು ಕುಳಿತುಕೊಳ್ಳುತ್ತಾಳೆ. ಮತ್ತು ತನ್ನ ಕಷ್ಟಸುಖವನ್ನು ಹೇಳಿಕೊಳ್ಳುತ್ತಾಳೆ. ಈಗ ಗುಲಟ್ ಆ ಹಳ್ಳಿಯ ಗಣ್ಯವ್ಯಕ್ತಿಯಾಗಿದ್ದಾನೆ. ಕಣಜದಲ್ಲಿ ಬತ್ತ, ಕೊಟ್ಟಿಗೆಯಲ್ಲಿ ದನಕರುಗಳು, ತೋಟದಲ್ಲಿ ಎಲೆ-ಅಡಿಕೆ ಫಸಲು ಎಲ್ಲಾ ಇದೆ. ಮನಸ್ಸು ಮಾಡಿದರೆ ಒಂದಿಪ್ಪತ್ತು ರೂಪಾಯಿ ಲುಂಗಿ ಗಂಟಿನಿಂದ ತೆಗೆದು ಕೊಡಬಲ್ಲ. ಇಂಥ ಗುಲಟ್‌ನು ಮೋಲೋಕಾ ಮನೆಗೆ ಬರುವುದು ಒಂದು ತರಹ ದೊಡ್ಡಸ್ತಿಕೆಯ ಮಾತು. ಮೋಲೋಕಾನಿಗೂ ಇದು ಇಷ್ಟವೇ.

ಒಮ್ಮೊಮ್ಮೆ ಕಪಾಹಿ ಮತ್ತು ತರಾಳಿಗೆ ಗೊತ್ತಾಗದಂತೆ ಗುಲಟ್ ತನ್ನ ಮನೆಯಿಂದ ಸ್ವಲ್ಪ ಟೀ ಎಲೆ ಹಾಗೂ ಸ್ವಲ್ಪ ಸಕ್ಕರೆ ತೆಗೆದುಕೊಂಡು ಹೋಗಿ ಚೇನಿಮಾಇಯ ಕೈಗೆ ಕೊಟ್ಟು ಹೇಳುತ್ತಾನೆ- "ಸ್ವಲ್ಪ ಟೀ ಮಾಡಿಕೊಡು; ಬಾಯಾರಿಕೆಯಾಗಿದೆ."

ಕೆಲವು ಸಾರಿ ಹೊರಗಡೆಯಿಂದಲೇ ನೇಪಾಲಿಯ 'ಬಥಾನ್'ನಿಂದ ತಂದ ಎಮ್ಮೆ ತುಪ್ಪದಲ್ಲಿ ಸ್ವಲ್ಪವನ್ನು ಗುಲಟ್ ಬಿದಿರಿನ ಕೊಳವೆಗೆ ತುಂಬಿ ಚೇನಿಗೆ ಕೊಟ್ಟು ಬರುತ್ತಾನೆ.

ಕೆಲಾಕಿ ಅದನ್ನೇ ತಿನ್ನುತ್ತಾನೆ. ಕೆಲವು ಸಾರಿ ಸ್ವಲ್ಪ ದುಡ್ಡು ಸಹ ಕೊಟ್ಟು ಬರುತ್ತಾನೆ. "ಅಲ್ಲಾ ದಯೆಯಿಂದ ಸಣಬು ಫಸಲಿನಲ್ಲಿ ಸ್ವಲ್ಪ ಲಾಭ ಸಿಕ್ಕಿದೆ. ತಗೋ. ಈ ಎರಡಾಣೆ. ಹರಕೆ ಕಟ್ಟು" ಎಂದು ಹೇಳುತ್ತಾನೆ.

ಚೇನಿಗೆ ಗುಲಬ್‌ನ ಬಗ್ಗೆ ಸ್ನೇಹ ಮೂಡುತ್ತದೆ.

ಚೇನಿ ಒಂದು ದಿನ ರಾತ್ರಿಹೊತ್ತು ಗುಲಬ್‌ನನ್ನು ಅಂಗಳದ ಒಂದು ಮೂಲೆಗೆ ಕರೆದು ಹೇಳಿದಳು- "ಚಂದ್ರ ಮತ್ತು ಇನ್ನೂ ಕೆಲವರು ನಿನ್ನ ಹತ್ತಿರ ಬರ್‍ತಾ ಇರ್‍ತಾರೆ. ಅವರು ಸ್ವಲ್ಪ ಏನಾದರೂ ವ್ಯವಸ್ಥೆ ಮಾಡೋದಕ್ಕೆ ಆಗೋದಿಲ್ವೇ?"

"ಯಾರಿಗೆ?"

"ಇವರ ಚಿಕಿತ್ಸೆಗಾಗಿ. ಇಲ್ಲೇ ಇದ್ದರೆ ಹೇಗೆ ಗುಣವಾಗುತ್ತೆ? ಇಲ್ಲಿ ಎಲ್ಲಿ ತಾನೇ ಔಷಧಿ ಸಿಗುತ್ತೆ; ಬರೇ ನೀರು! ಕೈಯಲ್ಲಿ ಒಂದು ಬಿಡಿಗಾಸು ಇಲ್ಲ. ಹೇಗೆ ಚಿಕಿತ್ಸೆ ಮಾಡಿಸಲಿ? ಗೋಲಾಘಾಟ್‌ನ ಸರಕಾರಿ ಆಸ್ಪತ್ರೆಗೆ ಸೇರಿಸಿದರೆ ಬಹುಶಃ ಗುಣವಾಗಬಹುದು."

ಗುಲಬ್ ಏನೂ ಮಾತನಾಡಲಿಲ್ಲ.

ಈ ವಿಷಯ ಗುಲಬ್‌ಗೆ ತಿಳಿಯೋದಿಲ್ಲ. ಚಂದ್ರನಿಗೆ ಗೊತ್ತು. ಆತ ಸದಾ ಪಟ್ಟಣಕ್ಕೆ ಹೋಗುತ್ತಿರುತ್ತಾನೆ.

"ಚಂದ್ರ ಬಂದಾಗ ಕೇಳಿದರೆ..........."

"ಆದರೆ ಅವನನ್ನು ಅಲ್ಲಿಗೆ ಸೇರಿಸಿದ ಮೇಲೆ ನೋಡಿಕೊಳ್ಳೋರು ಯಾರು?

"ಅಲ್ಲಿಯ ಡಾಕ್ಟರು ನೋಡಿಕೊಳ್ಳುತ್ತಾರೆ. ಏನೂ ಖರ್ಚಾಗೋಲ್ಲ ಅಂತ ಹೇಳ್ತಾರೆ. ಒಂದು ವೇಳೆ ಅಗತ್ಯ ಬಿದ್ದರೆ ಕೈನದು ಕಿವಿನದು (ಕಡಗ. ಓಲೆ) ಮಾರಿ ಅದಷ್ಟು ಜೊತೆ ಮಾಡ್ತೀನಿ. ನೀವೂ ಸಹ ಸ್ವಲ್ಪ ಹಣ ಸಹಾಯ ಮಾಡಿ.........."

ಸ್ವಲ್ಪ ಹೊತ್ತಿನವರೆಗೂ ಸುಮ್ಮನಿದ್ದು ಗುಲಬ್ ಹೇಳಿದ- "ನಿಜ. ಚಂದ್ರ ಕೆಲವು ಸಾರಿ ತನ್ನ ಹಳ್ಳಿಯಲ್ಲೇ ಆಸ್ಪತ್ರೆ ಆಗೋ ಹಾಗೆ ಮಾಡ್ಬೇಕು ಅಂತ ಹೇಳ್ತಿರ್‍ತಾನೆ. ನಾನು ಅವನ ಮಾತನ್ನು ಇದು ನಿನ್ನ ಪ್ರಲಾಪ ಅಂತಿದ್ದೆ. ಇಲ್ಲಿ ಒಂದು ಆಸ್ಪತ್ರೆ ಇದ್ದರೆ ಜನರಿಗೆ ಇಷ್ಟೊಂದು ತೊಂದರೆ ಆಗೋದಿಲ್ಲ."

ಗುಲಬ್ ಮನಸ್ಸಿನಲ್ಲೇ ನಿಶ್ಚಯಿಸಿದ. ಪಾಠಶಾಲೆ ತೆರೆಯುವಂತೆ ಚಂದ್ರ ಒಂದು ವೇಳೆ ಇಲ್ಲಿಯೇ ಆಸ್ಪತ್ರೆ ವ್ಯವಸ್ಥೆ ಮಾಡಿದರೆ ನಾನು ಒಂದು ಕಾಲು ಗುಂಟೆ ಜಮೀನು ಕೊಡ್ತೀನಿ. ನಲವತ್ತು ರೂಪಾಯಿ ಸಹ ಕೊಡ್ತೀನಿ. ಈ ಹಳ್ಳಿಗೆ ಒಂದು ಶಾಲೆ ಮತ್ತು ಒಂದು ಆಸ್ಪತ್ರೆ ಅಗತ್ಯವಿದೆ.

ಚೇನಿಮಾಇಗೆ ಗುಲಬ್ ಧೈರ್ಯ ಹೇಳಿದ- "ನೀನು ಚಿಂತಿಸಬೇಡ. ಚೇನಿ. ಚಂದ್ರ ಬರಲಿ. ಒಂದು ವೇಳೆ ನೀನು ಹೇಳಿದ್ದು ಸಾಧ್ಯವಾದರೆ ಮಾಡೋಣ. ದುಡ್ಡುಕಾಸು ಬೇಕಾದರೆ ನಾನು ಕೊಡ್ತೀನಿ. ನೀನು ಚಿಂತಿಸಬೇಡ. ಅವೊತ್ತು ನೀನು ಮಾತಾಡಿದ ರೀತಿ ನೋಡಿ ನಾನು ಬೇರೆ ರೀತಿ ಯೋಚಿಸ್ತಿದ್ದೆ."

ಚೇನಿ ಹೇಳಿದಳು- "ನಾನು ಸಹಾ ರೋಗಿಯ ಸೇವೆ-ಶುಶ್ರೂಷೆ ಮಾಡುವುದಕ್ಕೋಸ್ಕರವೇ ಈ ಜಗತ್ತಿನಲ್ಲಿ ಜನ್ಮತಾಳಿದೆನೇನೋ ಅಂತ ಕೆಲವು ಸಾರಿ ಬಹಳ ಸಿಟ್ಟು ಬರುತ್ತೆ. ಅಷ್ಟೆ ಅಲ್ಲದೆ ನಾನು ಮದುವೆ ಆಗಿರೋ ಮನೆಯ ಸ್ಥಿತಿ ಹೇಗಿದೆ ಅಂದರೆ ಬೆಳಿಗ್ಗೆ ಮತ್ತು

ಸಾಯಂಕಾಲದ ಊಟವನ್ನೂ ಸಹ ಇನ್ನೊಬ್ಬರ ಮನೆಯಲ್ಲಿ ಕೇಳಿ ಇಸಿಕೊಂಡು ಬರಬೇಕಾಗಿದೆ. ಸಾಯದೆ ಇನ್ನೇನು ಮಾಡಲಿ? ಆದರೆ ನೀನು ಹತ್ತಿರದಲ್ಲೇ ಇದ್ದೀಯೆ. ಆದುದರಿಂದ ನಿನ್ನ ಧೈರ್ಯದ ಮೇಲೆ ನಾನಿದ್ದೇನೆ. ಇಲ್ಲದಿದ್ದರೆ ಯಾವಾಗ ಏನು ಮಾಡಿಕೊಳ್ಳುತ್ತಿದ್ದನೋ ನನಗೇ ಗೊತ್ತಿಲ್ಲ."

ಚೇನಿಮಾಇಯನ್ನು ಗುಲಚ್ ಸಮಾಧಾನಪಡಿಸಲು ಬಯಸಿದ. ತನ್ನ ಗಂಡನ ಬಗ್ಗೆ ಪ್ರೀತಿ ಇರೋದು ಸಹಜ. ಸಾಲದ್ದಕ್ಕೆ ಆತ ರೋಗಿಷ್ಠ. ಚಂದ್ರನು ಬರೋದನ್ನೇ ಗುಲಚ್ ನಿರೀಕ್ಷಿಸುತ್ತಿದ್ದ. ಅವನು ಬಹಳ ದಿನಗಳಿಗೊಮ್ಮೆ ಬರುತ್ತಾನೆ. ಎಲ್ಲಿ ಸುತ್ತಾಡುತ್ತಿರುತ್ತಾನೋ ಗೊತ್ತಿಲ್ಲ. ಇತ್ತೀಚೆಗೆ ಆತನ ಉಡುಪು ಮೊದಲಿಗಿಂದಲೂ ಚೆನ್ನಾಗಿದೆ. ಕಳೆದ ಬಾರಿ ಭೇಟಿಯಾದಾಗ ಆತ ಚೀಟಿ ಬಟ್ಟೆಯ ಹವಾ ಶರ್ಟ್ ಹಾಕಿಕೊಂಡಿದ್ದ. ಕೈಗೆ ಚೆನ್ನಾಗಿರೋ ಗಡಿಯಾರ ಕಟ್ಟಿದ್ದ. ಸ್ವಲ್ಪ ಮೀಸೆ ಸಹ ಬಿಟ್ಟಿದ್ದ. ಅಪ್ಪಟ ನೀಲಿ ಬಣ್ಣದ ಪ್ಯಾಂಟ್ ಹಾಕಿದ್ದ. ಮೊದಲಿನಂತೆಯೆ ಪ್ಯಾಂಟಿನ ತಳಭಾಗವನ್ನು ಮಂಡಿಯವರೆಗೆ ಮಡಿಸಿದ್ದ. ಕಾಡಿನ ಹುಲ್ಲುಸೊಪ್ಪಿನ ಕೊಳಕು ಮಂಡಿಯವರೆಗೂ ಮೆತ್ತಿತ್ತು. ಅವನ ಮುಖ ಸೊರಗಿದಂತಿತ್ತು. ಬಹುಶಃ ಸಮಯಕ್ಕೆ ಸರಿಯಾಗಿ ಊಟ ಇಲ್ಲ. ಇಪ್ಪತ್ತನಾಲ್ಕು ಗಂಟೆಗಳೂ ಸುತ್ತುತ್ತಿರುತ್ತಾನೆ.

ಕಲಾಆಯ ರೋಗ ವಾಸಿಯಾಗಬಹುದು. ಹಣ ಖರ್ಚು ಮಾಡಬೇಕಾಗುತ್ತೆ. ಒಂದುವೇಳೆ ಅವನ ರೋಗ ವಾಸಿಯಾದರೆ ಚೇನಿಮಾಇಗೆ ನೆಮ್ಮದಿ ಸಿಗುತ್ತೆ. ಅವಳ ಸಂಸಾರ ಸರಿ ಹೋಗುತ್ತೆ. ಆದರೆ ಸರಕಾರದ ಖರ್ಚಿನಿಂದಲೇ ಚಿಕಿತ್ಸೆಯಾದರೆ ಮೇಲು. ಇಲ್ಲದಿದ್ದರೆ ಚೇನಿಮಾಇಗೆ ದುಡ್ಡು ಎಲ್ಲಿಂದ ದೊರೆಯುತ್ತೆ?

ಆಮೇಲೆ ಏನಾಗಬೇಕೋ ಆಗುತ್ತೆ. ಮೊದಲು ಅವನನ್ನು ಆಸ್ಪತ್ರೆಗೆ ಸೇರಿಸಿದರೆ ಸರಿ.

ಈ ವಿಷಯದ ಬಗ್ಗೆ ಕಪಾಹಿಯಿಂದ ಸಲಹೆ ಪಡೆಯಲು ಗುಲಚ್ ಒಂದೆರಡು ಬಾರಿ ಯೋಚಿಸಿದ. ಅನಂತರ ಈ ವಿಷಯ ಅವಳಿಗೆ ತಿಳಿಸದೇ ಇರೋದೇ ಮೇಲು ಎಂದು ನಿಶ್ಚಯಿಸಿದ. ಅವಳು ಏನು ತಿಳಿದುಕೊಂಡಾಳು? ಹೆಂಗಸರ ಮನಸ್ಸನ್ನು ಅರಿಯಲು ಸಾಧ್ಯವಿಲ್ಲ. ಆದರೆ ಕಪಾಹಿ ಕೆಟ್ಟ ಹೆಂಗಸಲ್ಲ. ಚೇನಿಮಾಇಯ ಗಂಡನಿಗೆ ಗುಣವಾದರೆ ಕಪಾಹಿ ಸಿಟ್ಟಾಗೋದಕ್ಕೆ ಯಾವ ಕಾರಣವೂ ಇಲ್ಲ. ಆದರೆ ಎಲ್ಲ ವಿಷಯವನ್ನೂ ಹೆಂಗಸರಿಗೆ ತಿಳಿಸದೇ ಇರೋದೇ ಮೇಲು.

# ಇಪ್ಪತ್ತೈದು

ಬಹಾಗ್-ಬಿಹು ಗೆ ಸ್ವಲ್ಪ ದಿನಗಳ ಮುನ್ನ ಗುಲಚ್ ಡಾಲಿಮ್ ಹಳ್ಳಿಗೆ ಹೋದ. ಇತ್ತೀಚೆಗೆ ಆತನಿಗೆ ಡಾಲಿಮ್ ಹಳ್ಳಿಗೆ ಹೋಗಲು ಬಿಡುವೇ ಸಿಗುತ್ತಿಲ್ಲ ಮತ್ತು ಅಲ್ಲಿಗೆ ಹೋಗುವ ಅಗತ್ಯವೂ ಕಂಡು ಬಂದಿರಲಿಲ್ಲ. ಆತ ಕ್ರಮೇಣ ಸಿಪರಿಯಾ ಹಳ್ಳಿಯ ನಿವಾಸಿಯಾಗಿದ್ದ.

ಆತನ ತಾಯಿ ಮತ್ತು ಅಣ್ಣ ಸುಖವಾಗಿದ್ದರು. ಹಳ್ಳಿಯ ಮಿತ್ರರು ಸಹ ಅನುಕೂಲವಾಗಿದ್ದರು. ತಾನು ಹುಟ್ಟಿದ ಊರಿಗೆ ಬೇರೆ ಊರಿನ ವ್ಯಕ್ತಿಯಂತೆ ಬಂದು

ಹೋಗುವುದು ಆತನಿಗೆ ಚೆನ್ನಾಗಿ ಕಾಣಿಸುತ್ತಿತ್ತು. ಆ ಹಳ್ಳಿಯ ಜನರು ಸ್ನೇಹಪೂರ್ವಕವಾಗಿ ಮಾತನಾಡಿಸುತ್ತಿದ್ದರು. ಕಪಾಹಿ ಹೇಗಿದ್ದಾಳೆ? ಬೇಳೆ ಸಾಸಿವೆ ಎಷ್ಟು ಬೆಳೆದೆ?

ತನ್ನ ಸುಖಸಮೃದ್ಧಿಯ ಬಗ್ಗೆ ಹೇಳಿಕೊಳ್ಳೋದು ಗುಲಚ್‌ನಿಗೆ ಚೆನ್ನಾಗಿ ಕಾಣಿಸಿತು. ಡಾಲಿಮ್ ಹಳ್ಳಿ ಬಿಟ್ಟು ಮೂರು ವರ್ಷವಾಗುವುದರಲ್ಲಿತ್ತು. ಅವನ ಸ್ಥಿತಿಗತಿಗಳಲ್ಲಿ ಸಾಕಷ್ಟು ಬದಲಾವಣೆಯಾಗಿತ್ತು. ಆದರೆ ಡಾಲಿಮ್ ಹಳ್ಳಿ ಮೊದಲಿನಂತೆಯೇ ಇದೆ. ಕೇವಲ ಕೆಲವು ಮರ ಗಿಡ ಬೆಳೆದಿವೆ. ಕೆಲವು ಕಿಶೋರರು ತರುಣರಾಗಿದ್ದಾರೆ. ಕೆಲವು ಕಿಶೋರಿಯರು ತರುಣಿಯರಾಗಿದ್ದಾರೆ.

ಡಾಲಿಮ್ ಹಳ್ಳಿಯಲ್ಲಿರುವ ಪಿತ್ರಾರ್ಜಿತ ಜಮೀನನ್ನು ಏನು ಮಾಡ್ಬೇಕು? ಎಂಬುದರ ಬಗ್ಗೆ ತನ್ನ ತಾಯಿ ಮತ್ತು ಅಣ್ಣನಲ್ಲಿ ಸಲಹೆ ಕೇಳಿದ. ಜಮೀನು ಮಾರಾಟ ಮಾಡಲು ಆತನಿಗೆ ಇಷ್ಟವಿಲ್ಲ. ಆದರೆ ಒಳ್ಳೆಯ ಬೆಲೆ ಸಿಕ್ಕಿದರೆ ಮಾರಲು ಸಿದ್ಧವಾಗಿದ್ದಾನೆ. ಅದನ್ನು ಅಣ್ಣನೇ ಕೊಂಡುಕೊಳ್ಳುವುದಾದರೆ ಕೊಂಡು ಕೊಳ್ಳಲಿ. ಇದು ಅಣ್ಣತಮ್ಮನಿಗೆ ಸಂಬಂಧಿಸಿದ ವಿಚಾರ. ಆತನ ಅಣ್ಣ ಆತನ ಜಮೀನಿನ ಫಸಲಿನಲ್ಲಿ ಅರ್ಧಪಾಲು ಕೊಡಲು ಒಪ್ಪಿದ್ದಾನೆ. ಆದರೆ ಯಾವ ವರ್ಷವೂ ಆತ ಪಾಲು ತೆಗೆದುಕೊಳ್ಳಲಿಲ್ಲ. ಆತನ ತಾಯಿ ಅಣ್ಣನ ಬಳಿಯೇ ಇದ್ದಾಳೆ. ಅಣ್ಣನ ಕುಟುಂಬ ಸಹ ದೊಡ್ಡದು. ಆತನಿಗೆ 'ಅಲ್ಲಾ' ಏನೋ ಸ್ವಲ್ಪ ಅನುಕೂಲ ಮಾಡಿದ್ದಾನೆ. ಆತ ಪಾಲು ತೆಗೆದುಕೊಳ್ಳದಿದ್ದರೂ ನಡೆಯುತ್ತೆ.

ಆದರೆ ಪಿತ್ರಾರ್ಜಿತ ಸಂಪತ್ತಿನಲ್ಲಿ ತನ್ನ ಪಾಲನ್ನು ಬಿಟ್ಟುಬಿಡಲು ಆತ ಸಿದ್ಧನಾಗಿಲ್ಲ. ಅದು ಒಂದೂಕಾಲು ಗುಂಟೆಯಾದರೂ ಸರಿಯೇ. ತನ್ನ ತಂದೆಯ ಬೆವರಿನ ಹನಿ ಅದರಲ್ಲಿ ಸೇರಿಕೊಂಡಿದೆ. ತಂದೆ ಆಸ್ತಿಯಲ್ಲಿ ಒಂದು ತೆರನಾದ ಆತ್ಮೀಯತೆ ಇದೆ. ತಂದೆ ಇಲ್ಲ, ಆದರೆ ತಂದೆಯ ಸಂಪತ್ತು ಇದೆ. ಏಕೆ ಬಿಟ್ಟುಬಿಡಲಿ?

ಮಾರಾಟ ಮಾಡುವ ನಿರ್ಧಾರ ಕೈಗೊಳ್ಳುವುದಕ್ಕೆ ಎರಡು ಕಾರಣಗಳಿವೆ. ಒಂದನೆಯದಾಗಿ ಸಿಪರಿಯಾ ಹಳ್ಳಿಯಲ್ಲಿ ಒಂದು ಕಡೆ ಫಲವತ್ತಾದ ಜಮೀನು ಮಾರಾಟಕ್ಕಿದೆ. ಬೆಲೆ ಸ್ವಲ್ಪ ಜಾಸ್ತಿ ಹೇಳುತ್ತಿದ್ದಾನೆ. ಆದರೆ ಒಳ್ಳೆಯ ಜಮೀನು. ಪ್ರವಾಹದ ಭಯ ಇಲ್ಲ. ಹುಲಿ-ಕರಡಿಗಳ ಭಯ ಸಹ ಜಾಸ್ತಿ ಇಲ್ಲ. ಆಕಡೆ ಹಳ್ಳಿಯ ಸ್ಥಿತಿ ಸಹ ದಿನೇದಿನೇ ಸುಧಾರಿಸುತ್ತಾ ಉತ್ತಮವಾಗುತ್ತಿದೆ. ಈಗ ಆ ಜಮೀನನ್ನು ಕೊಂಡುಕೊಂಡರೆ ಮುಂದೆ ಅದರಿಂದ ಲಾಭ ಅಂದರೆ ಲಾಭ.

ಎರಡನೆಯದಾಗಿ ಇಷ್ಟೊಂದು ಬೆಲೆ ಕೊಟ್ಟು ಆ ಜಮೀನನ್ನು ಕೊಂಡುಕೊಳ್ಳುವವರು ಆ ಹಳ್ಳಿಯಲ್ಲಿ ಯಾರೂ ಇಲ್ಲ. ಅದರ ಬೆಲೆ ಎಂಟು ನೂರು ಹೇಳಿದ್ದಾನೆ. ಜಮಿನು ಸುಮಾರು ಏಳು ಎಕರೆ ಇದೆ. ಗುಲಚ್ ಹತ್ತಿರ ಈಗ ಸುಮಾರು ಐದು ನೂರು ರೂಪಾಯಿ ಇದೆ. ಇನ್ನೂ ಮೂರು ನೂರು ರೂಪಾಯಿ ಬೇಕು. ಜಮೀನಿಗೆ ಬದಲಾಗಿ ಜಮೀನನ್ನು ಕೊಂಡುಕೊಳ್ಳುತ್ತಾನೆ. ಒಳ್ಳೆಯ ಕೆಲಸ. ಅಷ್ಟೆ ಅಲ್ಲದೆ ಈ ಸಿಪರಿಯಾ ಹಳ್ಳಿಯ 'ಶ್ರೀಮಂತ' ಯಾರು ಎಂದರೆ ಗುಲಚ್‌ನ ಹೆಸರು ಹೇಳಬೇಕಾಗುತ್ತೆ. ಎಂಟುನೂರು ಕೊಟ್ಟು ಆ ಜಮೀನು ಕೊಂಡುಕೊಳ್ಳಲಾಗದಿದ್ದರೆ ನಾಚಿಕೆಗೇಡಾಗುತ್ತದೆ.

ಗುಲಚ್ ಒಮ್ಮೆ ಬಸೀರತ್ ಹತ್ತಿರ ಸಾಲ ಕೇಳೋಣ ಅಂದುಕೊಂಡ. ಬಸೀರತ್ ಒಳ್ಳೆಯ ಮನುಷ್ಯ. ಆದರೂ ಗುಲಚ್ ಆತನ ಹತ್ತಿರ ಸಾಲ ತೆಗೆದುಕೊಳ್ಳಲು ಸಿದ್ಧನಾಗಿರಲಿಲ್ಲ.

ಬಸೀರತ್ ತಾನಾಗಿಯೇ ಬಂದು ಮೊದಲೇ ಹಣ ಕೊಟ್ಟು ಹೋಗಿದ್ದ. ಆದುದರಿಂದಲೇ ಗುಲಚ್ ಕೋಣ ಕೊಂಡುಕೊಂಡಿದ್ದ. ಈಗಿನ ಮಾತೇ ಬೇರೆ.

ಆತನ ತಾಯಿ ಡಾಲಿಮ್‌ನ ಜಮೀನು ಮಾರುವುದನ್ನು ವಿರೋಧಿಸಿದಳು. ಇನ್ನೇನಾದರೂ ಮಾಡಿ ಆ ಜಮೀನು ತೆಗೆದುಕೋ. ಬಿಡಬೇಡ. ಆದರೆ ಇಲ್ಲಿಯ ಜಮೀನನ್ನು ಮಾರಬೇಡ. ಪಿತ್ರಾರ್ಜಿತವಾದ ಆಸ್ತಿಯನ್ನುಮಾರಿದರೆ ಲಕ್ಷ್ಮಿ ಹೊರಟು ಹೋಗ್ತಾಳೆ.

ಅಣ್ಣ ಹೇಳಿದ-ಒಂದು ವೇಳೆ ಮಾರೋದೇ ಆದರೆ ಬೇರೆಯವರಿಗೆ ಮಾರಬೇಡ. ನಾನೇ ಹೇಗೋ ಸಾಲಮಾಡಿ ಕೊಂಡುಕೊಳ್ಳುತ್ತೇನೆ. ಈಗ ಸ್ವಲ್ಪ ಹಣ ಕೊಡ್ತೀನಿ. ಸ್ವಲ್ಪ ಸಣಬು ಇದೆ. ಬೆಲ್ಲ ಇದೆ. ಇವನ್ನು ಮಾರಿ ಸ್ವಲ್ಪ ಹಣ ಕೊಡ್ತೀನಿ. ಬೇಕಾದರೆ ನೀನೇ ಯಾವಾಗಲಾದರೂ ನಮ್ಮಿಂದ ಮತ್ತೆ ಜಮೀನು ತೆಗೆದುಕೊಳ್ಳಬಹುದು.

ಗುಲಚ್ ಹೇಳಿದ-ವೈಶಾಖ ಕಳೆದಿದೆ. ಸಧ್ಯಕ್ಕೆ ಎರಡು ನೂರು ರೂಪಾಯಿ ಅಡ್ವಾನ್ಸ್ ಕೊಟ್ಟು ಬಿಟ್ಟಿರ್ತೀನಿ. ಬಹುಶಃ ಬಾಕಿ ಹಣವನ್ನು ಆಶ್ವಿಜ-ಕಾರ್ತಿಕ ಮಾಸದಲ್ಲಿ ಕೊಟ್ಟರೂ ಒಪ್ಪಿಕೊಳ್ಳಬಹುದು. ನೀನು ಈ ಜಮೀನು ತೆಗೆದುಕೊಳ್ಳುವುದೇ ಆದರೆ ಶ್ರಾವಣ-ಭಾದ್ರಪದ ಮಾಸದಲ್ಲೇ ಹಣ ಕೊಡಬೇಕಾಗುತ್ತೆ.

ತಾಯಿಯ ಅಭಿಪ್ರಾಯದಂತೆ ಗುಲಚ್ ಗದ್ದೆಯ ಎರಡು ಹಿಸ್ಸೆ ಮಾರಾಟ ಮಾಡಲು ನಿಶ್ಚಯಿಸಿದ. ಆತ ತನ್ನ ಪಾಲಿನ ತೋಟ ಮತ್ತು ಉಳಿದಿರೋ ಹದ್ದೆ ಜಮೀನು ಸಧ್ಯಕ್ಕೆ ಮಾರುವುದಿಲ್ಲ.

"ಶ್ರಾವಣ ಮಾಸದ ಕೊನೆಯಲ್ಲಿ ಬಸೀರತ್ ಬರುವವನಿದ್ದಾನೆ. ಆತನೇ ಸಣಬು ಕೊಂಡುಕೊಳ್ಳುತ್ತಾನೆ. ಅವನಿಂದ ಹಣ ಪಡೆದು ಜಮೀನು ಹಣ ತೀರಿಸ್ತೀನಿ" ಎಂದು ಆತನ ಅಣ್ಣ ಹೇಳಿದ.

ಗುಲಚ್ ಅದಕ್ಕೆ ಒಪ್ಪಿದ..

ಗುಲಚ್ ಜೊತೆಯಲ್ಲಿ ಹೋಗಿ ಮನೆಮಠ ನೋಡಿಕೊಂಡು ಬರಬೇಕೆಂದು ಆತನ ತಾಯಿಗೆ ಅನ್ನಿಸಿತು. ಆದರೆ ಗುಲಚ್ ಬಾಯಿಮಾತಿಗಾದರೂ ತಾಯಿಯನ್ನು ತನ್ನ ಮನೆಗೆ ಬಾ ಎಂದು ಕರೆಯಲಿಲ್ಲ. ಒಂದು ಸಾರಿ ಕರೆದುಕೊಂಡು ಹೋಗಲು ಬಂದಿದ್ದಾಗ ಆಕೆ ಹೋಗಲಿಲ್ಲ. ಈಗ ಹೋಗೋದಾದರೆ ತಾನಾಗಿಯೇ ಆಕೆ ಹೋಗ್ಬೇಕು.

ಅವನು ಕರೆಯದ ಕಾರಣ ಆತನ ತಾಯಿ ಸಹ ಏನೂ ಪ್ರಸ್ತಾಪ ಮಾಡಲಿಲ್ಲ. ಆತನೇ ಕರೆಯದೆ ಹೊದಮೇಲೆ ನಾನು ಹೋಗದಿದ್ದರೆ ಕೆಲಸ ಆಗೋದಿಲ್ವೇನು?

ಸಫಿಯತ್ ಮನೆಗೂ ಗುಲಚ್ ಹೋದ.

ಬೇರೆ ವಿಷಯದ ಜೊತೆಯಲ್ಲಿ ಸಫಿಯತ್ ಬೇನಿಮಾಇ ಬಗ್ಗೆ ವಿಚಾರಿಸಿದ. ಅದಕ್ಕೆ ಗುಲಚ್ ಉತ್ತರಿಸಿದ. ಜೊತೆಗೆ ಇದನ್ನೂ ಹೇಳಿದ- "ಆ ಕುಟುಂಬದವರ ಸ್ಥಿತಿಗತಿ ನೋಡಿಯೇ ಬೇನಿ ಮದುವೆ ಮಾಡ್ಬೇಕಾಗಿತ್ತು. ಆತನಿಗೆ ಗೂರಲು ರೋಗ, ಬಡ ಕುಟುಂಬ. ಒಂದು ಹೊತ್ತು ಊಟ ಮಾಡಿದರೆ ಇನ್ನೊಂದು ಹೊತ್ತು ಉಪವಾಸ."

ಸಫಿಯತ್ ಚರ್ಚೆ ನಿಲ್ಲಿಸಿದ. ಅನಂತರ ಹೇಳಿದ- "ತವರು ಮನೆಯಲ್ಲೇ ಅಪಕೀರ್ತಿಗೊಳಗಾದವಳಿಗೆ ರಾಜಕುಮಾರ ಸಿಗ್ತಾನೆಯೇ? ಸರಿ. ನಿನಗೆ ಮಕ್ಕಳು-ಮರಿ ಇದ್ದಾರೆಯೇ?"

ಗುಲಚ್ ತಲೆ ತಗ್ಗಿಸಿದ. ಗುಲಚ್‌ನಿಗೆ ಮಕ್ಕಳುಮರಿ ಇಲ್ಲ ಎಂದು ಸಫಿಯತ್ ಅರ್ಥ

ಮಾಡಿಕೊಂಡ. ಮಧ್ಯವಯಸ್ಸಿನ ಕಪಾಹಿ ಮದುವೆಯಾಗಿ ಸಂಸಾರ ಹೂಡಿದ್ದಾನೆ-ಮಕ್ಕಳುಮರಿ ಎಲ್ಲಿಂದ ಆಗ್ಬೇಕು!

"ಚಿಂತಿಸಬೇಕಾದ ಅಗತ್ಯವಿಲ್ಲ. ಅದೃಷ್ಟವಿದ್ದರೆ ಆಗುತ್ತೆ. ಇಲ್ಲದಿದ್ದರೆ ಇನ್ನೊಂದು ಮದುವೆ ಮಾಡಿಕೊ. ಈಗ ನಿನ್ನ ಹತ್ತಿರ ಸ್ವಲ್ಪ ದುಡ್ಡುಕಾಸು ಇದೆ. ಎಷ್ಟೋ ಜನ ನಿನಗೆ ಹೆಣ್ಣು ಕೊಡ್ತಾರೆ."

ಸ್ವಲ್ಪ ಮೌನ ತಾಳಿ ಮುದುಕ ಕೇಳಿದ-"ಅಂದಹಾಗೆ ತರಾ ನಿಮ್ಮ ಜೊತೆಯಲ್ಲೇ ಇದ್ದಾಳೆ ಅಲ್ವೇ? ಯಾರೂ ಅವಳನ್ನು ಮದುವೆ ಮಾಡಿಕೊಳ್ಳಲು ಕೇಳೋಕೆ ಬರಲಿಲ್ವೇ?"

ಹೇಗೋ ತಡೆದುಕೊಂಡು ಗುಲಚ್ ಉತ್ತರಿಸಿದ- "ಇಲ್ಲ, ಕೇಳೋಕೆ ಬರಲಿಲ್ಲ."

"ಸರಿ, ನಮ್ಮ ಮೂಗನಿಗೆ ಅವಳನ್ನು ತರಬೇಕು ಅಂದುಕೊಂಡಿದ್ದೆ. ಆದರೆ ಆ ಬೊಡ್ಡಿ ರಾತ್ರೋರಾತ್ರಿ ನಿಮ್ಮ ಮನೆಗೆ ಓಡಿ ಬಂದಳು. ನೋಡ್ತೀನಿ, ಯಾವ ರಾಜಕುಮಾರ ಅವಳನ್ನು ಮದುವೆ ಆಗ್ತಾನೆ? ಅವಳ ಮೇಲೆ ನೀನು ಸರಿಯಾಗಿ ನಿಗಾ ಇಡು. ಸಾಮಾನ್ಯವಾದ ಹೆಂಗಸಲ್ಲ. ಎಂದೋ ಒಂದು ದಿನ ದುಡ್ಡುಕಾಸು ಎಲ್ಲವನ್ನೂ ತಗೊಂಡು ಪರಾರಿಯಾಗ್ತಾಳೆ."

ತಲೆ ತಗ್ಗಿಸಿಕೊಂಡು ಗುಲಚ್ ಕುಳಿತೇ ಇದ್ದ. ತರಾಳನ್ನು ಬೇರೆಯವರಿಗೆ ಕೊಟ್ಟು ಮದುವೆ ಮಾಡೋ ವಿಷಯ ಅವನು ಎಂದೂ ಯೋಚಿಸಿರಲಿಲ್ಲ. ಸಫಿಯತ್‌ನ ಬಾಯಿಂದ ಈ ವಿಷಯ ಕೇಳಿ ಆತನ ಎದೆಗೆ ಯಾರೋ ಮುಳ್ಳು ಚುಚ್ಚಿದಂತಾಯಿತು. ಆತನ ಮುಖ ಸೊರಗಿ ಹೋಯಿತು. ಅವನಿಗೆ ಏನೂ ಉತ್ತರ ಹೊಳೆಯಲಿಲ್ಲ.

ತಲೆ ತಗ್ಗಿಸಿಕೊಂಡು ಆತ ಮೌನವಾಗಿರುವುದನ್ನು ಕಂಡು ಸಫಿಯತ್ ಸ್ವಲ್ಪ ಧ್ವನಿಯನ್ನು ತಗ್ಗಿಸಿ ನಯವಾಗಿ ಹೇಳಿದ- "ತರಾಳ ಮದುವೆ ವಿಚಾರ ಇಲ್ಲಿಯವರೆಗೆ ಯಾರೂ ಎತ್ತದಿದ್ದರೆ ಅವಳನ್ನು ನಮ್ಮ ಮೂಗನಿಗೆ ಕೊಟ್ಟು ಮದುವೆ ಮಾಡು. ಆಕೆಯ ತಾಯಿಗೆ ಇಷ್ಟ ಇತ್ತು.

ಈಗ ನೀನೇ ಹುಡುಗಿಯ ಪೋಷಕ. ನೀನು ಹೇಗೆ ಹೇಳುತ್ತೀಯೋ ಹಾಗೆ ಆಗುತ್ತೆ. ನೀನು ಮದುವೆ ಮಾಡ್ತೀನಿ ಅಂತ ಮನಸ್ಸು ಮಾಡಿದರೆ ಅವಳು ನಿರಾಕರಿಸಲು ಸಾಧ್ಯವೇ?"

ಗುಲಚ್ ಇನ್ನು ಸಹಿಸಿಕೊಂಡಿರಲು ಸಾಧ್ಯವಾಗಲಿಲ್ಲ. ಆತ ಸ್ವಲ್ಪ ಹೊತ್ತು ಮೌನವಾಗಿದ್ದು ತಟಕ್ಕನೆ ಎದ್ದು ನಿಂತ.

"ನಾನು ಈಗಲೇ ಹೊರಡ್ತೀನಿ ಚಿಕ್ಕಪ್ಪ. ಬಹಳ ಹೊತ್ತಾಯಿತು. ಹಗಲು ಹೊತ್ತಿನಲ್ಲೆ ನದಿ ದಾಟೋದು ಲೇಸು. ವೈಶಾಖ ಮಾಸದಲ್ಲಿ ಮಳೆ ಬಿದ್ದ ಕಾರಣ ಧನಶಿರಿಯಲ್ಲಿ ಭಾರಿ ಪ್ರವಾಹ ಬಂದಿದೆ."

"ಸರಿ, ಸರಿ, ಹೋಗು. ಆದರೆ ನನ್ನ ಮಾತು ನೆನಪಿರಲಿ. ನಾವೇನು ಹೊಸ ಬೀಗರೇ? ನಾವು ಮೊದಲಿಗಿಂತಲೂ ಈಗ ತೀರ ಹತ್ತಿರದ ಸಂಬಂಧಿಗಳೇ ಆಗಿದ್ದೇವೆ. ತರಾಳನ್ನು ನಮ್ಮ ಮನೆಯ ಸೊಸೆ ಮಾಡಿದ್ದ ಆದರೆ ನಿನಗೆ ಈ ಮನೆಯೂ ಸಿಗುತ್ತೆ."

ಗುಲಚ್‌ಗೆ ಸಿಟ್ಟು ಬಂತು. ಏನೂ ಉತ್ತರ ಕೊಡದೆ ಆತ ಹೊರಗಡೆ ಬಂದ. ಡಾಲಿಮ್ ಹಳ್ಳಿಯಲ್ಲಿ ಎಲ್ಲೂ ನಿಲ್ಲದೆ ಮನೆಯ ದಾರಿ ಹಿಡಿದ. ಒಂದು ಸಲ ಚಂದ್ರನನ್ನು ಭೇಟಿ ಮಾಡಿ ಹೋಗಬೇಕೆನಿಸಿತು. ಆದರೆ ಅಲ್ಲಿ ಒಂದು ಕ್ಷಣ ಸಹ ಇರಲು ಆತನಿಗೆ ಮನಸ್ಸಾಗಲಿಲ್ಲ.

ತಂದೆ-ತಾತಂದಿರ ಆಸ್ತಿಪಾಸ್ತಿಯನ್ನು ಮಾರಾಟ ಮಾಡಬಾರದು. ಲಕ್ಷ್ಮಿ ಹೊರಟು ಹೋಗ್ತಾಳೆ.

ನಿನಗೆ ಮಕ್ಕಳುಮರಿ ಆಗಿಯೇ? ಆಗ್ತವೆ. ಆಗ.ವೆ. ಇಲ್ಲದಿದ್ದರೆ ಇನ್ನೊಬ್ಬಳನ್ನು ಮದುವೆ ಮಾಡಿಕೊ.

ಇನ್ನೊಬ್ಬಳನ್ನು ಮದುವೆ ಮಾಡಿಕೊಳ್ತೀನಾ?

ಪ್ರಾಯದಹೆಣ್ಣು ತಂದರೆ ಮಕ್ಕಳಾಗುತ್ತವೆ.

ಪ್ರಾಯದ ಹೆಣ್ಣು!

ಇನ್ನೊಂದು ಹೆಣ್ಣು.

ತರಾಳನ್ನು ನಮ್ಮ ಮೂಗನಿಗೆ.

ತರಾಳನ್ನು ಮೂಗನ ಜೊತೆಯಲ್ಲಿ?

ಮೂಗನ ಜೊತೆಯಲ್ಲಿ ತರಾಳ.

ತಾಯಿಗೆ ಇಷ್ಟು ಇತ್ತು.

ತರಾಳನ್ನು ಮೂಗನಿಗೆ ಕೊಟ್ಟು ಮದುವೆ ಮಾಡಲು ಕಪಾಹಿ ಒಪ್ಪಿದ್ದಳು.

ಎಂಟು ನೂರುರೂಪಾಯಿಗೆ ಬತ್ತ ಬೆಳೆಯಲು ಅನುಕೂಲವಾಗಿರುವ ಏಳು ಎಕರೆ ಜಮೀನು. ಏಳು ಎಕರೆ.

ನಿನಗೆಷ್ಟು ಮಕ್ಕಳು?

ಮಕ್ಕಳುಮರಿ!

ಇಲ್ಲದಿದ್ದರೆ ಇನ್ನೊಬ್ಬಳ ಜೊತೆಯಲ್ಲಿ ಮದುವೆ.

ತರಾಳ ಮದುವೆ ನಮ್ಮ ಮೂಗನ ಜೊತೆಯಲ್ಲಿ.

ಗುಲಬ್‌ನಿಗೆ ತಲೆ ಸುತ್ತಿದಂತಾಯಿತು. ಆತನಿಗೆ ಏನೂ ಅರ್ಥವಾಗಲಿಲ್ಲ.

ಏನೋ ಗಡಿಬಿಡಿ.

ರಸ್ತೆಯುದ್ದಕ್ಕೂ ಇವೆಲ್ಲಾ ವಿಷಯಗಳನ್ನು ಯೋಚಿಸುತ್ತಾಹೋಗುತ್ತಿದ್ದ.

ಧನಶಿರಿಯಲ್ಲಿ ಭಾರಿ ಪ್ರವಾಹ ಬಂದಿದೆ. ಅನೇಕ ವರ್ಷಗಳಿಂದ ವೈಶಾಖ ಮಾಸದಲ್ಲಿ ಇಷ್ಟೊಂದು ಪ್ರವಾಹ ಬಂದಿರಲಿಲ್ಲ. ಶ್ರಾವಣ ಮತ್ತು ಭಾದ್ರಪದ ಮಾಸದಲ್ಲಿ ಯಾವ ರೂಪ ತಾಳತ್ತೋ ಯಾರಿಗೆ ಗೊತ್ತು. ಸಣ್ಣಪುಟ್ಟ ಪ್ರವಾಹ ಒಂದು ವೇಳೆ ಈಗಲೇ ಬಂದರೆ ಏನೂ ನಷ್ಟವಾಗುವುದಿಲ್ಲ. ನಾಟಿ ಜಮೀನಿನ ಮೇಲೆ ಸ್ವಲ್ಪ ಕೆನೆಮಣ್ಣು ಬಾಚುತ್ತೆ. ಆದರೆ ಗದ್ದೆಯ ಮಧ್ಯೆ ನೀರು ನುಗ್ಗಿದರೆ?

ಒಂದು ವೇಳೆ ಭಾರಿ ಪ್ರವಾಹ ಬಂದೇ ಬಿಟ್ಟರೆ ತಡೆಗಟ್ಟುದಕ್ಕೆ ಏನು ಉಪಾಯವಿದೆ? ಧನಶಿರಿಯನ್ನು ತಡೆಯೋದು ಯಾರು?

ನಮ್ಮ ಮೂಗನ ಜೊತೆಯಲ್ಲೇ ತರಾಳ ಮದುವೆ ನೆರವೇರಲಿ. ಈ ಪರಿಸ್ಥಿತಿಯಲ್ಲಿ ನೀನು ಏನು ಹೇಳ್ತೀಯೋ ಅದು ಆಗುತ್ತೆ. ನೀನೇ ಮಾಲೀಕ.

ಆಗುತ್ತೆ. ಆಗುತ್ತೆ. ಮಕ್ಕಳುಮರಿ ಆಗ್ತವೆ. ಇಲ್ಲದಿದ್ದರೆ ಇನ್ನೊಬ್ಬಳನ್ನು ಮದುವೆ ಮಾಡಿಕೊಳ್ಳೋದು.

ಇನ್ನು ಡಾಲಿಮ್ ಹಳ್ಳಿಗೆ ಕಾಲಿಡುವುದಿಲ್ಲವೆಂದು ಗುಲಬ್ ನಿಶ್ಚಯಿಸಿದ. ಒಂದೇ ದಿನಕ್ಕೆ ಆತ ಪೇಚಾಟಕ್ಕೆ ಸಿಕ್ಕಿಬಿದ್ದ. ಆತನ ಮನಸ್ಸಿನಲ್ಲಿ ಅಶಾಂತಿ ಮನೆಮಾಡಿತು. ಆತನ ಹೃದಯಾಂತರಾಳದಲ್ಲಿ ದುಶ್ಚಿಂತೆ ನೆಲಸಿತು. ಇಂದು ಆತನ ಕಿವಿಗೆ ಕಲ್ಪನಾತೀತ

ವಿಷಯವೊಂದು ಬಿತ್ತು.

ಇಲ್ಲ, ಇಲ್ಲ, ಡಾಲಿಮ್ ಹಳ್ಳಿಯೊಡನೆ ಆತನಿಗೆ ಯಾವ ಸಂಬಂಧವೂ ಇಲ್ಲ. ಅಲ್ಲಿ ಆತನಿಗೆ ದುಃಖ ಅಂದರೆ ದುಃಖ ಒದಗಿತ್ತು. ಮತ್ತೆ ಡಾಲಿಮ್ ಹಳ್ಳಿಗೆ ಹೋದರೆ ಅದೇ ದುಃಖ ಅನುಭವಿಸಬೇಕಾಗುತ್ತದೆ. ಡಾಲಿಮ್ ಹಳ್ಳಿಗೆ ಬಂದು ತನ್ನ ಮನಸ್ಸನ್ನು ಅನಾವಶ್ಯಕವಾಗಿ ಅಶಾಂತಿಗೀಡು ಮಾಡಿದ.

ಆತ ಡಾಲಿಮ್ ಹಳ್ಳಿಯ ಆಸ್ತಿಪಾಸ್ತಿ ಎಲ್ಲವನ್ನೂ ಮಾಡಿಬಿಡುತ್ತಾನೆ. ಡಾಲಿಮ್ ಹಳ್ಳಿಯ ಎಲ್ಲ ಸಂಬಂಧವನ್ನೂ ತೊರೆದುಬಿಡುತ್ತಾನೆ. ಆತ ಸಿಪರಿಯಾ ಹಳ್ಳಿಯ ನಿವಾಸಿಯಾಗಿಯೇ ಉಳಿಯುತ್ತಾನೆ. ಧನಶಿರಿಯ ಪಶ್ಚಿಮ ದಿಕ್ಕು ಶುಭದಾಯಕವಲ್ಲ. ಧನಶಿರಿಯ ಪೂರ್ವ ದಿಕ್ಕು ಆಶ್ರಯ ನೀಡುತ್ತಿದೆ. ಆತನನ್ನು ಮನುಷ್ಯನನ್ನಾಗಿ ಮಾಡಿದೆ. ಆತನ ಕೈಯಲ್ಲಿ ಸ್ವಲ್ಪ ದುಡ್ಡಿದೆ.

ನೀನೇ ಶಾಲೆಗೆ ಅಧ್ಯಕ್ಷನಾಗಬೇಕು.

ಶಾಲೆಯ ಕಟ್ಟಡಕ್ಕಾಗಿ ಇಪ್ಪತ್ತೈದು ರೂಪಾಯಿ ಚಂದಾ ಕೊಡಬೇಕಾಗುತ್ತೆ.

ಚಂದಾ ಕೊಡಬೇಕಾಗುತ್ತೆ!

ಗುಲಚ್ ಚಂದಾ ಕೊಡುತ್ತಾನೆ. ಶಾಲೆಯ ಕಟ್ಟಡ ಕಟ್ಟಿಸುತ್ತಾನೆ.

ಡಾಲಿಮ್ ಹಳ್ಳಿಯಿಂದ ಆತನಿಗೆ ಏನೂ ಪ್ರಯೋಜನವಿಲ್ಲ.

ಮನೆ ತಲುಪಿದ ಅನಂತರವೂ ಗುಲಚ್‌ನ ಮನಸ್ಸಿನಿಂದ ವಿಷಾದದ ಮೋಡ ಚದುರಲಿಲ್ಲ.

"ಎಲ್ಲರೂ ಕ್ಷೇಮವೇ?" - ಕಪಾಹಿ ಕೇಳಿದಳು.

"ಹೂಂ."

"ತಾಯಿ ಆರೋಗ್ಯವಾಗಿದ್ದರೆ ತಾನೇ?"

"ಹೂಂ."

"ಸಫಿಯತ್ ಮನೆಯವರು?"

"ಯಾರೂ ಸಾಯಲಿಲ್ಲ, ಸುಮ್ಮನಿರು."

## ಇಪ್ಪತ್ತಾರು

ಆ ರಾತ್ರಿ ಗುಲಚ್‌ನಿಗೆ ಚೆನ್ನಾಗಿ ನಿದ್ರೆ ಬರಲಿಲ್ಲ. ಬಹಳ ಸೆಕೆ ಇತ್ತು. ಇಡೀ ದಿನ ಬಿಸಿಲಿನಲ್ಲೇ ಸುತ್ತಾಡಿದ್ದ. ಒಂದೆರಡು ಮನೆಗಳಲ್ಲಿ ಟೀ-ಗೀ ಕುಡಿದಿದ್ದ. ಆದರೆ ಅನೇಕ ಚಿಂತೆಗಳ ಕಾರಣದಿಂದ ಆತನಿಗೆ ನಿದ್ರೆ ಬರಲಿಲ್ಲ.

ಕೋಳಿ ಕೂಗಿದ ಕೂಡಲೇ ಹಾಸಿಗೆಯಿಂದ ಎದ್ದ.

ಆಗ ಪೂರ್ವದ ದಿಗಂತದಲ್ಲಿ ಮಂದಮಂದ ಪ್ರಕಾಶ ಕಾಣಿಸುತ್ತಿತ್ತು. ಮನೆಯೊಳಗಡೆ ಸಹ ಅಲ್ಪಸ್ವಲ್ಪ ಬೆಳಕು ಕಾಣಿಸಿತು. ಶುಕ್ರಗ್ರಹದ ಪ್ರಕಾಶ ಇನ್ನೂ ಕಡಮೆಯಾಗಿರಲಿಲ್ಲ. ಆದರ ಬೆಳಕು ಸ್ವಲ್ಪ ಕೆಂಬಣ್ಣದಿಂದ ಕೂಡಿತ್ತು. ಪಶ್ಚಿಮದ ಆಕಾಶ ಆ ಸಮಯದಲ್ಲಿ ಹೊಗೆ ಕವಿದಂತೆ ಕತ್ತಲಿನಿಂದ ಕೂಡಿತ್ತು.

ಸದ್ದಾಗದಂತೆ ಬಾಗಿಲು ತೆಗೆದು ಆತ ಹೊರಗಡೆ ಬಂದ. ನದಿಯ ಕಡೆಯಿಂದ ತಣ್ಣನೆಯ ಗಾಳಿ ಬೀಸುತ್ತಿತ್ತು. ಗಾಳಿಯಲ್ಲಿ ಶೈತ್ಯಾಂಶವಿತ್ತು. ಶರೀರವನ್ನು ಸಹ ತಣ್ಣಗೆ ಮಾಡುತ್ತಿತ್ತು.

ಅಂಗಳ ಸ್ವಲ್ಪ ತೇವದಿಂದ ಕೂಡಿತ್ತು. ಧೂಳಿನಿಂದ ತುಂಬಿತ್ತು. ಚೈತ್ರ ಮಾಸದ ಕೊನೆಯ ದಿನಗಳ ರಾತ್ರಿ. ನಸುಕಾಗಿ ಮಂಜು ಕವಿದಿತ್ತು. ಅಂಗಳಕ್ಕೆ ಕಾಲಿಟ್ಟ ಕೂಡಲೇ ಗುಲಚ್ ಮನಸ್ಸಿಗೆ ಶಾಂತಿ ದೊರಕಿತು. ಗದ್ದೆ ಕೆಲಸದ ಕಾಲದಲ್ಲಿ ಆತ ಇದೇ ಹೊತ್ತಿಗೆ ಎದ್ದು ಉಳುಮೆ ಮಾಡಲು ಹೋಗುತ್ತಿದ್ದ. ಆಗ ಆರಾಮವಾಗಿರಲೂ ಬಿಡುವಿಲ್ಲ. ನೋಡೋದಕ್ಕೂ ಬಿಡುವಿಲ್ಲ. ತರಾತುರಿಯಲ್ಲಿ ನೇಗಿಲು ತೆಗೆದುಕೊಂಡು ಎತ್ತುಗಳನ್ನು ಹೊಡೆದುಕೊಂಡು ಗದ್ದೆಗೆ ಓಡಬೇಕಾಗುತ್ತಿತ್ತು. ಈಗ ಗದ್ದೆಯ ಕೆಲಸಕ್ಕೆ ಹೋಗೋ ಅಗತ್ಯವಿಲ್ಲ. ಬಾನು ಮತ್ತು ಬುವಿಯನ್ನು ನೋಡಲು ಈಗ ಆತನಿಗೆ ಅವಕಾಶ ಸಿಕ್ಕಿದೆ.

ಆಗ ಯಾರೂ ಎದ್ದಿರಲಿಲ್ಲ. ಕೋಳಿ ಸಹ ಕೂಗಿ ಅನಂತರ ನಿದ್ದೆ ಮಾಡುತ್ತಿತ್ತು. ಸೂರ್ಯನ ಪ್ರಕಾಶವಿಲ್ಲ. ನಕ್ಷತ್ರಗಳ ಬೆಳಕು ಸಹ ಇಲ್ಲ. ಮಬ್ಬು ಮಬ್ಬಾದ ನೀಲಾಕಾಶ ತನ್ನ ಪ್ರಕಾಶವನ್ನು ಸುತ್ತಲೂ ಬೀರಿತ್ತು. ಬಿಳಿ-ನೀಲಿ-ಮಬ್ಬು-ಹಳದಿ. ಇದು ಬಾನಿನ ಸಹಜ ಬಣ್ಣ. ಬುವಿ ಹಾಗೂ ಮಣ್ಣಿಗೆ ತನ್ನದೇ ಆದ ಪ್ರತ್ಯೇಕ ಬಣ್ಣವಿದೆ. ನಿರ್ಮಲಚಿತ್ತನಾಗಿ ಆನಂದ ಹಾಗೂ ವಿಸ್ಮಯದಿಂದ ಆತ ಸುತ್ತಲೂ ನೋಡಿದ. ಬುವಿ ಕಿರು ಆಕಾರ ಹೊಂದಿ ಆತನನ್ನು ಸಮೀಪಿಸುತ್ತಿತ್ತು. ಆತನ ಮನಸ್ಸು ಸ್ವಚ್ಛವಾಯಿತು. ತನಗಾದ ಆನಂದಾನುಭೂತಿಯನ್ನು ವಿಪುಲವಾದ ವಿವರಣೆಯಿಂದ ಬೇರೆಯವರಿಗೂ ಮನದಟ್ಟಾಗುವಂತೆ ಹೇಳಬೇಕೆನಿಸಿತು.

ಆತ ಸುತ್ತಲೂ ನೋಡಿದ. ಯಾರೂ ಇಲ್ಲ.

ಅಂಗಳದ ಒಂದು ಕಡೆ ಎಮ್ಮೆ ಕಟ್ಟಿವೆ. ಅವು ನಿದ್ರಿಸುತ್ತಿವೆ. ನಿದ್ರಿಸುತ್ತಿದ್ದ ಒಂದು ಎಮ್ಮೆಯ ಹತ್ತಿರ ಹೋಗಿ ಎಬ್ಬಿಸಿ ಅದರ ಮೈ ಸವರಿದ. ಎಮ್ಮೆ ಒಮ್ಮೆ ಕಣ್ತೆರೆದು ಗುಲಚ್‌ನನ್ನು ನೋಡಿ ಮತ್ತೆ ಕಣ್ಣು ಮುಚ್ಚಿಕೊಂಡು ನಿದ್ದೆ ಮಾಡತೊಡಗಿತು. ಆತ ದನದ ಕೊಟ್ಟಿಗೆ ಹತ್ತಿರ ಬಂದ. ಎಲ್ಲ ಹಸುಗಳು ಮತ್ತು ಎತ್ತುಗಳು ಕತ್ತನ್ನು ತಮ್ಮ ದೇಹದ ಒಂದು ಬದಿಯಲ್ಲಿರಿಸಿಕೊಂಡು ನಿದ್ರಿಸುತ್ತಿದ್ದುವು. ಆತ ಕೆಂಬಣ್ಣದ ಕರುವಿನ ಮೈದಡವಿ ದೂರ ಸರಿದ.

ಆತ ಸುತ್ತ ನೋಡಿದ. ಪೂರ್ವ ದಿಗಂತದಲ್ಲಿ ನಿಧಾನವಾಗಿ ಮಬ್ಬುಬೆಳಕು ಮೂಡುತ್ತಿತ್ತು. ಶುಕ್ರಗ್ರಹದ ಪ್ರಕಾಶ ಮಂದವಾಗುತ್ತಿತ್ತು. ಗಾಳಿ ಎಲ್ಲಿಂದಲೋ ಬೆಳಕನ್ನು ಸುತ್ತಲೂ ಬಿತ್ತರಿಸುವಂತಿತ್ತು.

ಗುಲಚ್‌ನ ಎದುರುಗಡೆಯೇ ಸೂರ್ಯಕಾಂತಿ ಹೂವಿನ ಗಿಡವಿತ್ತು. ಆತ ಸ್ವಲ್ಪ ಅದರ ಹತ್ತಿರಕ್ಕೆ ಹೋದ. ಸ್ವಲ್ಪ ಹೊತ್ತು ಅದರ ಒಂದು ಮೊಗ್ಗನ್ನು ಗಮನಿಸಿದ. ಆ ಸೂರ್ಯಕಾಂತಿ ಹೂವಿನ ಗಿಡ ನೆಟ್ಟಿದ್ದು ಕಳೆದ ವರ್ಷ. ಈಗ ಅದು ಆತನ ಉದ್ದ ಬೆಳೆದಿದೆ. ಆತ ನೋಡುತ್ತಿದ್ದಂತೆಯೇ ಸೂರ್ಯಕಾಂತಿ ಹೂವಿನ ಒಂದು ಮೊಗ್ಗು ಇದ್ದಕ್ಕಿದ್ದಂತೆ ಅರಳಿತು. ಇದು ಅಕಸ್ಮಿತವಾಗಿತ್ತು. ಮೊಗ್ಗು ಹೂವಾಗಿ ಪರಿವರ್ತಿತವಾಯಿತು.

ಆತ ಎಂದೂ ಹೂವು ಅರಳುವುದನ್ನು ನೋಡಿರಲಿಲ್ಲ. ಅರಳಿದ್ದ ಹೂವನ್ನು ಮಾತ್ರ ನೋಡಿದ್ದ.

ಹೂವು ಇದೇ ರೀತಿ ಅರಳುವುದು ಎಂದು ತನ್ನಷ್ಟಕ್ಕೆ ತಾನೇ ಅಂದುಕೊಂಡ.

ತನ್ನ ಕಣ್ಮುಂದೆ ಅರಳಿದ ಹೂವನ್ನು ನೋಡಿ ಆತನ ಮನಸ್ಸಿನಲ್ಲಿ ಏನೋ ಹೊಸ ಭಾವ

ಮೂಡಿತು. ತರಾಳನ್ನು ಕರೆದು ಹೂವನ್ನು ತೋರಿಸಿದರೆ ಆಕೆಗೆ ಆನಂದವಾಗುತ್ತೆ ಎಂದು ಯೋಚಿಸಿದ.

ಒಂದು ಕ್ಷಣದ ಮಟ್ಟಿಗೆ ಹೂವಿನ ಕಡೆ ದೃಷ್ಟಿ ಹಾಯಿಸಿ ಆತ ಮನೆಯ ಬಾಗಿಲ ಬಳಿ ಬಂದ.

ಮತ್ತೆ ಆತ ಆಕಾಶದ ಕಡೆ ನೋಡಿದ. ಪೂರ್ವ ದಿಗಂತದ ಬಿಳಿಯ ಮೋಡಗಳಲ್ಲಿ ಹಿರಣ್ಯಗರ್ಭದ ಸಿಂಧೂರದ ರೇಖೆಗಳು ಮೂಡಿದ್ದುವು. ಶಾಂತ, ಶುಭ್ರವಾದ ಪ್ರಕಾಶ ಪೃಥ್ವಿಯ ಮೇಲೆ ಪಸರಿಸಿತ್ತು.

ಬಾನು ಇಷ್ಟೊಂದು ಸುಂದರ!

ಬುವಿ ಇಷ್ಟೊಂದು ಸುಂದರ!

ತರಾಳನ್ನು ಎಬ್ಬಿಸಲೇ?

ಉತ್ಸಾಹದಿಂದ ಕುಣಿದಾಡುತ್ತಾ ಆತ ಮನೆಯೊಳಗಡೆ ಪ್ರವೇಶಿಸಿ ತರಾಳ ಕೊಠಡಿಗೆ ಹೋದ. ಮಧ್ಯದ ಕೊಠಡಿಯಲ್ಲಿ ಮಲಗಿದ್ದ ಕಪಾಹಿ ಇನ್ನೂ ಗಾಢನಿದ್ರೆಯಲ್ಲಿದ್ದಳು. ಆಕೆಯ ಹಾಸಿಗೆಯ ಹತ್ತಿರವೇ ಹಾದು ತರಾ ಮಲಗಿದ್ದ ಕೊಠಡಿಗೆ ಹೋದ. ಆಕೆ ಎಚ್ಚರವಾಗಿರಲಿಲ್ಲ. ಗೊರಕೆ ಹೊಡೆಯುತ್ತಾ ಮಲಗಿದ್ದಳು. ಬೆಳಗಿನ ಸುಖನಿದ್ರೆ.

ತರಾಳ ಹಾಸಿಗೆಯ ಬಳಿ ಹೋಗಿ ಆತ ಇದ್ದಕ್ಕಿದ್ದಂತೆ ನಿಂತ.

ಅರ್ಧಗೋಡೆಯ ಮೇಲ್ಭಾಗದಿಂದ ಮತ್ತು ಸಣ್ಣ ಕಿಟಕಿಯ ಮೂಲಕ ಬೆಳಗಿನ ಜಾವದ ಹೊಂಬಣ್ಣದ ಪ್ರಕಾಶ ಒಳಗಡೆ ನುಸುಳಿ ಬೀಳುತ್ತಿತ್ತು. ತರಾಳ ಹಾಸಿಗೆಯ ಮೇಲೆ ಮತ್ತು ಆಕೆಯ ಶರೀರದ ಮೇಲೆ ಆ ಪ್ರಕಾಶ ಹರಡಿತ್ತು.

ಗುಲಬ್ ಮೌನವಾಗಿ ತರಾಳ ಕಡೆ ನೋಡಿದ.

ತರಾ ನಿದ್ದೆ ಮಾಡುತ್ತಿದ್ದಳು. ಮೇಲ್ಮುಖ ಮಾಡಿಕೊಂಡು ಮಲಗಿದ್ದಳು. ಸೆಕೆಯ ಕಾರಣದಿಂದ ಬಹುಶಃ ಆಕೆ ಕುಪ್ಪಸ ಕಳಚಿಬಿಟ್ಟಿದ್ದಳು. ಹಾಲಿನಂತೆ ಬೆಳ್ಳನೆಯ ಆಕೆಯ ವಕ್ಷಸ್ಥಲ ಎದ್ದು ಕಾಣುತ್ತಿತ್ತು. ಆನೆಯ ದಂತದಂತೆ ಬೆಳ್ಳಗೆ ಬಿರಿದು ಉಬ್ಬಿದ್ದ ಸ್ತನಗಳೆರಡೂ ಉಸಿರಾಟದೊಡನೆ ಉಬ್ಬುತ್ತಿದ್ದುವು ಮತ್ತೆ ಕುಗ್ಗುತ್ತಿದ್ದುವು. ಆಕೆಯ ಸುಪುಷ್ಟ ಬಾಹುಗಳೆರಡೂ ಹಾಸಿಗೆಯ ಮೇಲೆ ಶಿಥಿಲವಾಗಿ ಬಿದ್ದಿದ್ದುವು. ಒಂದು ಕೈ ಹಾಸಿಗೆಯಿಂದ ಕೆಳಗಡೆ ಚಾಚಿತ್ತು.

ತರಾಳ ಲಂಗ ಮಂಡಿಯ ಮೇಲ್ಭಾಗಕ್ಕೆ ಸರಿದಿದ್ದ ಕಾರಣ ಆಕೆಯ ಬೆಳ್ಳನೆಯ ತೊಡೆಗಳೆರಡೂ ಗೋಚರಿಸುತ್ತಿದ್ದುವು.

ಗುಲಬ್ ವಿಸ್ಮಿತನಾದ.

ಆತನ ಎದೆ ಕಂಪಿಸತೊಡಗಿತು. ಇಷ್ಟೊಂದು ಪರಿಪೂರ್ಣ ರೂಪು, ಇಷ್ಟೊಂದು ಉನ್ಮುಕ್ತ ಯೌವನ, ದೇಹದ ಇಷ್ಟೊಂದು ಪರಿಪೂರ್ಣ ಬೆಳವಣಿಗೆ- ಇದನ್ನು ಆತ ತನ್ನ ಜೀವನದಲ್ಲಿ ಎಂದೂ ನೋಡಿರಲಿಲ್ಲ. ಹಾಲಿನಂತೆ ಬೆಳ್ಳನೆಯ ತರಾಳ ಇಡೀ ದೇಹದ ಪ್ರತಿಯೊಂದು ಅಣುವಿನಲ್ಲೂ ಸಹಸ್ರಾರು ಕನಸುಗಳ ಉನ್ಮಾದವಿತ್ತು. ಸಹಸ್ರಾರು ಕಾಮನೆಗಳ ಆಹ್ವಾನವಿತ್ತು.

ಹೊರಗಡೆ ಪೃಥ್ವಿಯ ಮೇಲೆ ಪ್ರಕಾಶ ನಿರಂತರವಾಗಿ ಹೆಚ್ಚುತ್ತಾ ಇತ್ತು. ತರಾಳ ಕಣ್ಣುಗಳ

ಮೇಲೂ ಮೆಲ್ಲನೆ ಬಂದು ಕುಳಿತಿರುವಂತಿತ್ತು. ತರಾಳ ಸವಿದುಟಿಗಳಂಚಿನಲ್ಲಿ ಮಧುರ ಮುಗುಳ್ನಗೆ ಮಿಂಚಿದಂತೆ ಭಾಸವಾಯಿತು. ಕಮಲದ ಮೊಗ್ಗುಗಳೆರಡರ ಆಕಾಶೋನ್ಮುಖ ವಂದನೆಯಲ್ಲಿ ಸಹಸ್ರಾರು ರಾತ್ರಿಗಳ ಚೇತನದಿಂದ ವಂಚಿತ ಉನ್ಮಾದ ಭಾಸವಾಗುತ್ತಿತ್ತು.

ಗುಲಬ್ ಸ್ವಲ್ಪ ತರಾಳ ಸಮೀಪಕ್ಕೆ ಹೋದ. ಆತ ತರಾಳ ಸಂಪೂರ್ಣ ಶರೀರದ ಮೇಲೆ ಮತ್ತೊಮ್ಮೆ ದೃಷ್ಟಿ ಹಾಯಿಸಿದ. ಹಾಸಿಗೆಯಿಂದ ಕೆಳಗೆ ಚಾಚಿದ್ದ ಕೈಯನ್ನು ಮೆಲ್ಲಗೆ ಎತ್ತಿ ಆಕೆಯ ವಕ್ಷಸ್ಥಲದ ಮೇಲಿಡಲು ಬಯಲಿದ.

ತರಾ ಎಚ್ಚರಗೊಂಡಳು.

ಆಕೆ ನಿಧಾನವಾಗಿ ಕಣ್ತೆರೆದಳು.

ಗುಲಬ್‌ಗೆ ಗಾಬರಿಯಾಯಿತು. ಸ್ವಲ್ಪ ಸಂಕೋಚವೂ ಆಯಿತು. ಆದರೆ ಗೊರಕೆ ಹೊಡೆಯುತ್ತಾ ಮಲಗಿದ್ದ ಕಪಾಹಿ ನಿದ್ದೆ ಆತನಿಗೆ ತುಸು ಸಾಹಸ ನೀಡಿತು.

ಲಂಗವನ್ನು ಮಂಡಿಯ ಕೆಳಭಾಗದವರೆಗೂ ಎಳೆದುಕೊಂಡು ತರಾ ಹಾಸಿಗೆಯ ಮೇಲೆಯೇ ಸಹಜವಾಗಿ ಕುಳಿತುಕೊಂಡಳು. ಆಕೆಯ ಕಣ್ಣುಗಳಲ್ಲಿ ನಾಚಿಕೆಯ ವಿಜಯ ಸೂಸಿತು.

ಶಾಂತ ಭಾವ ಹಾಗೂ ಸರಳ ದೃಷ್ಟಿಯಿಂದ ಗುಲಬ್‌ನ ಕಡೆ ನೋಡಿ ತಲೆದಿಂಬಿನ ಕೆಳಗಡೆ ಇಟ್ಟಿದ್ದ ಕುಪ್ಪಸವನ್ನು ತೆಗೆದು ತೊಟ್ಟುಕೊಂಡಳು.

ಗುಲಬ್ ಮೌನವಾಗಿ ನಿಂತಿದ್ದ.

"ಚಿಕ್ಕಮ್ಮ ಎಚ್ಚರವಾಗಿದ್ದಾಳೆಯೋ ಅಥವಾ ಇಲ್ಲವೋ" ಎಂಬುದನ್ನು ಆಕೆ ಕಣ್ಸನ್ನೆಯಿಂದಲೇ ಕೇಳಿದಳು.

ಗುಲಬ್ ತಲೆ ಅಲ್ಲಾಡಿಸಿದ - "ಎಚ್ಚರವಾಗಿಲ್ಲ."

ಹಚ್ಚಡವನ್ನು ಹೊದ್ದುಕೊಂಡೇ ಸದ್ದಾಗದಂತೆ ತರಾ ಹಾಸಿಗೆಯಿಂದ ಎದ್ದಳು.

ಕಣ್ಸನ್ನೆಯಿಂದಲೇ ಗುಲಬ್‌ನನ್ನು ಹೊರಗೆ ಹೋಗಲು ತಿಳಿಸಿದಳು.

ಗುಲಬ್ ನಿಧಾನವಾಗಿ ಹೊರಗಡೆ ಬಂದ.

ಅವನನ್ನು ಹಿಂಬಾಲಿಸಿ ತರಾ ಸಹ ಬಂದಳು.

ಇಬ್ಬರೂ ಕಪಾಹಿಯ ಕಡೆ ನೋಡಿದರು. ಅವಳು ಇನ್ನೂ ಗಾಢ ನಿದ್ರೆಯಲ್ಲಿದ್ದಳು.

ಅಂಗಳದ ಮೂಲೆಯಲ್ಲಿದ್ದ ಸೂರ್ಯಕಾಂತಿ ಹೂ ಗಿಡದ ಹತ್ತಿರ ಗುಲಬ್ ಬಂದು ನಿಂತ.

ತರಾ ಸಹ ಆತನ ಬಲಗಡೆ ಬಂದು ನಿಂತಳು.

ಆಗ ಪೂರ್ವ ದಿಗಂತದಲ್ಲಿ ಬೆಳಗಿನ ಜಾವದ ಸ್ಪಷ್ಟ ಸೂಚನೆ ಕಾಣತೊಡಗಿತು. ಗುಲಬ್ ಆಕಾಶದ ಕಡೆ ನೋಡಿದ. ಆಗತಾನೇ ಪಸರಿಸುತ್ತಿದ್ದ ಪ್ರಕಾಶದಲ್ಲಿ ಬುವಿ ಸ್ಪಷ್ಟವಾಗಿ ಗೋಚರಿಸುತ್ತಿತ್ತು. ತಲೆಯೆತ್ತಿ ಗುಲಬ್‌ನ ಮುಖವನ್ನು ದೃಷ್ಟಿಸಿ ನೋಡುತ್ತಾ ಆಕೆ ಪಿಸುಗುಟ್ಟುತ್ತಾ ಕೇಳಿದಳು - "ಏನು ವಿಷಯ?"

ಏನೂ ಹೇಳಿದೆ ಗುಲಬ್ ಸೂರ್ಯಕಾಂತಿ ಹೂವಿನ ಕಡೆ ಕೈ ತೋರಿಸಿದ.

ಅರಳಿರುವ ಹೂವುಗಳನ್ನು ನೋಡಿ ತರಾಳ ಮುಖ ಸಹ ಅರಳಿತು; ಹೂವುಗಳ ಮೇಲೆ ಹೊಂಬಿಸಿಲು ಪಸರಿಸಿತ್ತು. ಗಾಳಿ ತುಸು ಬೆಚ್ಚಗಿತ್ತು.

"ನನ್ನ ಕೊಠಡಿಗೆ ಬರಲು ಕಾರಣ?" - ತರಾ ಪಿಸುಮಾತಿನಲ್ಲೇ ಕೇಳಿದಳು.

ಪಿಸುಮಾತಿನಲ್ಲೇ ಆತ ಉತ್ತರಿಸಿದ :" ನಾನು ನೋಡುತ್ತಿದ್ದಂತೆಯೇ ಈ ಹೂವು

ಅರಳಿತು. ಇದನ್ನು ನಿನಗೆ ತೋರಿಸುವ ಸಲುವಾಗಿ ಕರೆಯಲು ಬಂದಿದ್ದೆ."

ತರಾ ಸುಮನೋಹರ ನಗೆ ಬೀರುತ್ತಾ ಹೇಳಿದಳು - "ಅಷ್ಟೇನಾ! ಮತ್ತೇನೋ ವಿಷಯ ಇರಬೇಕು ಅಂದುಕೊಂಡಿದ್ದೆ."

ಗುಲಬ್ ಒಮ್ಮೆ ತರಾ ಕಡೆ ದೃಷ್ಟಿ ಬೀರಿದ. ನಾಚಿಕೆ ಹಾಗೂ ಸಂತೋಷದಿಂದ ಆತನ ಮುಖ ಕೆಂಪೇರಿತ್ತು.

ಅನಂತರ ಆಕೆಯ ತೋಳನ್ನು ಹಿಡಿದು ಅಲುಗಾಡಿಸಿ ಹೇಳಿದ - "ಇಷ್ಟೊಂದು ವಯಸ್ಸಾಗಿದೆ. ಮಲಗೋದು ಹೇಗೆ ಅನ್ನೋದೂ ಗೊತ್ತಿಲ್ಲ."

ನಾಚಿಕೆಯಿಂದ ಆಕೆಯ ಮುಖ ಕೆಂಪೇರಿತು. ಅದೇ ಧಾಟಿಯಲ್ಲಿ ಆಕೆ ಉತ್ತರಿಸಿದಳು - "ಈ ಮನೆಯಲ್ಲಿ ಬೇರೆ ಯಾರು ತಾನೇ ಇದ್ದಾರೆ? ಇರೋರು ನೀವೊಬ್ಬರೇ ಅಲ್ವೇ?"

ಗುಲಬ್ ಮತ್ತೇನೂ ಹೇಳಲಾರದವನಾದ.

"ನಿಮ್ಮ ಚಿಕ್ಕಮ್ಮ ಎದ್ದಿರಬಹುದು - ಹೋಗು. "

ಈ ಸಾರಿ ತರಾ ತುಸು ಗಟ್ಟಿಯಾಗಿ ಹೇಳಿದಳು - "ಇಷ್ಟು ಹೊತ್ತಿನವರೆಗೆ ಎಲ್ಲರೂ ಮಲಗಿರಬೇಕೇ."

ಗುಲಬ್ ಆನಂದಪರವಶನಾಗಿ ಚಂಚಲ ಮನಸ್ಸಿನಿಂದ ಕಪಾಹಿಯ ಕೋಣೆಗೆ ಹೋದ.

ಅಷ್ಟು ಹೊತ್ತಿಗೆ ಚೆನ್ನಾಗಿ ಬೆಳಕಾಗಿತ್ತು. ಎಲ್ಲೆಡೆಯೂ ಪ್ರಕಾಶ ಪಸರಿಸಿತ್ತು. ಕಪಾಹಿ ಮಾತ್ರ ನಿದ್ದೆ ಮಾಡುತ್ತಲೇ ಇದ್ದಳು. ಬಹುಶಃ ಸೆಕೆಯ ಕಾರಣದಿಂದಾಗಿ ಆಕೆಗೂ ರಾತ್ರಿ ನಿದ್ದೆ ಹತ್ತಿರಲಿಲ್ಲ.

ಆತ ಕಪಾಹಿ ಬಳಿಗೆ ಹೋದ.

ಕಪಾಹಿ ನಿದ್ರಿಸುತ್ತಿದ್ದಳು. ಆಕೆಯ ಒಂದು ತುಟಿ ಸ್ವಲ್ಪ ಓರೆಯಾಗಿ ಜೋತು ಬಿದ್ದಂತಿತ್ತು. ಆಕೆಯ ದೇಹದ ಮೇಲಿನಿಂದಲೂ ಬಟ್ಟೆ ಸರಿದಿತ್ತು. ಆಕೆಯ ದೇಹ ಸಹ ತರಾಳ ದೇಹದ ಬಣ್ಣದಂತೆ ಕೆಂಪು ಮಿಶ್ರಿತ ಬಿಳಿಯ ಬಣ್ಣದಿಂದ ಕೂಡಿತ್ತು. ಆದರೆ ಅವಳ ದೇಹ ತರಾಳ ದೇಹದಂತೆ ನುಣುಪಾಗಿರಲಿಲ್ಲ; ಮೈದುಂಬಿಕೊಂಡಿರಲಿಲ್ಲ. ಆಕೆಯ ದೇಹ ಮತ್ತು ಕಪೋಲದ ಮೇಲೆ ಅಸ್ಪಷ್ಟ ರೇಖೆಗಳು ಮೂಡಿದ್ದುವು. ಆಕೆಯ ಮುಖದಲ್ಲಿ ವಯೋಧರ್ಮದ ಪ್ರಭಾವ ಎದ್ದುಕಾಣುತ್ತಿತ್ತು.

ಆಕೆಯ ಸ್ತನಗಳೂ ಸಹ ತುಂಬಿಕೊಂಡು ಗಾತ್ರವಾಗಿದ್ದುವು. ಆದರೆ ಸ್ವಲ್ಪ ಉದ್ದನಾಗಿ ಜೋತುಬಿದ್ದಿದ್ದುವು. ಅವು ಯೌವನದ ಸೌಂದರ್ಯವನ್ನು ಸಂಪೂರ್ಣವಾಗಿ ಸೆರೆಹಿಡಿಯಲಾರದಾಗಿದ್ದುವು. ತೋಳನ್ನು ಹಿಡಿದು ಅಲ್ಲಾಡಿಸಿ ಗುಲಬ್ ಆಕೆಯನ್ನು ಎಬ್ಬಿಸಿದ.

"ಹೇ, ಎಷ್ಟು ಹೊತ್ತು ನಿದ್ದೆ ಮಾಡುತ್ತೀಯೇ? ಏಳು, ಮಧ್ಯಾಹ್ನವಾಯಿತು."

ಕಪಾಹಿ ಕಕ್ಕಾಬಿಕ್ಕಿಯಾಗಿ ಎದ್ದಳು. ಆಕೆ ಸಾಧಾರಣವಾಗಿ ಇಷ್ಟು ಹೊತ್ತಿನ ತನಕ ಮಲಗಿಕೊಳ್ಳುತ್ತಿರಲಿಲ್ಲ.

ಕಣ್ಣುಗಳನ್ನು ಉಜ್ಜಿಕೊಳ್ಳುತ್ತಾ ಹಾಸಿಗೆಯ ಮೇಲಿನಿಂದಲೇ ಕಪಾಹಿ ಕೇಳಿದಳು - "ತರಾ ಪಾರಿವಾಳದ ಗೂಡನ್ನು ತೆರೆದಿದ್ದಾಳೆಯೇ?"

ಆದರೆ ಆಗ ತರಾ ಪಾತ್ರೆಗಳನ್ನು ತೆಗೆದುಕೊಂಡು ಕೊಳದ ಬಳಿ ತಲುಪಿದ್ದಳು. ಆಕೆಗೆ ಚಿಕ್ಕಮ್ಮ ಹೇಳಿದ್ದು ಕೇಳಿಸಲಿಲ್ಲ. ಕೇಳಿಸಿಕೊಂಡರೂ ಕೇಳಿಸಲಿಲ್ಲವೇನೋ ಎನ್ನುವಂತೆ

ನಟಿಸಿದಳು.

ಬೆಳಗಿನ ಜಾವದ ಪ್ರಶಾಂತ ವಾತಾವರಣ. ಗುಲಬ್‌ನ ಮನಸ್ಸು ಸಹ ಸಂತೋಷದಿಂದ ತುಂಬಿತುಳುಕಾಡುತ್ತಿತ್ತು. ಕಳೆದ ದಿನಗಳಲ್ಲಿ ಡಾಲಿಮ್ ಹಳ್ಳಿಯಲ್ಲಿ ಸಂಭವಿಸಿದ ವಿಷಾದ ಸಹ ಈಗ ಮಾಯವಾಗಿತ್ತು. ತುಸು ಅಸ್ಪಷ್ಟ ಆಶೆ ಮತ್ತು ಸ್ಪಷ್ಟ ಆನಂದ ಗುಲಬ್‌ನನ್ನು ಪ್ರಫುಲ್ಲಿತನನ್ನಾಗಿ ಮಾಡಿತು. ಆತ ದನದ ಕೊಟ್ಟಿಗೆ ಬಾಗಿಲು ತೆರೆದ. ದನಕರುಗಳನ್ನು ಹೊರಗೆ ಬಂದುವು. ಹಾಲು ಕರೆಯುವ ಹಸುವನ್ನು ಮಾತ್ರ ಗೂಟಕ್ಕೆ ಕಟ್ಟಿಹಾಕಿ ಉಳಿದವುಗಳನ್ನು ಹೊರಗೆ ಅಟ್ಟಿದ. ಬಾಲವನ್ನು ಅಲ್ಲಾಡಿಸಿಕೊಂಡು ಓಡುತ್ತಾ ಕರುಗಳು ನದಿಯ ಕಡೆ ಹೊರಟವು.

ಅಂಗಳದಲ್ಲಿ ಆನಂದದ ವಾತಾವರಣ ಮೂಡಿತ್ತು.

ಗುಲಬ್ ಪ್ರಸನ್ನನಾಗಿರುವುದನ್ನು ಕಪಾಹಿ ಗಮನಿಸಿದಳು. ಆದರೆ ಅದಕ್ಕೆ ಕಾರಣ ಗೊತ್ತಾಗಲಿಲ್ಲ. ಆದಾಗ್ಯೂ ಗುಲಬ್ ಪ್ರಸನ್ನನಾಗಿರುವುದನ್ನು ಕಂಡು ಆಕೆಗೂ ತುಸು ಆನಂದವಾಯಿತು. ಈ ಮನುಷ್ಯ ಬೆಳಗಿನ ಜಾವ ಮಬ್ಬುಗತ್ತಲೆಯಿಂದ ರಾತ್ರಿ ಗೂಬೆ ಅರಚುವವರೆಗೂ ದುಡಿಯುತ್ತಾನೆ. ನಗೋದು, ಮಾತುಕತೆ ಆಡೋದು - ಇದೆಲ್ಲಾ ಈತನಿಗೆ ಗೊತ್ತೇ ಇಲ್ಲ. ಈವೊತ್ತೇ ಆತನ ಮನಸ್ಸು ತುಸು ಪ್ರಸನ್ನವಾಗಿದೆ ಎಂದು ಅಂದುಕೊಂಡಳು. ತರಾಳಳಲ್ಲಿನ ಯಾವುದೇ ರೀತಿಯ ಬಾಹ್ಯ ಪರಿವರ್ತನೆಯ ಸುಳಿವು ಕಪಾಹಿಗೆ ಕಾಣಿಸಲಿಲ್ಲ. ಆಕೆಯ ವರ್ತನೆಯೂ ಗುಲಬ್‌ನಂತೆಯೇ, ತಲೆ ಬಗ್ಗಿಸಿಕೊಂಡು ಕೆಲಸ ಮಾಡುವುದು ಮಾತ್ರ ಆಕೆಗೆ ಗೊತ್ತು. ಮುಖದ ಮೇಲೆ ನಗೆಯ ಸುಳಿವಿಲ್ಲ. ಇವಳೆಂಥ ತರುಣಿ ಅನ್ನೋದು ಗೊತ್ತಾಗೋದೇ ಇಲ್ಲ. ತರಾಳ ಮನಸ್ಥಿತಿಯನ್ನು ಅರಿಯಲು ಕಪಾಹಿ ಒಮ್ಮೊಮ್ಮೆಯಾದರೂ ಪ್ರಯತ್ನಿಸುವುದಿಲ್ಲ. ಅದರ ಅಗತ್ಯವೂ ಆಕೆಗೆ ಕಂಡು ಬರಲಿಲ್ಲ. ತರಾಳಿಗೆ ಮದುವೆ ಆಗುವ ವಯಸ್ಸಾಗಿತ್ತು. ಆಕೆಗೆ ಹದಿನೇಳು ವರ್ಷ. ಈಗ ಆಕೆ ಚಿಕ್ಕ ಹುಡುಗಿ ಅಲ್ಲ. ಅವಳನ್ನು ಬಿಟ್ಟರೆ ಕುಟುಂಬದಲ್ಲಿ ಮತ್ತಾರೂ ಇಲ್ಲ. ಆಕೆ ಯಾರೊಡನೆ ತನ್ನ ಮನಸ್ಸಿನ ಅನಿಸಿಕೆಗಳನ್ನು ಹೇಳಿಕೊಳ್ಳಲು ಸಾಧ್ಯ? ಯಾವಾಗಲಾದರೂ ಬೇರೆಯವರ ಮನೆಗೆ ಹೋಗಲು ಅಲ್ಲಿ ಯಾವ ಬಂಧುಗಳ ಮನೆಯೂ ಇಲ್ಲ. ಎಲ್ಲರೂ ಹೊಸದಾಗಿ ಪರಿಚಯವಾಗಿರುವವರೇ. ವಯಸ್ಸಿಗೆ ಬಂದ ಹೆಣ್ಣು ಅನಾವಶ್ಯಕವಾಗಿ ಎಲ್ಲರ ಮನೆಗೂ ಹೋಗುವುದು ಸರಿಯಲ್ಲ. ಜನರು ಏನೇನೋ ಕತೆ ಕಟ್ಟಲು ಸಾಧ್ಯ.

ತರಾಳ ಮದುವೆ ವಿಷಯದ ಬಗ್ಗೆ ಗುಲಬ್ ಸಹ ಏನೂ ಯೋಚಿಸದೆ ಹಾಗೆಯೇ ಇದ್ದಾನೆ. ಆಕೆ ಅವಿವಾಹಿತಳಾಗಿಯೇ ಮನೆಯಲ್ಲೇ ಇದ್ದುಕೊಂಡು ಮುದುಕಿಯಾಗುತ್ತಾಳೆಯೇ? ಸರಿ, ತರಾಳಿಗಾಗಿ ಏನಾದರೊಂದು ವ್ಯವಸ್ಥೆಯ ಆಲೋಚನೆಯಿಲ್ಲದಿದ್ದರೆ ಆತನ ಮುಖದಲ್ಲಿ ಪ್ರಸನ್ನತೆ ಮೂಡುತ್ತಿರಲಿಲ್ಲ. ಇದೇ ರೀತಿ ಇರೋದು ಸರಿಯಲ್ಲ. ಈ ವಿಷಯದ ಬಗ್ಗೆ ಗುಲಬ್‌ನೊಡನೆ ಸಮಾಲೋಚನೆ ನಡೆಸಬೇಕು ಎಂದು ಕಪಾಹಿ ಅಂದುಕೊಂಡಳು.

ಇಂದೇ ಈ ವಿಷಯದ ಬಗ್ಗೆ ಚರ್ಚಿಸಬೇಕು. ಇಂದು ಗುಲಬ್‌ನ ಮನಸ್ಸು ಪ್ರಫುಲ್ಲಿತವಾಗಿದೆ. ಬೇರೆ ದಿನಗಳಲ್ಲಿ ಆತ ಹೀಗಿರುತ್ತಾನೆಯೇ? ಈ ವಿಷಯದ ಬಗ್ಗೆ ಚರ್ಚಿಸಲಿಕ್ಕೆ ಅಂಜಿಕೆಯಾಗುತ್ತದೆ. ಆದರೆ ಈ ಮನುಷ್ಯನಿಗೆ ಬುದ್ಧಿಯಿಲ್ಲ ಅಂತ ಹೇಳೋ ಹಾಗಿಲ್ಲ. ಹಾಗಿಲ್ಲದಿದ್ದರೆ ಆತನ ಅಂತಸ್ತು ಇಂದು ಇಷ್ಟರಮಟ್ಟಿಗಾಗುತ್ತಿರಲಿಲ್ಲ. ಆತ

ಏನೋ ತೀರ್ಮಾನ ತೆಗೆದುಕೊಂಡಿದ್ದಾನೆ. ಎಲ್ಲಾದರೂ ಒಂದು ಒಳ್ಳೆಯ ಮನೆತನಕ್ಕೆ ಕೊಟ್ಟು ತರಾಳ ಮದುವೆ ನೆರವೇರಿಸಿದರೆ ಯಾವ ಚಿಂತೆಯೂ ಇರೋದಿಲ್ಲ.

ಆದರೆ ಅಂದು ಆ ವಿಷಯವನ್ನು ಕುರಿತು ಚರ್ಚಿಸಲು ಸಮಯವೇ ಸಿಗಲಿಲ್ಲ. ತರಾ ಇಡೀ ದಿನ ಮನೆಯಲ್ಲೇ ಇದ್ದಳು. ಆಕೆಯ ಎದುರಿನಲ್ಲಿ ಈ ವಿಷಯದ ಬಗ್ಗೆ ಚರ್ಚಿಸುವುದು ಸರಿಯಲ್ಲ ಅಂದುಕೊಂಡಳು. ಮಧ್ಯಾಹ್ನವಾದ ಮೇಲೆ ಕಪಾಹಿಯೊಡನೆ ಗುಲಚ್ ಲೋಕಾಭಿರಾಮವಾಗಿ ನಾಲ್ಕು ಮಾತಾಡಿದ. 'ಬಿಹು' ದಿನವೂ ಈ ವಿಷಯದ ಬಗ್ಗೆ ಮಾತನಾಡಲಾಗಲಿಲ್ಲ. ಅಂದು ಗುಲಚ್ ವಿವಿಧ ಕಾರ್ಯಗಳಲ್ಲಿ ನಿರತನಾಗಿದ್ದ. ಹೋಗಬೇಕು ಅಂತ ಮನಸ್ಸಿದ್ದರೂ ಆತ ' ಬಿಹು'ನಲ್ಲಿ ಡಾಲಿಮ್‌ಗೆ ಹೋಗಲಿಲ್ಲ. ಸಿಪರಿಯಾ ಸುತ್ತಮುತ್ತ ಅಡ್ಡಾಡಿಕೊಂಡು ಬಂದ. ಕೆಲವರ ಮನೆಗೆ ಹೋಗಿದ್ದ. ನದಿಯ ತೀರದಲ್ಲಿ ಹಾಗೂ ಗದ್ದೆಯಲ್ಲಿ ಒಬ್ಬನೇ ಸುತ್ತಾಡುತ್ತಿದ್ದ.

ಜಲಾವೃತ ಆಕಾಶ. ಡೋಲು ಮತ್ತು ಸನಾದಿ ವಾದ್ಯದ ಸದ್ದನ್ನು ಕೇಳಿ ಘನೀಭೂತ ಮೋಡಗಳು ಧರೆಗಿಳಿದು ಬಂದಿವೆ. ಗಾಳಿಯೊಡನೆ ಬೆರೆತು ಬಂದ ತಾಳೆಹೂವಿನ ಸುವಾಸನೆ ಸೂಸುತ್ತಿತ್ತು. ಧನಶಿರಿಯಲ್ಲಿ ಪ್ರವಾಹ ನರ್ತನಗೈಯುತ್ತಿತ್ತು. ಬೂರಗದ ಕಾಯಿ ಬಿರಿದು ಅರಳೆ ಸುತ್ತಲೂ ಹರಡಿತ್ತು. ಹಾರಾಡುತ್ತಿರುವ ಮೋಡಗಳೊಡನೆ ಹಾರಾಡುತ್ತಿರುವ ಹತ್ತಿ ಸ್ಪರ್ಧಿಸುತ್ತಿರುವಂತಿತ್ತು.

ಒಣ ಮೈದಾನವನ್ನು ಭೇದಿಸಿಕೊಂಡು ಹುಲ್ಲಿನ ಮೊಳಕೆ ಮೂಡಿ ಬಂದಿತ್ತು. ಗಾಳಿಯಲ್ಲಿ ಜೀವಂತ ಬನದ ಸುವಾಸನೆ ಸೂಸುತ್ತಿದೆ. ಬಾನು ಮತ್ತು ಬುವಿಯಲ್ಲಿ ಸಹಸ್ರಾರು ಜೀವನದ ಸಹಸ್ರಾರು ಪ್ರಾಣಧಾರೆ ವ್ಯಾಪಿಸಿದೆ. ವಿಹರಿಸಲಿಚ್ಛಿಸುವ ಗುಲಚ್‌ನ ಮನಸ್ಸನ್ನು ಸಾಂಸಾರಿಕ ಬಂಧನ ಬಂಧಿಸಿಡಲಾರದು. ಮನಸ್ಸಿಗೆ ರೆಕ್ಕೆ ಮೂಡಿದೆ. ರೆಕ್ಕೆಗಳಿಗೆ ಬಣ್ಣದ ಮೆರುಗಿದೆ. ಬಣ್ಣದೊಡನೆ ಸುವಾಸನೆ ಬೆರೆತಿದೆ. ಆ ಸುವಾಸನೆಯಲ್ಲಿ ಜೀವಂತ ಬನದ ಚೇತನ ವಿಹರಿಸುತ್ತಿದೆ.

ಗುಲಚ್‌ನಿಗೆ ಅಲ್ಲಲ್ಲಿ ಸುತ್ತಾಡಬೇಕೆನಿಸಿತ್ತು. ಬಂಧನಮುಕ್ತ ಪ್ರಾಣಪಕ್ಷಿ. ಗೂಡಿನಿಂದ ಹೊರಬರಲು ಬಯಸುತ್ತದೆ. ಘಟ್ಟದಲ್ಲಿದ್ದ ದೋಣಿ ಘಟ್ಟವನ್ನು ಬಿಟ್ಟು ಸಾಗರದ ಮಧ್ಯದಲ್ಲಿರಲು ಬಯಸುತ್ತದೆ. ವೈಶಾಖದ ಬುವಿ ಹಳೆಯದನ್ನು ಮರೆಯಲು ಆಹ್ವಾನಿಸುತ್ತದೆ. ಎಲ್ಲವೂ ಹೊಸದೇ. ಗುಲಚ್‌ನ ಮನಸ್ಸಿನಲ್ಲಿ ನೂತನ ಮಾನವನೊಬ್ಬನು ಎಚ್ಚೆತ್ತಿದ್ದಾನೆ. ಎಳಸಾದ ಹುಲ್ಲಿನ ಚಿಗುರು ಹಸಿರಾಗಿದೆ. ಢೇಕಿಯಾ ತರಕಾರಿಯ ಮೇಲ್ಭಾಗ ಗುಂಗುರಾಗಿ ಸುಂದರವಾಗಿದೆ. ಮನಸ್ಸು ಉಲ್ಲಾಸದಿಂದ ತುಂಬಿ ತುಳುಕಾಡುತ್ತದೆ. ಸಪ್ತ ಡೋಲು ಬಾರಿಸುತ್ತಾ ಕುಣಿಯುವಂತೆ ಗುಲಚ್‌ನಿಗೆ ಭಾಸವಾಗುತ್ತದೆ. ಚಪ್ಪಾಳೆ ಹಾಕುತ್ತಾ ಕಪಾಹಿ, ತರಾ ಮತ್ತು ಆ ಹಳ್ಳಿಯ ಹುಡುಗಿಯರು ಹಾಗೂ ಮಹಿಳೆಯರನ್ನು 'ಬಿಹು' ಕುಣಿತ ಕುಣಿಯುವಂತೆ ಮಾಡುತ್ತಾನೆ. ಆ ಕುಣಿತದಲ್ಲಿ ಕಣಕಾಲುಗಳಿಂದ ಬೆವರು ಹರಿಯುತ್ತದೆ. ಆತನ 'ಪೆಂಪಾ' ವಾದ್ಯದ ಸ್ವರದಿಂದ ತಾಳೆ ಹೂವಿನ ವಕ್ಷ ಮಿಡಿಯುತ್ತದೆ.

ಗುಲಚ್ ಬಿಹು ಕುಣಿತ ಕುಣಿಯಲು ಹೋಗಲಿಲ್ಲ. ಆದರೆ ಆತನ ಮನಸ್ಸಿನಲ್ಲಿ ಬಿಹುವಿನ ಸಡಗರವಿದೆ. ಆತನ ಮನಸ್ಸು ನರ್ತಿಸುತ್ತದೆ.

ಕಲಕಲ ಶಬ್ದ ಮಾಡುತ್ತಾ ಹರಿಯುವ ಧನಶಿರಿಯೊಡನೆ ಆತ ಹೇಳುತ್ತಾನೆ - ''ಸ್ವಲ್ಪ

ನಿಲ್ಲಲಾರೆಯಾ! ದಿನಾಲೂ ಹರಿಯುವುದರಿಂದ ನಿನಗೇನು ಸಿಗುತ್ತೆ? ವೈಶಾಖ ಬಂದಿದೆ. ಬಿಹು ಬಂದಿದೆ. ಸ್ವಲ್ಪ ನಿಂತು ಒಮ್ಮೆ ನರ್ತಿಸಿ ಹೋಗು. ನಿನಗೆ ಹರಿಯುವುದು ಮಾತ್ರ ಗೊತ್ತು. ನಿಂತು ಹೋಗು. ನಿನ್ನನ್ನು ಒಂದು ದಿನವಾದರೂ ನರ್ತನಗೈಯ್ಯುವಂತೆ ಮಾಡಲಾಗಲಿಲ್ಲ. ಈ ವ್ಯಥೆ ಮನಸ್ಸಿನಲ್ಲಿ ಉಳಿದೇ ಇದೆ. ನಿನ್ನ ದಡದಲ್ಲಿ ಎಂದಾದರೊಂದು ದಿನ ನಾವು ನರ್ತನ ಮಾಡುತ್ತೇವೆ. ಆಗ ಸ್ವಲ್ಪ ನಿಂತು ನೋಡಿ ಹೋಗು."

ಆತನ ಮನಸ್ಸು ಇನ್ನೂ ಏನೇನೊ ಹೇಳುತ್ತದೆ. ತನ್ನ ಮನಸ್ಸು ಏನು ಹೇಳುತ್ತಿದೆಯೆಂಬುದೇ ಆತನಿಗೇ ಏನೇನೊ ಹೇಳುತ್ತದೆ. ತನ್ನ ಮನಸ್ಸು ಏನು ಹೇಳುತ್ತಿದೆಯೆಂಬುದೇ ಆತನಿಗೇ ಗೊತ್ತಿಲ್ಲ. ಆತನ ಮನೋಧರ್ಮ ಬಹುಶಃ ಧನಶಿರಿಗೆ ಗೊತ್ತಿರಬಹುದು. ಗೊತ್ತಿಲ್ಲದೆ ಇದ್ದರೂ ಇರಬಹುದು. ಇದರ ಬಗ್ಗೆ ಆತ ಚಿಂತಿಸುವುದಿಲ್ಲ. ಕುಣಿಯಲು ಮನಸ್ಸಾದರೆ ಕುಣಿಯಬೇಕು. ಹಾಡಲು ಮನಸ್ಸಾದರೆ ಹಾಡಬೇಕು. 'ಬಿಹು' ಕುಣಿತ ಕುಣಿಯಬೇಕೆಂದೆನಿಸಿದರೆ ಕುಣಿಯಬೇಕು.

ಇದು ಮನಸ್ಸನ್ನು ಅವಲಂಬಿಸಿದೆ.

ಬಿರುಗಾಳಿ ಬೀಸುವುದು, ಧನಶಿರಿ ಹರಿಯುವುದು, ಬೂರಗದ ಹತ್ತಿಯ ಹಾರಾಟ, ಪ್ರವಾಹದಿಂದ ದಡ ಕೊಚ್ಚಿಹೋಗುವುದು, ಸುತ್ತಲೂ ವಿನಾಶದ ಸೃಷ್ಟಿ. ಇದುವೇ ಜೀವನ, ಇದುವೇ ಬಿಹು.

ಗುಲಚ್‌ನ ಮನೋಮಂದಿರದಲ್ಲಿ 'ಬಿಹು'ನ ಉನ್ಮಾದವಿದೆ. ಆತನಿಗೆ ಬೇರಾವ ವಿಷಯದ ಅರಿವಿಲ್ಲ.

# ಇಪ್ಪತ್ತೇಳು

ಆಷಾಢ ಮಾಸ ಕಳೆಯುವುದರಲ್ಲಿತ್ತು. ಕೆಳಭಾಗದ ಜಮೀನಿನ ಕಟ್ಟಕಡೆಯಲ್ಲಿ ನಾಟಿ ಹಾಕಲು ಗುಲಚ್ ಬೀಜ ಬಿತ್ತಿದ. ನದಿಯ ದಡದ ಪಕ್ಕದಲ್ಲಿ ಸ್ವಲ್ಪ ಜಮೀನಿತ್ತು. ಆಶ್ವೀಜ ಮಾಸದಲ್ಲಿ ನಾಟಿ ನೆಡಬಹುದು. ಮಾಮೂಲಿ ನಾಟಿಕಾಲದಲ್ಲಿ ಅದರಲ್ಲಿ ನೀರು ತುಂಬಿರುತ್ತೆ. ಆದುದರಿಂದ ಅದಕ್ಕೆ ಕೊನೆಯಲ್ಲೇ ಒಟ್ಲು ಹಾಕಬೇಕಾಗುತ್ತೆ.

ಎಲ್ಲಿಂದಲೋ ಬಂದ ಚಂದ್ರ ಗುಲಚ್‌ನನ್ನು ಅವನ ಹೊಲದಲ್ಲೇ ಭೇಟಿ ಮಾಡಿದ.

"ಗುಲಚ್, ಇನ್ನೂ ಒಟ್ಲು ಹಾಕಲಿಲ್ವೇ? ತುಂಬಾ ತಡಮಾಡಿದೆ. ಯಾಕೆ?"

"ಈ ಒಟ್ಲು ಕೆಳಗಡೆಯ ಗದ್ದೆಗೆ ಬೇಕು. ನೀನು ಎಲ್ಲಿಂದ ಬಂದೆ?" ಒಟ್ಲು ಹಾಕುತ್ತಿದ್ದ ಗದ್ದೆಯ ತೆವರಿಯ ಮೇಲೆ ನಿಂತು ಗುಲಚ್ ಕೇಳಿದ.

"ಈ ಕಡೆ ಹೇಗಿದೆ?"

"ಚೆನ್ನಾಗಿದೆ. ಎಲ್ಲಿಂದ ಬಂದೆ?"

"ಡಾಲಿಮ್ ಕಡೆಯಿಂದ. ಏನೂ ಸಮಾಚಾರ ಕಿವಿಗೆ ಬೀಳಲಿಲ್ಲವೇ?"

"ಅಂಥದ್ದೇನೂ ಸುದ್ದಿ ಇಲ್ಲ. ಬಹಳ ದಿನಗಳಿಂದ ಆ ಕಡೆ ಹೋಗಲಿಲ್ಲ. ಏನು

ಸಮಾಚಾರ?''

ಚಂದ್ರ ಎರಡು ಬೀಡಿ ತೆಗೆದು ಒಂದನ್ನು ಗುಲಬ್‌ಗೆ ಕೊಟ್ಟ.

ಚಂದ್ರನ ಬೀಡಿಯ ಬೆಂಕಿಯಲ್ಲಿ ತನ್ನ ಬೀಡಿಯನ್ನು ಹೊತ್ತಿಸಿಕೊಂಡು ಗುಲಬ್ ಸಹ ಸೇದತೊಡಗಿದ.

''ಆ ಕಡೆ ಎಪಿಡೆಮಿಕ್ ಇದೆಯೇ?''

''ಏನು?'' - ಎಪಿಡೆಮಿಕ್ ಶಬ್ದದ ಅರ್ಥ ಗುಲಬ್‌ನಿಗೆ ಗೊತ್ತಾಗಲಿಲ್ಲ.

ನಿಧಾನವಾಗಿ ಹೊಗೆ ಬಿಡುತ್ತಾ ಚಂದ್ರ ಹೇಳಿದ - ''ಕಾಲರಾ ಇದೆಯೇ? ಹಳೆ ಡಾಲಿಮ್ ಹಳ್ಳಿಯಲ್ಲಿ ಇಬ್ಬರು ತೀರಿಕೊಂಡಿದ್ದಾರೆ.''

ಆತನ ಮಾತಿನ ಧಾಟಿಯಲ್ಲಿ ಯಾವ ತೆರನಾದ ಆತುರವಿರಲಿಲ್ಲ.

''ಕಾಲರಾ ಇದೆ! ನಮಗೆ ಗೊತ್ತೇ ಇಲ್ಲ. ಈಗ ಅಲ್ಲಿನ ಸ್ಥಿತಿ ಹೇಗಿದೆ?''

''ಕೆಲವು ಮಂದಿಗಳನ್ನಾದರೂ ಬಲಿ ತೆಗೆದುಕೊಳ್ಳದೆ ಅದು ಹೋಗೋದೇ ಇಲ್ಲ. ನನ್ನ ಮಾತನ್ನು ಅವರು ಗಾಳಿಗೆ ತೂರಿಬಿಡುತ್ತಾರೆ. ವೈ ನಾಟ್ ಡೈ? ಯಾಕೆ ಸಾಯೊಲ್ಲ? ಕೊಳೆತು ನಿಂತಿರುವ ಕೊಳದ ನೀರು ಕುಡಿಯುತ್ತಾರೆ. ಕುಡಿಯೋಕೆ ನದಿಯಿಂದ ನೀರು ತೆಗೆದುಕೊಂಡು ಹೋಗೋದಿಲ್ಲ! ಅವರೇನು ಮನುಷ್ಯರೇ? ಪ್ರಾಣಿಗಳ ರೀತಿಯಲ್ಲಿ ಕಾಲ ಕಳೆಯುತ್ತಾರೆ. ಮನೆಮಠ ಚೊಕ್ಕಟ ಮಾಡುವ ಗೋಜಿಗೆ ಹೋಗುವುದಿಲ್ಲ. ಆಲ್ ಡರ್ಟಿ. ಮನೆಯ ಸುತ್ತಲೂ ಡರ್ಟಿ-ಹಿ- ಡರ್ಟಿ. ನೀರನ್ನು ಕಾಯಿಸಿಕೊಂಡು ಕುಡಿಯಿರಿ ಎಂದು ಹೇಳಿದರೆ ನಗ್ತಾರೆ. ನನ್ನ ಮಾತು ಅವರಿಗೆ ಲೆಕ್ಕವೇ ಇಲ್ಲ. ಆಷಾಢ ಮಾಸದಲ್ಲಿ ಬೆಚ್ಚನೆಯ ನೀರು. ಪುಷ್ಯ ಮಾಸದಲ್ಲಿ ಸಹ ನಾವು ತಣ್ಣಗಿರೋ ನೀರು ಕುಡಿಯುತ್ತೇವೆ. ತಣ್ಣೀರು ಕುಡಿದು ಈಗ ಸಾಯಲಿ. ನನಗೆ ಸಮಾಚಾರ ತಿಳಿದ ಕೂಡಲೇ ಹೋದೆ; ಎಷ್ಟೋ ಹೇಳಿದೆ. ನೋ ಲಿಸನ್. ಆಲ್ ಲಾಫ್. ನಾನೇ ಗೋಲಾಘಾಟಿಗೆ ಹೋಗಿ ಎಸ್.ಡಿ.ಓ.ಗೆ ಹೇಳಿ ಸರಕಾರಿ ವೈದ್ಯರನ್ನು ಕರೆದುಕೊಂಡು ಬಂದೆ. ಇಂಜೆಕ್ಷನ್ ತೆಗೆದುಕೊಳ್ಳಲು ಯಾರು ಒಪ್ಪೊಲ್ಲ. ಇಂಜೆಕ್ಷನ್ ತೆಗೆದುಕೊಳ್ಳದೆ ಇರುವವರು ಸಾಯದೆ ಮತ್ಯಾರು ಸಾಯುತ್ತಾರೆ? ಲೆಟ್ ದೆಮ್ ಡೈ.''

''ಹಾಗಾದರೆ ಡಾಕ್ಟರು ಬಂದಿದ್ದಾರೆಯೇ?'' - ಗುಲಬ್ ಕೇಳಿದ.

''ಎಲ್ಲಿ ಬರ್ತಾರೆ? ಯಾರಾದರೂ ಡಾಲಿಮ್‌ಗೆ ಬರ್ತಾರೆಯೇ? ನಾನು ಹೋಗಿ ಕರೆದುಕೊಂಡು ಬಂದೆ. ನಾಲ್ಕು ದಿನಗಳಿಂದಲೂ ಅಲ್ಲೇ ಇದ್ದಾರೆ. ಇಂಜೆಕ್ಷನ್ ಕೊಡುತ್ತಿದ್ದಾರೆ. ಹೊಸದಾಗಿ ಯಾರಿಗೂ ಕಾಲರಾ ಇಲ್ಲ. ಈ ಮಧ್ಯೆ ನಾಹರ್ ತೀರಿಕೊಂಡ.''

''ಯಾರು ತೀರಿಕೊಂಡರು?''

''ನಾಹರ್. ಮೊದಲಿಗೆ ಕಪಾಹಿಯನ್ನು ಮದುವೆಯಾಗಿದ್ದವನು. ತರುಣ, ಯಂಗ್ ಮ್ಯಾನ್. ಆದರೆ ಏನು ಮಾಡೋದು? ಡೆಥ್ ಕಿಲಿಂಗ್ ಎವರಿಬಡಿ.''

ನಾಹರ್ ತೀರಿಕೊಂಡಿದ್ದಕ್ಕೆ ಗುಲಬ್ ಸಂತೋಷ ಪಡಬೇಕೇ ಅಥವಾ ದುಃಖಿಸಬೇಕೇ? ಆ ಬಗ್ಗೆ ಆತ ತಾನೇ ಏನೂ ತೀರ್ಮಾನ ಕೈಗೊಳ್ಳಲಾರದವನಾದ. ಒಳ್ಳೆಯದೇ ಆಯಿತು ಎಂದು ಅನ್ನಿಸಿರಬೇಕು. ನಾಹರ್ ಇನ್ನಿಲ್ಲ.

ಇದ್ದಕ್ಕಿದ್ದಂತೆ ಗುಲಬ್ ಕೇಳಿದ - ''ಸಫಿಯತ್ ಇರೋ ಕಡೆ ಕಾಲರಾ ಇಲ್ಲವೇನು?''

''ಆ ಕಡೆ ಇಲ್ಲ. ಹರಡಬಹುದೆಂದು ಊಹಿಸಿ ಪೂರ್ವಭಾವಿಯಾಗಿ ಇಂಜೆಕ್ಷನ್

ಕೊಡಲಾಗಿದೆ. ಕೆಲವರು ಇಂಜೆಕ್ಷನ್ ತೆಗೆದುಕೊಂಡಿದ್ದಾರೆ. ಪ್ರಿವೆನ್ಷನ್ ಬೆಟರ್ ದ್ಯಾನ್ ಕ್ಯೂರ್."

ಬಹುಶಃ ಗುಲಬ್‌ನಿಗೆ ಈ ಮಾತು ಹಿಡಿಸಲಿಲ್ಲ. ಸಫಿಯತ್ ಮತ್ತು ಚೇನಿಮಾಇಯ ತಂದೆ ಮುಂತಾದವರು ಕಾಲರಾಕ್ಕೆ ತುತ್ತಾಗಿ ಸಾಯಬೇಕಾಗಿತ್ತು. ಯಾರು ಸಾಯಬೇಕಾಗಿತ್ತೋ ಅವರು ಸಾಯಲಿಲ್ಲ ಎಂಬುದು ಆತನ ಅಭಿಪ್ರಾಯವಾಗಿತ್ತು.

ಚಂದ್ರ ಹೇಳಿದ - "ಈ ಕಡೆ ಸಮಾಚಾರ ತಿಳಿಯಲು ಬಂದಿದ್ದೆ. ಜನರು ಈ ಕಡೆಯಿಂದ ಆ ಕಡೆಗೆ, ಆ ಕಡೆಯಿಂದ ಈ ಕಡೆಗೆ ಹೋಗಿಬರ್ತ್ತಾರೆ. ಬಹುಶಃ ಇಲ್ಲೂ ಕಾಲರಾ ಹರಡುವ ಸಂಭವ ಉಂಟು. ಕಾಲರಾ ಅಂಟುರೋಗ."

ಗುಲಬ್ ಹೇಳಿದ - "ಇಲ್ಲಿಯವರೆಗೂ ಈ ಸಮಾಚಾರ ಕಿವಿಗೆ ಬಿದ್ದಿಲ್ಲ. ನಮ್ಮಲ್ಲಿ ಕಾಲರಾ ಇಲ್ಲ."

ಇಬ್ಬರೂ ನಿಧಾನವಾಗಿ ಗದ್ದೆಯ ಹತ್ತಿರದಿಂದ ಗುಲಬ್‌ನ ಮನೆಕಡೆ ಹೊರಟರು. ಆಷಾಢ ಮಾಸದಲ್ಲೂ ಚಂದ್ರ ಬೆಲ್ಟ್ ಇರುವ ಚಪ್ಪಲಿ ಹಾಕಿಕೊಂಡಿದ್ದಾನೆ. ಪ್ಯಾಂಟನ್ನು ಮಂಡಿಯವರೆಗೂ ಮಡಿಸಿದ್ದಾನೆ. ಕೂಲಿಂಗ್ ಗ್ಲಾಸ್ ಹಾಕಿಕೊಂಡಿದ್ದಾನೆ. ಗಡ್ಡ ಬೆಳೆದಿದೆ. ಬಹಳ ದಿನಗಳಿಂದ ಕ್ಷೌರ ಮಾಡಿಕೊಳ್ಳಲಿಲ್ಲ. ಬಹುಶಃ ಆತನಿಗೆ ಸಮಯವೇ ಸಿಗಲಿಲ್ಲ.

ರಸ್ತೆಯಲ್ಲೇ ಗುಲಬ್‌ನಿಗೆ ಒಂದು ಮಾತು ನೆನಪಾಯಿತು. ಆತ ಕೇಳಿದ - "ನಮ್ಮ ಕಡೆಗೂ ಒಂದು ಸಾರಿ ಡಾಕ್ಟರನ್ನು ಕರೆದುಕೊಂಡು ಬರೋಕೆ ಆಗೊಲ್ವೇ?"

"ಡಾಕ್ಟರನ್ನು ಕರೆತರಬೇಕೆ? ಯಾಕೆ?"

"ಚೇನಿಮಾಇಗಾಗಿ - ನಿನಗೆ ನೆನಪಿದೆಯಲ್ವೇ?.........ಆಕೆ.........."

"ಮೋಲೋಕಾನ ಸೊಸೆ? ಅವಳು ಆಗ ನಿನ್ನವಳಾಗಿ ...............?"

"ಅಹುದಪ್ಪಾ; ಅವಳ ಗಂಡನಿಗೆ ಕಾಯಿಲೆ. ಹಳೇ ಕಾಯಿಲೆ. ಡಾಕ್ಟರ್ ಒಂದು ಸಾರಿ ನೋಡಿ ಬಿಟ್ಟರೆ............"

"ಇವರು ಎಪಿಡೆಮಿಕ್‌ಗೆ ಸಂಬಂಧಿಸಿದ ಡಾಕ್ಟರು. ಚೇನಿ ಗಂಡನಿಗೋ ಯಾವ ಕಾಯಿಲೆ?"

"ವಿಪರೀತ ಕೆಮ್ಮು. ಆಸ್ತಮಾ ಕಾಯಿಲೆ."

"ನೋಡಿದರೂ ಡಾಕ್ಟರ್ ವಾಸಿ ಮಾಡಲಾರರು. ಕಾಲರಾಗೆ ಇಂಜೆಕ್ಷನ್ ಕೊಡಲು ಬಂದಿದ್ದಾರೆ."

"ಬೇಕಾದರೆ ಆಮೇಲೆ ಚಿಕಿತ್ಸೆ ಆಗಲಿ. ಆತನನ್ನು ಗೋಲಾಘಾಟ್‌ನ ಸರಕಾರಿ ಆಸ್ಪತ್ರೆಗೆ ಸೇರಿಸದೆ ಹೋದರೆ ಗುಣವಾಗೋ ಆಶೆಯೇ ಇಲ್ಲ. ಒಂದು ಸಾರಿ ಡಾಕ್ಟರ್ ಕಣ್ಣಾರೆ ನೋಡಿ ಗೋಲಾಘಾಟ್‌ಗೆ ಕರೆದುಕೊಂಡು ಹೋಗಲು ಒಂದು ವೇಳೆ ವ್ಯವಸ್ಥೆ ಮಾಡಿದರೆ......."

ಇಬ್ಬರೂ ಗುಲಬ್‌ನ ಮನೆಗೆ ಬಂದರು.

"ತರಾ, ಹೇ ತರಾ .........." - ಚಂದ್ರ ಕೂಗಿದ.

ತರಾ ಒಳಗಡೆಯಿಂದ ಬಂದಳು.

"ಓ, ಅಣ್ಣಾನೇ"

"ನಿಮ್ಮ ಅಣ್ಣ ಅಲ್ಲದೆ ನಿನ್ನನ್ನು ನೋಡಲು ರಾಜಕುಮಾರ ಬರ್‍ತಾನಾ? ಒಂದು ಲೋಟ ಟೀ ಮಾಡಿಕೊಡು. ನನ್ನ ಗಂಟಲು ಒಣಗಿ ಹೋಗಿದೆ."

ಆತನ ಕಡೆ ಸಿಟ್ಟಿನಿಂದ ಕೂಡಿದ ದೃಷ್ಟಿ ಬೀರಿ ತರಾ ತತ್‌ಕ್ಷಣ ಅಡಿಗೆ ಮನೆಯೊಳಗೆ ಹೋದಳು. ಬಿಸಿಲಿದ್ದ ಕಾರಣ ಗುಲಬ್‌ನಿಗೂ ಬಾಯಾರಿಕೆಯಾಯಿತು.

ಗುಲಬ್ ಹೇಳಿದ - "ಸ್ವಲ್ಪ ಕುಳಿತುಕೊ. ನಾನು ಕೈಕಾಲಿನ ಕೆಸರನ್ನು ತೊಳೆದುಕೊಂಡು ಬರ್‍ತೀನಿ. ತರಾ. ಸಾಧ್ಯವಾದರೆ ಉಪಾಹಾರದ ಷ್ಯವಸ್ಥೆ ಸಹ ಆಗಲಿ."

ಚಂದ್ರ ಇನ್ನೊಂದು ಬೀಡಿ ಹೊತ್ತಿಸಿ ಕನ್ನಡಕ ತೆಗೆದು ಕೇಳಿದ - "ನಿಮ್ಮ ಚಿಕ್ಕಮ್ಮ ಮನೆಯಲ್ಲಿಲ್ವೇನು?"

ಅಡಿಗೆ ಮನೆಯಿಂದಲೇ ತರಾ ಉತ್ತರಿಸಿಳು - "ನಾನು ಮಾಡಿದ ಟೀ ನೀನು ಕುಡಿಯುವುದಿಲ್ವೇನು?"

ಚಂದ್ರ ಹೇಳಿದ - "ಓಹೋ. ಚೆನ್ನಾಗಿ ರಿಪ್ಲೈ ಕೊಡೋದು ಕಲಿತಿದ್ದೀಯೇ. ಸರಿ. ನೀನು ಗುಣವಂತೆಯಾಗದಿದ್ದರೆ ಇಷ್ಟೊಂದು ದಿನ ಮದುವೆಯಾಗದೆಯೇ ಮನೆಯಲ್ಲೇ ಉಳಿಯುತ್ತಿದ್ದೆಯಾ?"

"ಸರಿ. ಅದು ಹಾಗಿರಲಿ. ನೀನೇನು ಮದುವೆ ಮಾಡಿಕೊಂಡು ಅಪ್ಪ ಅನ್ನಿಸಿಕೊಂಡಿದ್ದೀಯಾ? ನನ್ನ ಜೊತೆಯಲ್ಲಿ ಈ ರೀತಿ ಮಾತನಾಡೋಕೆ. ನಿನಗೆ ನಿಜಕ್ಕೂ ನಾಚಿಕೆಯಾಗಬೇಕಾಗಿತ್ತು."

"ಹಾಗಾದರೆ ಇನ್ನೆರಡು ವರ್ಷದ ತನಕ ತಾಳು. ಆಮೇಲೆ ನೋಡು ನಗರದ ರಾಜಕುಮಾರಿ ತಂದು ಮನೆಯಲ್ಲಿರಿಸ್ತೀನಿ."

"ಅದಕ್ಕೋಸ್ಕರವೇ ನಿನಗೆ ಹಳ್ಳಿ ಹಿಡಿಸಲಿಲ್ಲ. ನನಗೆ ಮೊದಲೇ ಗೊತ್ತಿತ್ತು........."

ಗುಲಬ್ ಗಂಟಲು ಉಜ್ಜಿಕೊಳ್ಳುತ್ತಾ ಕ್ಯಾಕರಿಸಿದ ಸದ್ದು ಕೇಳಿ ತರಾ ಮೌನವಾದಳು. ಸ್ವಲ್ಪ ಹೊತ್ತಾದ ಮೇಲೆ ತರಾ ಇಬ್ಬರಿಗೂ ಟೀ ಮತ್ತು ಉಪಾಹಾರ ಕೊಟ್ಟು ಒಳಗೆ ಹೋದಳು.

ಚಂದ್ರ ತರಾಳ ಕಡೆ ನೋಡಿ ಸ್ವಲ್ಪ ಗಂಭೀರ ಮುಖಮುದ್ರೆಯಿಂದ ಕೇಳಿದ - "ತರಾಳ ಮದುವೆ ಏರ್ಪಾಟು ಮಾಡಿದ್ದೀಯೋ ಅಥವಾ ಇಲ್ಲವೋ? ಈಕೆಯಂತೂ ಬೆಳೆದಿದ್ದಾಳೆ."

ಗುಲಬ್ ಬಾಯಿಗೆ ಹಾಕಿಕೊಳ್ಳಲು ಎತ್ತಿಕೊಂಡಿದ್ದ ತಿಂಡಿ ಚಂದ್ರನ ಪ್ರಶ್ನೆ ಕೇಳಿ ಅರ್ಧಕ್ಕೆ ನಿಂತಿತು. ಅಸಹಾಯಕ ದೃಷ್ಟಿಯಿಂದ ಆತ ಚಂದ್ರನ ಕಡೆ ನೋಡಿದ.

ಚಂದ್ರ ಹೇಳಿದ - "ಸರಿ. ಯಾವುದೋ ಒಂದು ಕಡೆ ಅಂತ ಕೊಟ್ಟು ಮದುವೆ ಮಾಡಬೇಡ. ನಮ್ಮ ಸಮಾಜದಲ್ಲಿ ಹೆಣ್ಣುಮಗು ಹುಟ್ಟೋದೇ ತಡ. ಮದುವೆ ಬಗ್ಗೆ ಪ್ರಸ್ತಾಪ ಮಾಡ್ತಾರೆ. ಹುಡುಗಿ ಅಭಿಪ್ರಾಯ ಕೇಳಬೇಕು ಅನ್ನೋ ವಿಷಯದ ಕಡೆ ಅವರಿಗೆ ಗಮನವೇ ಇಲ್ಲ. ಮದುವೆ ಮಾಡಿದರೆ ಅನುಕೂಲವಾಗಿರೋ ಮನೆಮಠ ನೋಡಿ ಒಳ್ಳೆಯ ಗಂಡಿಗೆ ಮದುವೆ ಮಾಡ್ಬೇಕು. ಆಕೆಗೆ ಒಳ್ಳೆಯ ವರ ಸಿಕ್ಕೇ ಸಿಗ್ತಾನೆ."

ಗುಲಬ್ ಅರ್ಧ ತಿಂಡಿ ಮಾತ್ರ ತಿಂದು ಬೇಗಬೇಗ ಟೀ ಕುಡಿದು ಮುಗಿಸಿದ. ಅನಂತರ ಹೇಗೋ ಸುಧಾರಿಸಿಕೊಂಡು ಹೇಳಿದ - "ನೋಡೋಣ. ಒಂದು ಬೀಡಿ ಕೊಡು. ಹೇ ತರಾ. ಸ್ವಲ್ಪ ಬೆಂಕಿ ತಗೊಂಡು ಬಾ."

ಗೋಡೆಯ ಆ ಕಡೆ ತರಾ ಉತ್ಕಂಠಿತಳಾಗಿ ನಿಂತಿದ್ದಳು. ಆಕೆಯ ಹೃದಯ ಕಂಪಿಸುತ್ತಿತ್ತು. ಮರಣದಂಡನೆಗೆ ಗುರಿಯಾಗಿ ನೇಣುಹಾಕಿಸಿಕೊಳ್ಳಲು ನಿಂತಿರುವ ಅಪರಾಧಿಯಂತೆ ಗುಲಬ್‌ನ ಉತ್ತರವನ್ನ ಕೇಳಿಸಿಕೊಳ್ಳಲು ಆಕೆ ಉಸಿರುಕಟ್ಟಿ ನಿಂತಿದ್ದಳು. ಗುಲಬ್‌ನ ಮೌನ

ಆಕೆಯನ್ನು ಭಯಹೀನಳನ್ನಾಗಿ ಮಾಡದಿದ್ದರೂ ಆಕೆಗೆ ಕೊಂಚ ಮಟ್ಟಿಗೆ ಆಶ್ವಾಸನೆ ನೀಡಿತ್ತು.

ತಲೆ ತಗ್ಗಿಸಿಕೊಂಡೇ ಬಂದು ಬೆಂಕಿಯ ಕೆಂಡವೊಂದನ್ನು ಹೇಗೋ ಗುಲಬ್‌ನ ಕೈಗೆ ಕೊಟ್ಟು ಹೋದಳು.

ಚಂದ್ರ ಹೇಳಿದ - "ನೀನು ಹೆದರಬೇಡ ತರಾ. ಅಯಾಮ್ ಯುವರ್ ಬ್ರದರ್. ನಿನ್ನ ಮದುವೆ ಎಲ್ಲೋ ಸಿಕ್ಕಿದ ಕಡೆ ಮಾಡೋದಿಲ್ಲ. ನಾನು ಒಂದು ಒಳ್ಳೆಯ ಹುಡುಗನೊಡನೆ ನಿನ್ನ ಮದುವೆ ನೆರವೇರಿಸುತ್ತೇನೆ."

"ಸುಮ್ನೆ ಹೋಗಪ್ಪ" - ಅಂತ ಹೇಳಿ ತರಾ ಮತ್ತೆ ಒಳಗಡೆ ಹೋದಳು.

ಚಂದ್ರ ಗಂಭೀರತೆಯಿಂದ ಗುಲಬ್‌ನಿಗೆ ಮನದಟ್ಟಾಗುವಂತೆ ಹೇಳಲು ಪ್ರಯತ್ನಿಸಿದ. - "ಹಿಂದಿನ ಕಾಲದಲ್ಲಿ ನಮ್ಮ ಹಿಂದೂ ಜನಾಂಗದ ಕನ್ಯೆಯರಿಗೆ ಸ್ವಯಂವರ ಪದ್ಧತಿ ಇತ್ತು. ಕನ್ಯೆ ಕಿವಿಯಾರೆ ವಿಷಯ ತಿಳಿದು, ಕಣ್ಣಾರೆ ನೋಡಿ ವರನ ಆಯ್ಕೆ ಮಾಡಿ, ಆತನ ಕೊರಳಿಗೆ ತಾನೇ ಮಾಲೆ ಹಾಕಿ ವರಿಸುತ್ತಿದ್ದಳು. ಇತ್ತೀಚೆಗೆ ಯೂರೋಪ್ ಮತ್ತು ಅಮೇರಿಕಾದಲ್ಲಿ ಹುಡುಗ ಹಾಗೂ ಹುಡುಗಿಯ ಮನಸ್ಸು ಬೆರೆತು ಒಬ್ಬರನ್ನೊಬ್ಬರು ಒಪ್ಪಿಕೊಂಡರೆ ಮಾತ್ರ ಮದುವೆ ಆಗುತ್ತೆ ಅಂತ ಹೇಳ್ತಾರೆ. ನಮ್ಮ ಹಳ್ಳಿಗಳಲ್ಲಿ ಮಾತ್ರ ಹುಡುಗಿಯರಿಗೆ ಜಬರ್ದಸ್ತಿ ಮಾಡಿ ಮದುವೆ ನೆರವೇರಿಸುತ್ತಾರೆ. ಈ ನಿಯಮ ಇಂದಿಗೂ ಮತ್ತಷ್ಟು ಕಟ್ಟುನಿಟ್ಟಾಗಿದೆ. ತರಾಳ ಮದುವೆ ಸಹ ಎಂದಾದರೊಂದು ದಿನ ಮಾಡ್ಬೇಕು. ಆದರೆ ಅವಳ ಒಪ್ಪಿಗೆ ಕೇಳಿ ಮಾಡ್ಬೇಕು. ಅವಳಿಗೆ ಬೆದರಿಕೆ ಹಾಕಿ ಜಬರ್ದಸ್ತಿ ಮಾಡಿ ಮದುವೆ ಮಾಡಬಾರದು. ಹಳ್ಳಿಯ ಕೆಲವು ಹುಡುಗಿಯರು ಯಾರೋ ತಮಗೆ ಇಷ್ಟ ಬಂದವರ ಜೊತೆಯಲ್ಲಿ ಓಡಿ ಹೋಗ್ತಾರೆ. ಅದೇನೂ ಅನುಚಿತ ಅಲ್ಲ. ಮನಸ್ಸು ಬೆರೆಯುವುದೇ ರಿಯಲ್ ಮ್ಯಾರೇಜ್ ಎಂದು ಅವರು ಭಾವಿಸಿದ್ದಾರೆ."

ಗುಲಬ್ ತಲೆ ತಗ್ಗಿಸಿಕೊಂಡೇ ಚಂದ್ರನ ಮಾತನ್ನು ಕೇಳಿಸಿಕೊಳ್ಳುತ್ತಿದ್ದ. ಆದರೆ ಆತನಿಗೆ ಆ ಮಾತಿನ ಅರ್ಥ ಗೊತ್ತಾಗಲಿಲ್ಲ.

ತರಾಳ ಮದುವೆ ಮಾಡ್ಬೇಕು.

ತರಾಳಿಗೆ ಒಳ್ಳೆಯ ಮನೆಮಠ ಹಾಗೂ ಒಳ್ಳೆಯ ಗಂಡು ಹುಡುಕ್ಬೇಕು. ಅಂದರೆ ತರಾಳನ್ನು ಆತನಿಂದ ಬೇರ್ಪಡಿಸಿ, ಎಲ್ಲೋ ದೂರಕ್ಕೆ ಕೊಟ್ಟು ಮದುವೆ ಮಾಡ್ಬೇಕು.

ಚಂದ್ರನ ಮಾತುಗಳಿಂದ ಗುಲಬ್‌ನ ಚಿಂತೆ ಮತ್ತಷ್ಟು ಜಾಸ್ತಿಯಾಯಿತು. ತರಾಳ ಮದುವೆ ವಿಷಯ ಕುರಿತು ಯೋಚಿಸುವುದೂ ಕಷ್ಟಕರವಾಗಿದೆ! ಆತ ಇಷ್ಟೊಂದು ಕಠೋರವಾಗಲು ಹೇಗೆ ಸಾಧ್ಯ? ತರಾಳನ್ನು ದೂರ ಕಳುಹಿಸೋದು ಹೇಗೆ? ಬೇರೆ ಕಳುಹಿಸಿ ಇರೋದು ಹೇಗೆ?

ಆದರೆ, ತರಾ ಹೋಗಲು ಒಪ್ಪದೇ ಹೋಗಬಹುದು!

ಪ್ರೇಮದ ಕಿಡಿ ಎಷ್ಟು ಬೇಗ ಹೊತ್ತಿಕೊಂಡು ಉರಿಯುತ್ತೋ ಅಷ್ಟು ಬೇಗ ಆರಿ ಹೋಗುವುದಿಲ್ಲ. ಆರಿ ಹೋಗುವ ಸಮಯದಲ್ಲಿ ಮತ್ತಷ್ಟು ಹೊತ್ತಿಕೊಂಡೇ ಉರಿಯುತ್ತದೆ.

ಚಂದ್ರ ಹೊರಡಲುನುವಾದ.

"ನಾನು ಮತ್ತೆ ಡಾಲಿಮ್‌ಗೆ ಹೋಗುತ್ತೇನೆ. ನೀನು ಚಿಂತಿಸಬೇಡ. ಸಾಧ್ಯವಾದರೆ ನಾಳಿದ್ದು ನಾನು ಡಾಕ್ಟರನ್ನು ಕರೆದುಕೊಂಡು ಬರ್ತೇನೆ. ನಾವು ಚೇನಿಮಾಣಿಯ ಗಂಡನನ್ನು ನೋಡಲು ಹೋಗೋಣ. ಒಂದು ವೇಳೆ ಡಾಕ್ಟರು ಅಡ್ವೈಸ್ ಮಾಡಿದರೆ ಅವನನ್ನು ಟೌನ್‌ಗೆ

ಕರೆದುಕೊಂಡು ಹೋಗೋ ಅರೆಂಜ್‌ಮೆಂಟ್ ಮಾಡ್ತೀನಿ. ನೀನು ಯೋಚಿಸಬೇಡ. ನಾನಿದ್ದೀನಿ.''

ಚಂದ್ರ ಹೊರಟ.

ತರಾ ಒಳಗಡೆಯಿಂದ ಬಂದಳು.

''ಅಣ್ಣಾ, ಹೊರಟೇ ಬಿಟ್ಟೆಯಾ?''

''ಹೋಗದೆಯೇ ನಿಮ್ಮ ಹತ್ತಿರ ತಮಾಷೆ ಮಾಡ್ತಾ ಕುಳಿತುಕೊಂಡರೆ ನನ್ನ ಕೆಲಸ ಆಗ್ತದೆಯೇ? ಡಾಲಿಮ್‌ಗೆ ಎಗೈನ್ ಹೋಗ್ಬೇಕು. ಒಳ್ಳೆಯದು ತರಾ. ನಾನು ಬರ್ತೀನಿ.''

ಇದ್ದಕ್ಕಿದ್ದಂತೆ ಗುಲಬ್ ಹೇಳಿದ - 'ಸರಿ ಚಂದ್ರು, ನೀನು ನಮ್ಮ ಕಡೆ ಒಂದು ಆಸ್ಪತ್ರೆ ತೆರೆಯುವಂತೆ ಮಾಡಲು ಸಾಧ್ಯವಿಲ್ಲವೇ ?''

ಚಂದ್ರನು ಗುಲಬ್‌ನ ಕಡೆ ನೋಡಿದ.

''ಆಗೋದಿಲ್ಲ ಅಂತ ಯಾರು ಹೇಳ್ತಾರೆ? ಹೂ ಸೇಸ್? ಹಳ್ಳಿಯವರು ಇಷ್ಟಪಟ್ಟರೆ ಯಾವುದೂ ಅಸಂಭವವಲ್ಲ. ನಾನು ಬಹಳ ದಿವಸಗಳಿಂದಲೂ ಯೋಚಿಸ್ತಿದ್ದೀನಿ. ನಾನು ಮಾತನಾಡಬಲ್ಲೆ. ಆದರೆ ಹಣ ಇಲ್ಲ. ನೀನು ಒಂದು ವೇಳೆ ಸ್ವಲ್ಪ ಸಹಾಯ ಮಾಡಿದರೆ ನಾನು ಈ ಕೆಲ್ಸಕ್ಕೆ ಕೈ ಹಾಕಬಲ್ಲೆ. ಇದು ಸರಿಯೇ ಸರಿ. ಒಂದು ಆಸ್ಪತ್ರೆಯ ನೆಸೆಸಿಟಿ ಇದೆ.''

''ಅಹುದು'' - ಗುಲಬ್ ಮೆಲ್ಲಗೆ ಹೇಳಿದ.

ಮತ್ತೆ ಭೇಟಿ ಮಾಡಿ ಮಾತನಾಡ್ತೀನಿ ಅಂತ ಹೇಳಿ ಚಂದ್ರ ಹೊರಟು ಹೋದ.

ತರಾಳ ಕಡೆ ಗುಲಬ್ ದೃಷ್ಟಿ ಹಾಯಿಸಿದ. ತರಾ ಸಹ ನೋಡಿದಳು.

ಗುಲಬ್ ತಲೆ ತಗ್ಗಿಸಿ ನಿಂತ.

ಆತನಿಗೆ ಗಾಬರಿಯಾಯಿತು. ಯಾವುದೋ ಅಗೋಚರ ಒಳಸಂಚು ತರಾಳನ್ನು ಆತನಿಂದ ಬೇರ್ಪಡಿಸಲು ಹವಣಿಸುತ್ತಿರುವಂತೆ ಭಾಸವಾಯಿತು.

# ಇಪ್ಪತ್ತೆಂಟು

ಬತ್ತದ ನಾಟಿ ಹಾಕುವ ಕಾಲ. ಬೇರೆ ವಿಷಯದ ಕಡೆ ಗಮನ ಹರಿಸಲು ಬಿಡುವಿಲ್ಲ. ಕೆಲವೇ ದಿನಗಳೊಳಗೆ ನಾಟಿ ಕೆಲಸ ಪೂರೈಸಬೇಕು. ಒಂದು ದಿನ ತಡವಾಯಿತು ಅಂದರೆ ಭಾರಿ ನಷ್ಟವಾದಂತೆಯೇ ಸರಿ.

ಕಪಾಹಿ ಮತ್ತು ತರಾ ಇಬ್ಬರೂ ನಾಟಿ ನೆಡುವುದರಲ್ಲಿ ಬಹಳ ನಿಪುಣರು. ಅವರ ಕೈ ಬಹಳ ಚುರುಕು. ಸುಮಾರು ಒಂದು ಎಕರೆ ಜಮೀನಿನ ನಾಟಿಯನ್ನು ಇಬ್ಬರೂ ಸೇರಿ ಒಪ್ಪೊತ್ತಿಗೇ ಮುಗಿಸಿ ಬರ್ತಾರೆ. ತರಾ ಒಪ್ಪೊತ್ತಿನಲ್ಲೇ ಇಪ್ಪತ್ತು ಇಪ್ಪತ್ತೆರಡು ಪಾತಿ ಬತ್ತದ ಪೈರನ್ನು ಕಿತ್ತು ಮುಗಿಸುತ್ತಾಳೆ. ಆಕೆಗೆ ಆಯಾಸವಾಗುವುದೇ ಇಲ್ಲ.

ಋತುಮಾನ ಹಿತಕರವಾಗಿತ್ತು. ಇಡೀ ಆಷಾಢ ಮಾಸದಲ್ಲಿ ಮಳೆ ಬೀಳುತ್ತಿತ್ತು. ಶ್ರಾವಣ ಮಾಸದಲ್ಲಿ ಬಿಸಿಲು ಬೀಳುತ್ತಿದೆ. ಮಣ್ಣು ಹದವಾಗಿದೆ. ಆದುದರಿಂದ ನಾಟಿ ನೆಡಲು ಭೂಮಿ

ಹದವಾಗಿದೆ. ಭಾರಿ ಪ್ರವಾಹ ಬರುವ ಮುನ್ನವೇ ಬಿಸಿಲಿರುವ ದಿನಗಳಲ್ಲೇ ನಾಟಿ ನೆಟ್ಟರೆ ಪೈರು ಚೆನ್ನಾಗಿ ಬರುತ್ತೆ. ಆಗ ಯಾವ ರೀತಿಯ ಗಾಬರಿಯೂ ಇರುವುದಿಲ್ಲ.

ಕೋಳಿ - ಕಾಗೆ ಎಚ್ಚರವಾಗುವ ಮುನ್ನವೇ ಗುಲಬ್ ಗದ್ದೆ ಹತ್ತಿರ ಹೋಗುತ್ತಾನೆ. ಆಗಲೇ ಕಪಾಹಿ ಮತ್ತು ತರಾ ಏಳುತ್ತಾರೆ. ಎಮ್ಮೆ ಮತ್ತು ಹಸುಗಳ ಹಾಲು ಕರೆಯುತ್ತಾರೆ. ತಿಂಡಿ ಮಾಡುತ್ತಾರೆ. ಭತ್ತ ಕುಟ್ಟುತ್ತಾರೆ. ಅನಂತರ ಗುಲಬ್‌ನಿಗೆ ಕೊಡಲು ತಿಂಡಿ ತೆಗೆದುಕೊಂಡು ಇಬ್ಬರೂ ಗದ್ದೆಗೆ ಹೋಗುತ್ತಾರೆ. ನೇಗಿಲ ಗೆರೆ ಅಥವಾ ನೀರು ನಿಂತಿರುವ ಗುಂಡಿಗಳಲ್ಲಿ ಕೆಲವು ಸಾರಿ ಕೈನಿಂದ, ಕೆಲವು ಸಾರಿ ಕೊಡಚೆ (ಮೀನು ಹಿಡಿಯಲು ಬಿದಿರಿನಿಂದ ಮಾಡಿದ ಬುಟ್ಟಿ) ಯಿಂದ ಮೀನು ಹಿಡಿಯುತ್ತಾರೆ. ಅನಂತರ ನಾಟಿ ಅಥವಾ ಕಸಕಡ್ಡಿ ತೆಗೆದು ಹಾಕುವ ಕಾರ್ಯದಲ್ಲಿ ನಿರತರಾಗುತ್ತಾರೆ. ಗದ್ದೆಯಲ್ಲಿ ಈ ದಿನ ಜಾಸ್ತಿ ಕೆಲಸವಿಲ್ಲ. ತರಾ ಒಬ್ಬಳೇ ಮಾಡಿ ಮುಗಿಸುತ್ತಾಳೆ. ಎಂದೋ ಒಂದೊಂದು ದಿನ ಕಪಾಹಿ ಮನೆಯಲ್ಲೇ ಉಳಿಯುತ್ತಾಳೆ. ಅವಳು ಮನೆಯಲ್ಲೇ ಉಳಿದು ಮಧ್ಯಾಹ್ನದ ಅಡಿಗೆ ಮಾಡುತ್ತಾಳೆ. ಮಧ್ಯೆಮಧ್ಯೆ ನೇಯ್ಗೆ ಕೆಲಸ ಸಹ ಮಾಡುತ್ತಾಳೆ.

ಬಿಸಿಲಿನಲ್ಲಿ ಗದ್ದೆಯ ಕೆಲಸ ಮಾಡುವಾಗ ಕೆಂಪೇರಿದ ತರಾಳ ಮುಖ ನೋಡುತ್ತಾ ನೋಡುತ್ತಾ ಆನಂದಭರಿತನಾಗಿ ಗುಲಬ್ ಉಳುಮೆ ಮಾಡುತ್ತಾನೆ. ಹಲುಬೆ ಹೊಡೆಯುತ್ತಾ ತರಾಳ ಜೊತೆಯಲ್ಲಿ ಅಲ್ಪ-ಸ್ವಲ್ಪ ಮಾತನಾಡುತ್ತಾನೆ. ಬಿಸಿಲು ಜಾಸ್ತಿಯಾದಾಗ ಅವರಿಬ್ಬರೂ ಮೈದಾನದಲ್ಲಿದ್ದ ಮಾವಿನ ಅಥವಾ ಅರಳಿ ಮರದ ನೆರಳಿನಲ್ಲಿ ವಿಶ್ರಮಿಸಿಕೊಳ್ಳುತ್ತಾರೆ. ಗುಲಬ್ ಒಂದು ಬೀಡಿ ಹೊತ್ತಿಸಿ ಸೇದುತ್ತಾನೆ. ತರಾ ಮಣ್ಣು ಮೆತ್ತಿರುವ ಸೆರಗಿನಿಂದ ತನ್ನ ಮುಖವನ್ನು ಒರಸಿಕೊಳ್ಳುತ್ತಾಳೆ. ಒಂದು ಲೋಟ ನೀರು ಕುಡಿಯುತ್ತಾಳೆ. ಅನಂತರ ಮತ್ತೆ ಗದ್ದೆಯಲ್ಲಿ ಕೆಲಸ ಮಾಡಲು ಹೋಗುತ್ತಾಳೆ.

ಕೆಲವು ಸಾರಿ ತರಾ ಮನೆಯಲ್ಲೇ ಇರುತ್ತಾಳೆ. ಕಪಾಹಿ ಗದ್ದೆಗೆ ಹೋಗಿ ಕೆಲಸ ಮಾಡುತ್ತಾಳೆ.

ಆ ದಿನ ಬಿಸಿಲು ಬಹಳ ಪ್ರಖರವಾಗಿತ್ತು. ಉಳುಮೆ ಮಾಡಿದ್ದ ಗದ್ದೆಯ ನೀರು ಮತ್ತು ಕೆಸರು ಸಹ ಕಾದುಹೋಗಿತ್ತು. ಕೋಣ ಮತ್ತು ಎತ್ತುಗಳು ಮುಂದೆ ಹೋಗಲು ಹಿಂಜರಿಯುತ್ತಿದ್ದುವು. ಬಿಸಿಲಿನ ಕಾವು ತೀಕ್ಷ್ಣವಾಗಿತ್ತು.

ಕಪಾಹಿ ಮತ್ತು ಗುಲಬ್ ಇಬ್ಬರೂ ಗದ್ದೆಯಿಂದ ಹೊರಗೆ ಬಂದರು. ಅಷ್ಟೊಂದು ಬಿಸಿಲಿನಲ್ಲಿ ಗದ್ದೆಯಲ್ಲಿ ಕೆಲಸ ಮಾಡಲು ಸಾಧ್ಯವಿಲ್ಲ.

ಇಬ್ಬರೂ ಅರಳಿಮರದ ಕೆಳಗಡೆ ಬಂದು ಕುಳಿತರು. ಗುಲಬ್‌ನ ಬರಿ ಮೈ ಬಿಸಿಲಿನಿಂದಾಗಿ ಕರ್ರಗಾಗಿತ್ತು. ಆತ ಕಪಾಹಿಯ ಕಡೆ ಬೆನ್ನು ಮಾಡಿ ಹೇಳಿದ - ''ನೋಡು, ಬೆವರಸಾಲೆ ಇರೋ ಕಡೆ ಸ್ವಲ್ಪ ಕೆರಿ.''

ಗುಲಬ್‌ನ ಬಳಿ ಬಂದು ಕಪಾಹಿ ಬೆನ್ನು ಉಜ್ಜತೊಡಗಿದಳು. ಆ ಕಡೆಯ ಬಿದಿರುಮೆಳೆಯಿಂದಾಗಿ ಗಾಳಿ ಬೀಸತೊಡಗಿತು. ಅವರಿಗೆ ಸ್ವಲ್ಪ ಹಾಯಾಗಿ ಕಂಡಿತು. ಧಗೆ ಸ್ವಲ್ಪ ಕಡಿಮೆಯಾಯಿತು.

ನಾಟಿ ಹಾಕಬೇಕಾದ ಜಮೀನು ಅರ್ಧಕ್ಕೂ ಜಾಸ್ತಿಯಿತ್ತು. ಕೆಲವು ಗದ್ದೆಗಳಿಗೆ ಎರಡನೇ ಉಳುಮೆ ಆಗಿರಲೇ ಇಲ್ಲ. ಇದೇ ಚಿಂತೆ ಗುಲಬ್‌ನನ್ನು ಕಾಡುತ್ತಿತ್ತು.

ಇನ್ನೂ ಮೂರು ನಾಲ್ಕು ಹೆಣ್ಣಾಳುಗಳನ್ನು ನಾಟಿ ಹಾಕಲು ನೇಮಿಸದಿದ್ದರೆ ಶ್ರಾವಣ

ಮಾಸದೊಳಗೆ ನಾಟಿ ಕೆಲಸವು ಪೂರೈಸುವುದಿಲ್ಲ ಅನ್ನಿಸುತ್ತಿತ್ತು. ಹೊಸದಾಗಿ ಮಾಡಿದ್ದ ಜಮೀನು ಹಾಗೆಯೇ ಪೂರ್ತಾ ಉಳಿದಿತ್ತು.

ಕೇವಲ ನಾಟಿ ಕೆಲಸಕ್ಕೆ ತಕ್ಕ ವ್ಯವಸ್ಥೆ ಮಾಡಿದರೆ ಕೆಲಸ ಮುಗಿದಂತೆ ಆಗೋದಿಲ್ಲ. ಜೋಡಿ ಎತ್ತುಗಳಂತೂ ಪುರಸತ್ತಾಗಿವೆ. ತಿಂಗಳು, ಒಂದೂವರೆ ತಿಂಗಳು ಯಾರನ್ನಾದರೂ ಉಳುಮೆ ಮಾಡುವುದಕ್ಕೆ ನೇಮಿಸಿಕೊಳ್ಳಬೇಕು. ಒಬ್ಬನೇ ಎಷ್ಟು ಕೆಲಸ ಅಂತ ಮಾಡೋದು

ಬೇರೆಯವರಿಂದ ಉಳುಮೆ ಮಾಡಿಸೋದು ನನಗೆ ಹಿಡಿಸುವುದಿಲ್ಲ. ಕೆಲವರಂತೂ ಉಳುಮೆ ಮಾಡಿದರೆ ಮಣ್ಣು ಸಡಿಲವಾಗಿ ಮೆದುವಾಗುವುದಿಲ್ಲ. ಆದರೆ ಒಬ್ಬನನ್ನಾದರೂ ಗೊತ್ತು ಮಾಡಿಕೊಳ್ಳದಿದ್ದರೆ ಕೆಲ್ಸ ನಡೆಯೋದಿಲ್ಲ.

ಗುಲಬ್‌ನ ಮನಸ್ಸನ್ನು ಅರಿಯಲು ಕಪಾಹಿ ಪ್ರಯತ್ನಿಸಿದಳು - "ನಿನಗೊಂದು ಮಾತು ಹೇಳ್ಬೇಕು ಅಂದು ಕೊಂಡಿದ್ದೆ."

"ಏನದು?"

"ಮೋಲೋಕಾನ ಮಗ-ತಿಖರ್-ನಮ್ಮ ಕಡೆ ಬರ್‍ತಾ ಹೋಗ್ತಾ ಇದ್ದಾನೆ. ಅವರ ಹೊಲಗದ್ದೆ ಕೆಲ್ಸ ಕೇವಲ ಹೆಸರಿಗೆ ಮಾತ್ರ. ಅವನನ್ನೇ ನೇಮಿಸಿಕೊಂಡರೆ ತಪ್ಪೇನು?"

ಗದ್ದೆ ಕಡೆ ನೋಡ್ತಾ ಗುಲಬ್ ಕುಳಿತೇ ಇದ್ದ. ಏನೂ ಉತ್ತರ ಕೊಡಲಿಲ್ಲ.

ಸ್ವಲ್ಪ ಹೊತ್ತಿನ ಅನಂತರ ಕಪಾಹಿ ಹೇಳಿದಳು- "ಇನ್ನೊಂದು ಮಾತು"

ಆ ಸಾರಿಯೂ ಗುಲಬ್ ಕುಳಿತೇ ಇದ್ದ. ಏನೂ ಉತ್ತರಿಸಿಲಿಲ್ಲ. ಕಪಾಹಿ ಮಾತಿನ ಕಡೆ ಗಮನ ಹರಿಸಿದ. "ನೀವೊಬ್ಬರೇ ಆರಂಬ-ಸಾರಂಬ, ಮನೆಮಠ ಎಲ್ಲದರ ಉಸ್ತುವಾರಿ ಎಷ್ಟು ಅಂತ ನೋಡಿಕೊಳ್ಳೋದು? ತಿಖರನಿಗೆ ತರಾಳನ್ನು ಕೊಟ್ಟು ಮನೆವಾಳ್ತನಕ್ಕೆ ಇರಿಸಿಕೊಂಡು ಅಳಿಯನನ್ನಾಗಿ ಮಾಡಿಕೊಳ್ಳೋಣ ಎಂದು ಯೋಚಿಸಿದ್ದೇನೆ. ಹುಡುಗ ಪೋಕರಿಯೇನೂ ಅಲ್ಲ, ಅಲ್ವೇ?"

"ಏನೆಂದೆ?"- ಗುಲಬ್ ಉದ್ರೇಕದಿಂದ ಅರಚಿದ.

ಆತನು ಅರಚಿದ್ದನ್ನು ಕೇಳಿ ಕಪಾಹಿ ಹೆದರಿದಳು. ಆದರೆ ಮಾತು ನಿಲ್ಲಿಸಲಿಲ್ಲ. ಆಕೆ ಹೇಳಿದಳು- "ನಾವು ತರಾಳನ್ನು ಚಿಕ್ಕ ಹುಡುಗಿ ಎಂದು ಭಾವಿಸಿದರೂ ಆಕೆ ಚಿಕ್ಕ ಹುಡುಗಿ ಅಲ್ಲ. ಈವೊತ್ತಿಲ್ಲದಿದ್ದರೆ ಎಂದೋ ಒಂದು ದಿನ ಯಾರಿಗಾದರೂ ಕೊಟ್ಟು ಅವಳ ಮದುವೆ ನೆರವೇರಿಸಬೇಕಲ್ವೇ? ತಿಖರನಿಗೆ ಕೊಡಲು ಇಷ್ಟವಿಲ್ಲದಿದ್ದರೆ ಬೇರೆ ಹುಡುಗನನ್ನು ನೋಡಿ. ನಿಮಗೆ ಈ ವಿಷಯದ ಕಡೆ ಗಮನವೇ ಇಲ್ಲ."

ಗುಲಬ್ ತತ್‌ಕ್ಷಣ ಎದ್ದು ಗುಡುಗಿದ- "ಮುಚ್ಚು ಬಾಯಿ. ಇಷ್ಟವಿದ್ದರೆ ಮನೆವಾಳ್ತನದ ಅಳಿಯನನ್ನು ನೀನೇ ಮಾಡಿಕೊ. ನನಗೆ ಗೊತ್ತಿಲ್ಲ ಅಂತ ತಿಳಿದುಕೊಂಡಿದ್ದೀಯೇನು? ಹಿಂದೆ ಒಂದು ಸಾರಿ ಅವಳನ್ನು ಸಫಿಯತ್‌ನ ಮಗ ಮೂಗನಿಗೆ ಕೊಟ್ಟು ಮದುವೆ ಮಾಡಬೇಕು ಅಂತ ನೀನು ಯೋಚಿಸಿರಲಿಲ್ವೇ? ಈ ಸಾರಿ ಮೋಲೋಕನ ಮಗ ತಿಖರ್ ನಿನ್ನ ಕಣ್ಣಿಗೆ ಬಿದ್ದ. ನೀವಿಬ್ಬರೂ ಹೊರಟು ಹೋಗಿ. ನಿಮ್ಮ ಇಷ್ಟಬಂದ ಕಡೆ ಹೋಗಿ. ಯಾರನ್ನು ಕಟ್ಟಿಕೊಡು ಹೋಗಬೇಕು ಅಂತ ಮನಸ್ಸಿದೆಯೋ ಅವರನ್ನು ಕಟ್ಟಿಕೊಂಡು ಹೋಗಿ. ಸಾಧ್ಯವಾದರೆ ನಾನೊಬ್ಬನೇ ಆರಂಬ-ಸಾರಂಬ ಮಾಡ್ತೀನಿ. ಆಗದೆ ಹೋದರೆ ಮಾಡೋದಿಲ್ಲ. ಅಳಿಯ ಬೇಸಾಯ ಮಾಡಿ ಬೆಳೆದ ಅನ್ನವನ್ನು ನಾನು ತಿನ್ನೋದಿಲ್ಲ."

ಆತ ಗದ್ದೆಗಿಳಿದ. ನೆರಳಿನಲ್ಲಿ ಆರಾಮವಾಗಿ ನಿಂತಿದ್ದ ಕೋಣನ ಬೆನ್ನಿನ ಮೇಲೆ ಜೋರಾಗಿ ಚಾವಟಿಯಿಂದ ಬಾರಿಸಿದ. ಕೋಣ ಗಾಬರಿಯಾಗಿ ಒಮ್ಮೆಲೇ ನೊಗ ಮತ್ತು ಹಲುಬೆಯನ್ನು ಎಳೆದುಕೊಂಡು ಓಡಲಾರಂಭಿಸಿತು.

ಆತನ ಹಿಂದೆಯೇ ಕಪಾಹಿ ಸಹ ಗದ್ದೆಗಿಳಿದಳು. ಅವಳು ಗುಲಚ್‌ನ ಬಳಿ ಬಂದಳು. ಅಂಜಿಕೆಯಿಂದಲೇ ಮೆಲ್ಲನೆ ಹೇಳಿದಳು. - "ನಾನೇನು ಅಂಥ ತಪ್ಪು ಮಾತಾಡಿದೆ? ಮನೆವಾಳ್ತನಕ್ಕೆ ಇರಿಸಿಕೊಂಡು ಅಳಿಯನನ್ನಾಗಿ ಮಾಡಿಕೋ ಅಂದ ಮಾತ್ರಕ್ಕೆ ಅವನು ಅಳಿಯನಾಗಿ ಬಿಟ್ಟನೇ? ಕೋಣನಿಗೆ ಯಾಕೆ ಹೊಡೆಯುತ್ತೀರಿ? ನನಗೇನೇ ಎರಡು ಬಾರಿಸಿ. ನಾನು ಒಂದು ವಿಷಯ ಪ್ರಸ್ತಾಪಿಸಿದೆ ಅಷ್ಟೆ. ಅದಕ್ಕೇನೆ ಇಷ್ಟು ಕೋಪ ಮಾಡಿಕೊಳ್ಳೋ ಅಗತ್ಯ ಏನು?"

ಇಬ್ಬರೂ ಗದ್ದೆಯಿಂದ ಮೌನವಾಗಿ ಮನೆಯ ಕಡೆ ಹೊರಟರು. ಗುಲಚ್‌ನ ಮುಖ ಖಿನ್ನವಾಗಿರುವುದನ್ನು ಕಪಾಹಿ ಗಮನಿಸಿದಳು. ಕ್ರೋಧ ಮತ್ತು ದುಃಖದಿಂದ ಆತ ಉತ್ತೇಜಿತನಾಗಿದ್ದ. ಆದರೆ ಏನೂ ಮಾತಾಡಲೇ ಇಲ್ಲ.

ಮೆಲುದನಿಯಲ್ಲಿ ಕಪಾಹಿ ಹೇಳಿದಳು - "ನನಗೆ ಗೊತ್ತು. ಇತ್ತೀಚೆಗೆ ನೀವು ಕಿರು ಗಣ್ಣಿನಿಂದಲಾದರೂ ನನ್ನ ಕಡೆ ನೋಡೋಕೆ ಇಷ್ಟಪಡೋದಿಲ್ಲ. ನಾನೇನು ಅಂಥ ತಪ್ಪು ಮಾಡಿದ್ದೀನಿ ಅನ್ನೋದು ನನಗೆ ತಿಳೀತಾ ಇಲ್ಲ."

ಆ ಸಾರಿಯೂ ಗುಲಚ್ ಏನೂ ಉತ್ತರಿಸಲಿಲ್ಲ. ಇಬ್ಬರೂ ಮೌನವಾಗಿ ಮನೆ ತಲುಪಿದರು.

ತರಾ ಸುಮ್ಮಸುಮ್ಮನೆ ಮಾತಾಡೋ ಹುಡುಗಿ ಅಲ್ಲ.

ಮನೆಯಲ್ಲಿ ಇಲ್ಲವೇನೋ ಎಂಬಂತೆ ಇರ್ತಾಳೆ.

ತರಾ ಊಟ ಬಡಿಸಿದಳು. ಇಬ್ಬರೂ ಮೌನವಾಗಿಯೇ ಊಟ ಮಾಡಿದರು. ಗುಲಚ್ ಸ್ನಾನ ಸಹ ಮಾಡಲಿಲ್ಲ. ಒಂದು ಚೆಂಬು ನೀರು ತೆಗೆದುಕೊಂಡು ಕೈಕಾಲಿನ ಕೆಸರನ್ನು ತೊಳೆದುಕೊಂಡ.

ವಾಸ್ತವಿಕತೆಯನ್ನು ಅರಿಯಲು ತರಾ ಒಮ್ಮೆ ಗುಲಚ್‌ನ ಮುಖವನ್ನೂ ಮತ್ತೊಮ್ಮೆ ಕಪಾಹಿಯ ಮುಖವನ್ನೂ ನೋಡಿದಳು. ಆಕೆಗೆ ಸ್ವಲ್ಪವೂ ಊಹಿಸಲಾಗಲಿಲ್ಲ. ಗದ್ದೆಯಲ್ಲಿ ಇಬ್ಬರಿಗೂ ಏನೋ ಮಾತುಕತೆ ನಡೆದಿರಬೇಕು ಎಂಬ ಸುಳಿವು ಮಾತ್ರ ಸಿಕ್ಕಿತು.

ಊಟ ಮುಗಿಸಿ ಗುಲಚ್ ಕೋಣನ ಮೈ ತೊಳೆದ. ಅಲ್ಲಿಂದ ಬಂದವನೇ ಹಾಸಿಗೆಯ ಮೇಲೆ ಉರುಳಿದ. ಕಪಾಹಿ ಸಹ ಅಂಗಳದಲ್ಲಿ ಒಂದು ಚಾಪೆ ಹಾಸಿಕೊಂಡು ನೆರಳಿನಲ್ಲಿ ವಿಶ್ರಮಿಸಿಕೊಂಡಳು.

ತರಾ ಯಾರನ್ನೂ ಏನು ವಿಷಯ ಅಂತ ಕೇಳಲಿಲ್ಲ.

ಸ್ವಲ್ಪ ಹೊತ್ತಾದ ಮೇಲೆ ಕಪಾಹಿ ಎದ್ದಳು. ಯಾರಿಗೂ ಏನೂ ಹೇಳದೆ ಬಾಯಿಗೊಂದಿಷ್ಟು ಅಡಕೆ-ಎಲೆ ಹಾಕಿಕೊಂಡು ಜಗಿಯುತ್ತಾ ಗದ್ದೆ ಕಡೆ ಹೊರಟಳು.

ಮನೆಯಿಂದ ಅರ್ಧ ಮೈಲಿ ದೂರದಲ್ಲಿ ಅವರ ಗದ್ದೆಯಿತ್ತು. ಪ್ರಖರ ಬಿಸಿಲಿನಲ್ಲೇ ಕಪಾಹಿ ನೇರವಾಗಿ ಗದ್ದೆಯ ಕಡೆ ಹೋದುದನ್ನು ತರಾ ಗಮನಿಸಿದಳು. ಸ್ವಲ್ಪ ಹೊತ್ತಾದ ಮೇಲೆ ಕಪಾಹಿ ಮಲುಕಾ ಬಿದಿರು ಮೆಳೆ ದಾಟಿ ಹೋದಳು. ಆ ಮೆಳೆ ಮರೆಯಾದುದರಿಂದ ಕಪಾಹಿ ಕಾಣಿಸಲಿಲ್ಲ.

ಪ್ರಖರ ಬಿಸಿಲು. ಸುತ್ತಲೂ ನಿಶ್ಶಬ್ದ; ನಿಸ್ಸಾರ ನೀರವತೆ. ನೀಲಾಕಾಶದ ಅಂತರಾಳದಿಂದ ಬೆಳ್ಳನೆಯ ಬಿಸಿಲು ಕರಗಿ ಕೆಳಗೆ ಬೀಳುತ್ತಿದೆ. ಮರದ ಎಲೆಗಳು ನಿಧಾನವಾಗಿ ಅಲುಗಾಡುತ್ತಿವೆ.

ಅಂಗಳಕ್ಕೆ ಬಂದು ತರಾ ಸುತ್ತಲೂ ನೋಡಿದಳು. ಯಾರೂ ಇರಲಿಲ್ಲ. ಸುತ್ತಲೂ ಸ್ತಬ್ಧ ವಾತಾವರಣ. ಕೇವಲ ಬಿಸಿಲಿದೆ. ಶ್ರಾವಣ ಮಾಸದ ಬಿತ್ತನೆಗೆ ಅಣಿಯಾಗಿರುವ ಜಮೀನಿದೆ. ಮತ್ತೇನೂ ಇಲ್ಲ. ಮತ್ತಾರೂ ಇಲ್ಲ.

ತರಾ ಒಳಗಡೆ ಹೋದಳು.

ಸ್ವಲ್ಪ ಹೊತ್ತು ನಿಂತಳು.

ಅನಂತರ ಆಕೆ ನೇರವಾಗಿ ಗುಲಬ್ ಮಲಗಿದ್ದ ಕೊಠಡಿಗೆ ಹೋಗಿ ಬರಿ ಮೈಯಲ್ಲಿದ್ದ ಆತನ ಬೆನ್ನಿನ ಮೇಲೆ ಕೈಯಿಟ್ಟಳು. ಗುಲಬ್ ಅತ್ತಿತ್ತ ಅಲುಗಾಡದೆ ಮೊದಲಿನಂತೆಯೇ ತಲೆದಿಂಬಿನಲ್ಲಿ ಮುಖ ಮರೆಮಾಡಿ ಹೊಟ್ಟೆ ದಬ್ಬಾಕಿಕೊಂಡೇ ಮಲಗಿದ್ದ.

ಗುಲಬ್‌ನ ಪಕ್ಕದಲ್ಲೇ ಹಾಸಿಗೆಯ ಮೇಲೆ ತರಾ ಕುಳಿತಳು. ಸ್ವಲ್ಪ ಬಗ್ಗಿ ಆತನ ಮುಖದ ಬಳಿ ಮುಖಮಾಡಿ ಪ್ರೀತಿಯಿಂದ ಕೇಳಿದಳು - "ಈವೊತ್ತು ಏನಾಯಿತು? ಮಾತು ಕತೆಯಂತೂ ಇಲ್ಲವೇ ಇಲ್ಲ. ಏನು ನಡೆಯಿತು ಎನ್ನೋದೆ ಗೊತ್ತಾಗುತ್ತಿಲ್ಲ."

ಗುಲಬ್ ಯಥಾಸ್ಥಿತಿ ಮಲಗಿದ್ದ.

ತರಾ ಆತನ ತಲೆಯನ್ನು ಎತ್ತಿ ಆತನ ಮುಖವನ್ನು ತನ್ನ ಕಡೆ ತಿರುಗಿಸಿಕೊಂಡಳು. ಗುಲಬ್‌ನ ಕಣ್ಣುಗಳು ಒದ್ದೆಯಾಗಿದ್ದುವು.

"ನಿಮ್ಮ ಮೈ ಇಷ್ಟು ಬಿಸಿಯಾಗಿದೆ? ಆರೋಗ್ಯ ಚೆನ್ನಾಗಿಲ್ವೇನು?"

ಗುಲಬ್ ಕಣ್ಣರಳಿಸಿ ತರಾ ಕಡೆ ನೋಡಿದ. ತರಾ ಸಹಾ ನೋಡಿದಳು.

ತಲೆ ಅಲ್ಲಾಡಿಸುತ್ತಾ ತರಾ ಕೇಳಿದಳು - "ಅಯ್ಯೋ, ಏನಾಗಿದೆ? ನನ್ನ ಜೊತೆಯಲ್ಲೂ ಹೇಳೋದಿಲ್ವೇ? ಹೋಗಲಿ ಬಿಡಿ."

ತರಾ ಹೊರಡಲುನುವಾದಳು.

ಮಗ್ಗುಲಾಗಿ ಮಲಗಿದ್ದ ಗುಲಬ್ ಅಂಗತ್ತಲಾಗಿ ಮಲಗಿಕೊಂಡ. ಏನೂ ಮಾತಾಡದೆ ಗಂಭೀರ ದೃಷ್ಟಿಯಿಂದ ತರಾಳ ಮುಖವನ್ನು ನೋಡಿದ.

"ನನ್ನ ಮುಖದಲ್ಲಿ ಏನು ನೋಡ್ತಾ ಇದ್ದೀರಿ?"

ತರಾಳ ಕೈಗಳನ್ನು ತನ್ನ ಕೈಯಲ್ಲಿಟ್ಟುಕೊಂಡು ಗುಲಬ್ ಹೇಳಿದ - "ನೀನು..... ನೀನು....... ನನ್ನನ್ನು ಬಿಟ್ಟು ಹೊರಟು ಹೋಗ್ತೀಯಾ?"

ನೀವು ಏನು ಹೇಳ್ತಾ ಇರೋದು ಅನ್ನೋದೆ ಗೊತ್ತಾಗುತ್ತಿಲ್ಲ; ನಾನು ನಿಮ್ಮನ್ನು ಬಿಟ್ಟು ಎಲ್ಲಿ ಹೋಗ್ತೀನಿ?

"ನಿನ್ನನ್ನು ಕರೆದುಕೊಂಡು ಹೋಗೋರು ಯಾರಾದರೂ ಸಿಕ್ಕಿದರೆ?"

ಈ ಮಾತನ್ನು ಕೇಳಿ ತರಾಳ ಮನಸ್ಸಿಗೆ ನೋವಾಯಿತು. ಅವಳ ದೃಷ್ಟಿ ಕೆಳ ಮುಖವಾಯಿತು.

ಸ್ವಲ್ಪ ಹೊತ್ತಾದ ಮೇಲೆ ಗುಲಬ್ ಹೇಳಿದ - "ನಿಮ್ಮ ಚಿಕ್ಕಮ್ಮ ನಿನಗೆ - ನಿನಗೊಂದು ಗಂಡು ಹುಡುಕಿ ಮನೆವಾಳ್ತನಕ್ಕೆ ಇರಿಸಿಕೊಂಡು ಅಳಿಯನನ್ನಾಗಿ ಮಾಡಿಕೊಳ್ಳಲು ಹವಣಿಸಿದ್ದಾಳೆ."

ಸ್ವಲ್ಪ ಹೊತ್ತಾದ ಮೇಲೆ ಸರಳ ಆದರೆ ಗಂಭೀರ ಮತ್ತು ವೇದನಾಪೂರ್ಣ ಕಣ್ಣುಗಳಿಂದ

ತರಾ ಗುಲಬ್‌ನ ಕಡೆ ನೋಡತೊಡಗಿದಳು. ಅನಂತರ ತನ್ನೆರಡು ಕೈಗಳಿಂದ ಗುಲಬ್‌ನ ಕತ್ತನ್ನು ಅಪ್ಪಿಕೊಂಡು ಆತನ ವಕ್ಷಸ್ಥಲದಲ್ಲಿ ತನ್ನ ಮುಖವನ್ನಿಟ್ಟು ಬಿಕ್ಕಿಬಿಕ್ಕಿ ಅಳಲಾರಂಭಿಸಿದಳು.

ತರಾಳನ್ನು ಗುಲಬ್ ತನ್ನೆರಡು ಕೈಗಳಿಂದ ಹಿಡಿದು ಎಳೆದು ಕೊಂಡ. ಪ್ರೀತಿಯಿಂದ ಆಕೆಯ ಬೆನ್ನು ಸವರುತ್ತಾ ಹೇಳಿದ - " ನನಗೆ ಮತ್ತ್ಯಾರೂ ಇಲ್ಲ. ನೀನು ಹೊರಟು ಹೋಗಲು ಬಯಸಿದರೆ ನಾನು ನಿನ್ನ ಮದುವೆ ಮಾಡ್ತೀನಿ. ಒಳ್ಳೆಯ ಮನೆಗೇನೇ ಕೊಡ್ತೀನಿ."

ಈ ಸಾರಿ ತರಾ ತನ್ನ ಅಂಗೈನಿಂದ ಗುಲಬ್‌ನ ಬಾಯಿ ಮುಚ್ಚಿದಳು. ಗುಲಬ್‌ನ ಗದ್ದದ ಕೆಳಭಾಗದಲ್ಲಿ ತನ್ನ ಮುಖವನ್ನಿಟ್ಟು ಬಿಕ್ಕಿಬಿಕ್ಕಿ ಅಳುತ್ತಾ ಅವನ ವಕ್ಷಸ್ಥಲದಲ್ಲೇ ಒರಗಿದ್ದಳು. ತರಾಳ ತಲೆಗೂದಲಿನ ಮಧ್ಯೆ ಬೆರಳಾಡಿಸಿ ನೇವರಿಸುತ್ತಾ ಗುಲಬ್ ಹೇಳಿದ - "ನೀನು ಯಾಕೆ ಅಳುತ್ತೀಯೆ? ನಡಿ, ಗದ್ದೆಯ ಕಡೆ ಹೋಗೋಣ; ನಿಮ್ಮ ಚಿಕ್ಕಮ್ಮ ಒಬ್ಬಳೇ ಮಾಡಿ ಮುಗಿಸಲಾರಳು. ನಾಟಿ ಹಾಕೋ ಜಮೀನು ಸಾಕಷ್ಟು ಉಳಿದಿದೆ."

ಗುಲಬ್‌ನ ಮಾತನ್ನು ಗಮನಿಸದೆಯೇ ತರಾ ಆತನನ್ನು ಹಾಗೆಯೇ ಹಿಡಿದುಕೊಂಡಿದ್ದಳು. ಆತನ ವಕ್ಷಸ್ಥಲದಲ್ಲಿ ತೂಕಡಿಸೋ ಚಿಕ್ಕಹುಡುಗಿಯಂತೆ ಒರಗಿದ್ದಳು.

ತರಾ ಅಳುತ್ತಿದ್ದಳು. ಆಕೆಯ ಕಣ್ಣುಗಳಿಂದ ಕಂಬನಿ ಟಪ್‌ಟಪ್ ಎಂದು ತೊಟ್ಟಿಕ್ಕುತ್ತಿದ್ದವು. ಹೊಸದಾಗಿ ಆಬಾದು ಮಾಡಿದ ಭೂಮಿಯ ಮಣ್ಣಿನ ವಾಸನೆಯ ಅನುಭವವಾಯಿತು. ಮಧ್ಯಾಹ್ನದ ಬೆಳ್ಳನೆಯ ಬಿಸಿಲು ರೋದಿಸುತ್ತಿತ್ತು.

# ಇಪ್ಪತ್ತೊಂಬತ್ತು

ಕೆಲಾಈಯನ್ನು ಸರಕಾರಿ ಆಸ್ಪತ್ರೆಯಲ್ಲಿ ಸೇರಿಸಿಕೊಳ್ಳಲು ಅವಕಾಶ ಸಿಕ್ಕಿದೆ ಎಂಬ ಸಮಾಚಾರವನ್ನು ಒಂದು ದಿನ ಚಂದ್ರನೇ ಗೋಲಾಘಾಟ್‌ನಿಂದ ತಂದ. ಚಂದ್ರನ ಒತ್ತಾಯ ಹಾಗೂ ಡಾಲಿಮ್‌ಗೆ ಬರುತ್ತಿದ್ದ ಡಾಕ್ಟರ್ ಸಹ ಕೆಲಾಈಯನ್ನು ಪರೀಕ್ಷಿಸಿ ಚಂದ್ರನ ಮಾತನ್ನು ಸಮರ್ಥಿಸಿದ ಕಾರಣ ಅವನಿಗೆ ಈ ಅವಕಾಶ ಸಿಕ್ಕಿತ್ತು.

ಭಾದ್ರಪದ ಮಾಸದಲ್ಲಿ ಸುಮಾರು ಹತ್ತನೇ ತಾರೀಖು ಒಬ್ಬ ರೋಗಿ ಆಸ್ಪತ್ರೆಯಿಂದ ಮನೆಗೆ ಹೋಗುತ್ತಾನೆ ; ಆಗ ಕೆಲಾಈಯನ್ನು ಸೇರಿಸಿಕೊಳ್ಳುತ್ತೇವೆ ಎಂದು ಡಾಕ್ಟರು ಹೇಳಿದ್ದರು. ಆ ದಿನಾಂಕದಂದು ರೋಗಿಯನ್ನು ಕರೆದುಕೊಂಡು ಹೋಗಿ ಆಸ್ಪತ್ರೆಗೆ ಸೇರಿಸಬೇಕಾಗುತ್ತೆ. ಇಲ್ಲದಿದ್ದರೆ ಬೇರೊಬ್ಬ ರೋಗಿಯನ್ನು ಸೇರಿಸಿಕೊಳ್ಳುತ್ತಾರೆ.

ಚಂದ್ರ ಮತ್ತು ಗುಲಬ್ ಇಬ್ಬರೂ ಹೋಗಿ ಈ ವಿಷಯವನ್ನು ಮೋಲೋಕಾ ಮತ್ತು ಚೇನಿಮಾಇಗೆ ತಿಳಿಸಿದರು. ಈ ವಿಷಯವನ್ನು ಕೇಳಿ ಚೇನಿಮಾಇಗೆ ಆನಂದವಾಯಿತು. ಆದರೆ ಕೆಲಾಈಯನ್ನು ಇಲ್ಲಿಂದ ಗೋಲಾಘಾಟ್‌ಗೆ ಕರೆದುಕೊಂಡು ಹೋಗುವ ಬಗೆ ಹೇಗೆ? ಎಂಬ ಚಿಂತೆಯೂ ಹತ್ತಿತ್ತು. ಖರ್ಚಿಗೆ ಹಣ ಜಮಾಯಿಸುವ ಬಗೆ ಹೇಗೆ? ಅವಳ ಹತ್ತಿರ ಒಂದು ಬಿಡಿಗಾಸೂ ಇಲ್ಲ.

ತನ್ನ ಜಮೀನಿನ ನಾಟಿ ಕೆಲಸ ಮುಗಿದ ಕೂಡಲೇ ತಿಖರ್ ಡಾಲಿಮ್‌ಗೆ ಹೋಗಿ ಯಾರ

ಮನೆಯಲ್ಲೇ ಇದ್ದುಕೊಂಡು ಉಳುಮೆ ಮಾಡುತ್ತಿದ್ದ. ನೇಮಕಾತಿ ಒಂದು ತಿಂಗಳು ಮಾತ್ರ, ಆಶ್ವೀಜ ಮಾಸದ ಆರಂಭದಲ್ಲೇ ಹಿಂದಿರುಗಿ ಬರ್ತಾನೆ. ಕಲಾಈಯ ವಿಷಯದ ಬಗ್ಗೆ ಮೋಲೋಕಾನಿಗೆ ತನ್ನ ಅಭಿಪ್ರಾಯ ಸೂಚಿಸಲು ಏನೂ ಹೊಳೆಯಲಿಲ್ಲ.

ಚಂದ್ರ ಹೇಳಿದ - "ಸರಕಾರಿ ಆಸ್ಪತ್ರೆಗೆ ಸೇರಿಸಿದರೂ ಕೈಯಲ್ಲಿ ಸ್ವಲ್ಪ ಹಣ ಇರಬೇಕಾಗುತ್ತೆ. ಡಾಕ್ಟರ್, ನರ್ಸ್ - ಎಲ್ಲರಿಗೂ ಏನಾದರೂ ಕೈಬೆಚ್ಚಗೆ ಮಾಡದೆ ಹೋದರೆ ಸರಿಯಾಗಿ ಚಿಕಿತ್ಸೆ ನೀಡೊಲ್ಲ. ಕನಿಷ್ಠ ಪಕ್ಷ ಹೋಗೋದು-ಬರೋದು ಎಲ್ಲಾ ಸೇರಿಸಿ ಸುಮಾರು ಫಿಫ್ಟಿ-ಸಿಕ್ಸ್‌ಟಿ (ಐವತ್ತು-ಅರವತ್ತು) ಬೇಕಾಗಿತ್ತೆ. ಅಂದರೆ ಮೂರಿಪ್ಪತ್ತು. ರೋಗಿಯ ಕೈಯಲ್ಲಿ ಸಹ ಒಂದೆರಡು ರೂಪಾಯಿ ಇರಬೇಕು. ನೋ ಮನಿ, ನೋ ಲೈಫ್. ಔಷಧಿ ಸಹ ಕೊಂಡುಕೊಳ್ಳಬೇಕಾಗುತ್ತೆ."

ಬಹಳ ದೈನ್ಯದಿಂದ ಚೇನಿಮಾಇ ಹೇಳಿದಳು - "ನನ್ನ ಕೈಯಲ್ಲಿ ಒಂದು ಬಿಡಿಗಾಸೂ ಇಲ್ಲ. ನಿಮಗೆ ಗೊತ್ತೇ ಇದೆ. ಮೂರಿಪ್ಪತ್ತು ಖರ್ಚು ಮಾಡೋ ಸಾಮರ್ಥ್ಯವಿದ್ದರೆ ಈ ಸ್ಥಿತಿಯಲ್ಲಿರುತ್ತಿರಲಿಲ್ಲ."

ಸ್ವಲ್ಪ ಯೋಚಿಸಿ ಗುಲಚ್ ಹೇಳಿದ - "ಖರ್ಚಿಗೆ ಏನಾದರೂ ವ್ಯವಸ್ಥೆ ಮಾಡೋದಾಗುತ್ತೆ. ನೀನು ಇಷ್ಟೊಂದು ಚಿಂತಿಸಬೇಡ. ಈ ವ್ಯಕ್ತಿಯನ್ನು ಹೇಗಾದರೂ ಮಾಡಿ ಗೋಲಾಘಾಟ್‌ಗೆ ಕರೆದುಕೊಂಡು ಹೋಗೋದೇ ಸದ್ಯದ ಪ್ರಶ್ನೆ."

ಚಂದ್ರ ಭರವಸೆ ನೀಡಿದ - "ಆ ವ್ಯವಸ್ಥೆ ನಾನು ಮಾಡ್ತೀನಿ. ರೋಗಿಯನ್ನು ಡಾಲಿಮ್ ತನಕ ಎತ್ತಿನ ಗಾಡಿಯಲ್ಲಿ ಕರೆದುಕೊಂಡು ಹೋಗಿ ಅಲ್ಲಿಂದ 'ದೊಡ್ಡ ಘಟ್ಟದ' ದವರೆಗೆ ದೋಣಿಯಲ್ಲಿ ಕರೆದುಕೊಂಡು ಹೋಗುವುದು ಮೇಲು ಅನಿಸುತ್ತದೆ. ಅಲ್ಲಿಂದ ಬಸ್ಸಿನಲ್ಲಿ ಹೋಗಬೇಕಾಗುತ್ತೆ. ಎತ್ತಿನ ಗಾಡಿಯಲ್ಲಿ ಇಲ್ಲಿಂದ ದೊಡ್ಡ ರಸ್ತೆ ತಲುಪುವ ತನಕ ಕಷ್ಟವಾಗುತ್ತೆ. ಅವನ ಶರೀರದಲ್ಲಿ ಮೂಳೆ-ಚರ್ಮ ಮಾತ್ರ ಉಳಿದಿದೆ."

ಚೇನಿಮಾಇ ಮತ್ತು ಗುಲಚ್ ಇಬ್ಬರೂ ಸಹ ಚಂದ್ರನ ಮಾತನ್ನು ಸಮರ್ಥಿಸಿದರು. ಆ ಪರಿಸ್ಥಿತಿಯಲ್ಲಿ ಅದೇ ಭಾದ್ರಪದ ಮಾಸ ದಿನಾಂಕ ಎಂಟರಂದು ಹೊರಡಲು ತೀರ್ಮಾನಿಸಿದರು. ಬಸೀರತ್‌ನ ದೊಡ್ಡ ದೋಣಿ ದೊಡ್ಡ ಘಟ್ಟದ ಕಡೆ ಬರುವುದರಲ್ಲಿದೆ. ಅವನಿಗೆ ಹೇಳಿ ಡಾಲಿಮ್ ಹಳ್ಳಿಯ ಘಟ್ಟದಿಂದ ದೊಡ್ಡ ಘಟ್ಟದವರೆಗೆ ಕಲಾಈಅನ್ನು ಆ ದೋಣಿಯಲ್ಲಿ ಕರೆದುಕೊಂಡು ಹೋಗಬಹುದು. ಬಸೀರತ್ ಅಂಥ ಕೆಟ್ಟ ಮನುಷ್ಯ ಅಲ್ಲ. ಅದಲ್ಲದೆ ಗುಲಚ್‌ನಿಗೆ ಅವನ ಪರಿಚಯವಿದೆ. ಚಂದ್ರ ಅವನ ಸ್ನೇಹಿತ.

ಭಾದ್ರಪದ ಮಾಸದ ಮೊದಲನೇ ವಾರದಲ್ಲೇ ತಾನಾಗಿಯೇ ಬಸೀರತ್ ಡಾಲಿಮ್ ಹಳ್ಳಿಗೆ ಬರುವವನಿದ್ದಾನೆ.

ಚಂದ್ರ ಹೇಳಿದ - "ಈ ಮಧ್ಯೆ ಆತ ಇತ್ತ ಕಡೆ ಬರೋದಿಲ್ಲಾ. ನೇಪಾಲಿ ಗ್ರಾಮದಲ್ಲಿ ದನಕರುಗಳಿಗೆ ರೋಗ ತಗುಲಿದೆ. ಅದರಿಂದಾಗಿ ಬಹಳ ಮಂದಿ ಬೇಸಾಯ ಮಾಡಲೇ ಇಲ್ಲ. ಆತ ಆ ಕಡೆ ಹೋಗಿ ಕೈಲಾದಷ್ಟು ಸಹಾಯ ಮಾಡ್ತಾನೆ."

ನಮ್ಮ ಹಳ್ಳಿಗೆ ಒಂದು ದನಗಳ ಆಸ್ಪತ್ರೆಯ ಅವಶ್ಯಕತೆಯಿದೆ. ಇಲ್ಲದಿದ್ದರೆ ಮನುಷ್ಯ ಹಾಗೂ ದನಕರುಗಳು ಯಾರೂ ಬದುಕುವಂತಿಲ್ಲ.

ಅನಂತರ ಚಂದ್ರ ಹೊರಟು ಹೋದ. ಆತ ಎಲ್ಲಾ ವ್ಯವಸ್ಥೆ ಮಾಡಿ ಸಮಯಕ್ಕೆ ಸರಿಯಾಗಿ

ಬರುತ್ತಾನೆ. ಹೋಗೋದು ಖಚಿತವಾದರೆ ಗುಲಬ್ ಮತ್ತು ಚೇನಿ ಉಳಿದ ಎಲ್ಲ ವ್ಯವಸ್ಥೆ ಮಾಡುತ್ತಾರೆ.

ಚಂದ್ರ ಹೊರಟು ಹೋದ ಮೇಲೆ ಆ ವಿಷಯದ ಬಗ್ಗೆ ಗುಲಬ್ ಮತ್ತು ಚೇನಿ ಇನ್ನೂ ಸ್ವಲ್ಪ ಪರ್ಯಾಲೋಚನೆ ಮಾಡಿದರು. ಮೊದಲನೆಯದಾಗಿ ಹಣ ಬೇಕೇ ಬೇಕು. ಹಣದ ವ್ಯವಸ್ಥೆ ಆದರೆ ಬಾಕಿ ವ್ಯವಸ್ಥೆ ಚಂದ್ರ ನೋಡಿಕೊಳ್ಳುತ್ತಾನೆ. ಚಿಂತಿಸೋ ಅಗತ್ಯವಿಲ್ಲ. ಆದರೆ ಐವತ್ತು ಅಥವಾ ಅರವತ್ತು ರೂಪಾಯಿ ಎಲ್ಲಿಂದ ತರೋದು?

ಹಣದ ವಿಷಯದ ಬಗ್ಗೆ ಚಂದ್ರನ ಎದುರಿನಲ್ಲಿ ಗುಲಬ್ ಮಾತುಕೊಟ್ಟಿದ್ದರೂ ಸಹ ಆತನೂ ಯೋಚಿಸತೊಡಗಿದ. ಮೂರಿಪ್ಪತ್ತು ರೂಪಾಯಿ ಬೇಕು ಅಂತ ಹೇಳಿದ್ದರೂ ಒಂದು ನೂರು ರೂಪಾಯಿಯ ಆವಶ್ಯಕತೆಯಿದೆ. ಅಷ್ಟುಬೇಗ, ಅಷ್ಟೊಂದು ಹಣ ಆತ ಎಲ್ಲಿಂದ ತಂದು ಚೇನಿಮಾಇಗೆ ಕೊಡುತ್ತಾನೆ?

ಜಮೀನು ಕೊಂಡುಕೊಳ್ಳಲು ಆತ ಸ್ವಲ್ಪ ಹಣ ಪ್ರತ್ಯೇಕವಾಗಿಟ್ಟಿದ್ದ. ಅಷ್ಟು ಹಣ ಮಾತ್ರ ಈಗ ಅವನಲ್ಲಿತ್ತು.

ಆದಾಗ್ಯೂ ಆಶ್ವಾಸನೆ ನೀಡುತ್ತಾ ಗುಲಬ್‌ನು ಚೇನಿಮಾಇಗೆ ಹೇಳಿದ - "ಎಲ್ಲಾ ವ್ಯವಸ್ಥೆ ಆಗುತ್ತೆ. ನೀನು ಯೋಚಿಸೋ ಅಗತ್ಯವಿಲ್ಲ."

ಚೇನಿ ಹೇಳಿದಳು - "ಅವರಿಗೆ ಬಟ್ಟೆಬರೆ ಇಲ್ಲ. ಮನೆಯಲ್ಲಿ ಹೇಗೋ ಕಾಲ ಕಳೆದು ಹೋಗುತ್ತೆ. ಅದು ಪಟ್ಟಣ. ಒಂದು ಜೊತೆ ಬಟ್ಟೆ ಇಲ್ಲದಿದ್ದರೆ ಹೇಗೆ ಆಗುತ್ತೆ. ಸ್ವಲ್ಪ ಬಟ್ಟೆ ಹೊಲಿಸೋಕೆ ಏನಾದರೂ ವ್ಯವಸ್ಥೆ ಮಾಡಬೇಕಾಗುತ್ತೆ."

ಆಗ ಗುಲಬ್‌ನು ಚೇನಿಮಾಇಯ ಮುಖವನ್ನು ನೋಡಿದ.

ತನ್ನ ಗಂಡ ಗೋಲಾಘಾಟಿಗೆ ಹೋದರೆ ಗುಣಮುಖವಾಗುತ್ತಾನೆಂದು ಆಕೆಗೆ ಬಹುಶಃ ಪೂರ್ಣ ಭರವಸೆ ಇದೆ. ಅವಳ ದಾಂಪತ್ಯ ಜೀವನ ಸುಖಮಯವಾಗುತ್ತೆ. ಇಲ್ಲದಿದ್ದರೆ ಇಂಥ ಮರಣಾವಸ್ಥೆಯಲ್ಲಿರುವ ಈ ವ್ಯಕ್ತಿಯ ಬಗ್ಗೆ ಆಕೆ ಇಷ್ಟೊಂದು ಕಷ್ಟ ಪಡೋ ಅಗತ್ಯ ಏನಿತ್ತು.?

"ಹಣ ಜೊತೆಯಾದರೆ ಹೇಗೋ ಒಂದಿಷ್ಟು ತರ್‍ತೀನಿ."

"ಬರೋದಿಕ್ಕೆ ನನಗೆ ಬಿಡುವಿಲ್ಲ. ಬರೋದಾದರೆ ನನ್ನ ಜೊತೆಯಲ್ಲೇ ಬಾ. ಈಗಲೇ ಹಣ ಜೊತೆ ಮಾಡ್ಕೊಂಡು ಬಾ."

ಗುಲಬ್‌ನ ಮನೆಯಲ್ಲಿ ಮಾತುಕತೆ ಮುಗಿಸಿಕೊಂಡು ತಿಂಡಿ ತಿಂದು ಹಿಂದಿರುಗುವ ಹೊತ್ತಿಗೆ ಸಂಜೆಯಾಗಿತ್ತು.

ಚೇನಿಮಾಇಯ ಜೊತೆಯಲ್ಲಿ ಗುಲಬ್ ಸ್ವಲ್ಪ ದೂರಬಂದು ಅವಳನ್ನು ಕಳುಹಿಸಿ ಕೊಡಬೇಕಾಯಿತು.

ದಾರಿಯಲ್ಲಿ ಚೇನಮಾಇ ಹೇಳಿದಳು - "ನಿಮ್ಮ ಮನೆ ಸಹ ನಮ್ಮ ಮನೆಯಂತೆ ಬಿಕೋ ಅನ್ನಿಸುತ್ತೆ. ಮನೆಯಲ್ಲಿ ಮಕ್ಕಳು ಮರಿ ಇಲ್ಲದಿದ್ದರೆ ಎಷ್ಟೊಂದು ಬಿಕೋ ಅನ್ನಿಸುತ್ತೆ?"

"ಅಹುದು" - ಗುಲಬ್ ಉತ್ತರಿಸಿದ.

"ತರಾ ಇದ್ದಾಳೆ. ಆದುದರಿಂದ ಸ್ವಲ್ಪ ಜೀವಕಳೆಯಿದೆ. ಅವಳು ಮದುವೆಯಾಗಿ ಹೊರಟು ಹೋದರೆ ಮನೆ ಒಳಗಡೆ ಕಾಲಿಡಲು ಇಷ್ಟ ಆಗೋದಿಲ್ಲಾ."

ಗುಲಬ್ ಬೆಕ್ಕಸಬೆರಗಾದ. ಚೇನಿಮಾಇ ಸಹ ತರಾಳ ಮದುವೆ ವಿಚಾರ ಆಲೋಚಿಸುತ್ತಿದ್ದಾಳೆ. ಮೌನವಾಗಿಯೇ ಮುಂದೆ ಮುಂದೆ ಹೋಗುತ್ತಿದ್ದ. ಚೇನಿಮಾಇ ಆತನ ಹಿಂದೆ ಹೋಗುತ್ತಿದ್ದಳು.

"ಒಂದು ಮಾತು ಮಾತ್ರ ತಿಳಿಸಬೇಕು ಅಂತ ಅನ್ನಿಸಿದರೂ ಹೇಳೋಕೆ ಅವಕಾಶವೇ ಸಿಕ್ಕಲಿಲ್ಲ. ಅಂದಹಾಗೆ,........"

"ಏನು?"

"ತರಾ ಮದುವೆ ಮಾಡಿಕೊಳ್ಳಲು ಯಾರಾದರೂ ಹೇಳಿದ್ದಾರೆಯೇ? ಯಾರೂ ಬಂದು ಕೇಳದಿದ್ದರೆ ನಮ್ಮ ಶಿಖರನಿಗೆ ಕೊಟ್ಟು ಮದುವೆ ಮಾಡಿ."

ಇದ್ದಕ್ಕಿದ್ದಂತೆ ಗುಲಬ್ ಹಿಂದಕ್ಕೆ ತಿರುಗಿ ನೋಡಿದ.

ಹಿಂದೆ ಬರುತ್ತಿದ್ದ ಚೇನಿ ಕಕ್ಕಾಬಿಕ್ಕಿಯಾಗಿ ಗುಲಬ್‌ನ ಬಳಿ ಬಂದು ನಿಂತಳು.

ಕಠೋರ ಸ್ವರದಲ್ಲಿ ಗುಲಬ್ ಹೇಳಿದ - "ಶಿಖರನ ಬಗ್ಗೆ ಪ್ರೀತಿಯಿದ್ದರೆ ನೀನೇ ಯಾಕೆ ಅವನನ್ನು ಕಟ್ಟಿಕೊಳ್ಳಬಾರದು. ಸಾಯೋ ಗಂಡನ ಕಟ್ಕೊಂಡು ಯಾಕೆ ಒದ್ದಾಡುತ್ತೀಯೇ?"

"ಏನೆಂದೆ?" - ಅದೇ ಕಠೋರ ಸ್ವರದಲ್ಲಿ ಚೇನಿ ಉತ್ತರಿಸಿದಳು - "ನೀನು. ನೀನೂ ಇಂಥ ಮಾತು ಹೇಳ್ತೀಯಾ; ಹೋಗು. ನನ್ನನ್ನು ಮನೆಯವರೆಗೆ ಬಿಡೋ ಅಗತ್ಯವಿಲ್ಲ. ಒಬ್ಬಳೇ ಹೋಗಬಲ್ಲೆ. ತಗೋ. ನಿನ್ನ ಹಣ ಸಹ ತಗೊಂಡು ಹೋಗು...... ನನಗೆ ಬೇಡ. ಸತ್ತರೆ ಸಾಯಲಿ. ಭಿಕ್ಷೆ ಬೇಡಿ ಬದುಕಿಸೋ ಅಗತ್ಯವಿಲ್ಲ."

ಚೇನಿ ಹಣವನ್ನು ಗುಲಬ್‌ನಿಗೆ ಕೊಡಲು ಪ್ರಯತ್ನಿಸಿದಳು.

ಸಂಜೆ ಹೊತ್ತು. ದಾರಿಯಲ್ಲೇ ಜಗಳ ಶುರುವಾಯಿತು.

ಭಯದಿಂದ ಇಬ್ಬರಿಗೂ ನಡುಕ ಹತ್ತಿತ್ತು.

ಇದ್ದಕ್ಕಿದ್ದಂತೆ ತನ್ನ ಕಡೆಗೆ ನೀಡಿದ್ದ ಚೇನಿಯ ಕೈಗಳನ್ನು ಹಿಡಿದುಕೊಂಡು ಗುಲಬ್ ಆಕೆಯನ್ನು ತನ್ನೆಡೆಗೆ ಎಳೆದುಕೊಂಡ. ಚೇನಿ ಸಹ ಆತನ ವಕ್ಷಸ್ಥಲದಲ್ಲಿ ಒರಗಿ ನಿಂತಳು. ಗುಲಬ್ ನಿಧಾನವಾಗಿ ಹೇಳಿದ - "ತರಾ ಮದುವೆ ಮಾತು ಎತ್ತಬೇಡ. ಚೇನಿ! ಆಕೆಯೇ ನನ್ನ ಸರ್ವಸ್ವ. ಮಕ್ಕಳುಮರಿ ಇಲ್ಲ. ಅವಳಿಗೆ ಮದುವೆ ಮಾಡಿ ಕಳುಹಿಸಿಬಿಟ್ಟರೆ ನಾನು ಮನೆಯಲ್ಲಿ ಹೇಗೆ ಇರಲಿ ?"

ಅಭಿಮಾನ ಹಾಗೂ ಆಕ್ಷೇಪಣೆ ಸ್ವರದಿಂದ ಚೇನಿ ಹೇಳಿದಳು - "ನೀನು ಇಂಥ ಮಾತಾಡೋದೇ? ನಾನೇನು ಮಾಡಲಿ? ನಾನು ಮತ್ತೊಬ್ಬನ ಮಡದಿ. ಪ್ರೀತಿಸಲು ಮನಸ್ಸಿದ್ದರೂ ಬಹಿರಂಗವಾಗಿ ಪ್ರೀತಿಸಲಾರೆ."

ಮಗುವಿನಂತೆ ಗುಲಬ್ ಹೇಳಿದ - "ತರಾಳಿಗೆ ನನ್ನ ಜೊತೆಯಲ್ಲಿ ತುಂಬಾ ಸ್ನೇಹ. ಅವಳಿಲ್ಲದೆ ನಾನಿರಲಾರೆ. ನಿನ್ನ ಮನಸ್ಸಿಗೆ ನೋವಾಯಿತೇ?"

"ಯಾಕೆ ಆಗೋಲ್ಲ? ಒಮ್ಮೆ ಓಡಿ ಹೋಗಿದ್ದೆ. ರೋಗಿಷ್ಠನನ್ನು ಮದುವೆಯಾಗಬೇಕಾಯಿತು. ಸ್ವಲ್ಪ ಪ್ರಯತ್ನ ಮಾಡಿ ನೋಡ್ತೀನಿ. ಗುಣವಾದರೆ ಮೇಲು. ಇಲ್ಲದಿದ್ದರೆ ಸಾಯೋದಿದ್ದರೆ ಸಾಯುತ್ತಾನೆ. ನೀನಿದ್ದೀಯೆ. ಸಾಧ್ಯವಾದರೆ ಸ್ನೇಹ ಬೆಳಸ್ತೀನಿ. ಇಲ್ಲದಿದ್ದರೆ ಎಲ್ಲಿಗಾದರೂ ಹೊರಟು ಹೋಗ್ತೀನಿ. ಆದರೆ ನನ್ನ ಗಂಡ ಬದುಕಿರೋವರೆಗೆ ಇನ್ನೊಬ್ಬರನ್ನು ಕಣ್ಣೆತ್ತಿ ನೋಡಲ್ಲ."

ಇನ್ನೂ ಸ್ವಲ್ಪ ಹೊತ್ತು ಗುಲಬ್, ಚೇನಿಮಾಇಯನ್ನು ಹಾಗೆಯೇ ಎದೆಗೆ ಅಪ್ಪಿಕೊಂಡಿದ್ದ. ದಾಂಪತ್ಯ ಜೀವನದ ಸುಖದಿಂದ ವಂಚಿತಳಾದರೂ ಚೇನಿಮಾಇ ರೋಗಿಷ್ಠ ಗಂಡನನ್ನು ಉಳಿಸಿಕೊಳ್ಳಲು ಪ್ರಾರ್ಥನೆ ಮಾಡುತ್ತಿದ್ದಾಳೆ. ಈ ವಿಷಯ ಗುಲಬ್‌ನಿಗೆ ತುಂಬಾ ಮೆಚ್ಚುಗೆಯಾಯಿತು.

ಆತ ನಿಧಾನವಾಗಿ ಚೇನಿಯನ್ನು ದೂರ ಸರಿಸಲು ಪ್ರಯತ್ನಿಸಿದ.

ಆದರೆ ಚೇನಿ ಆತನಿಂದ ದೂರ ಸರಿಯಲಿಲ್ಲ. ಆತನ ಭುಜದ ಮೇಲೆ ಕೈಯಿಟ್ಟು ಆತನ ಮುಖವನ್ನು ದೃಷ್ಟಿಸಿ ನೋಡುತ್ತಾ ಹೇಳಿದಳು - "ನಿನ್ನ ಬಗ್ಗೆ ನನಗಿದ್ದ ಸ್ನೇಹ ಕೊಂಚವೂ ಕಡಿಮೆಯಾಗಲಿಲ್ಲ. ಕಪಾಹಿ ಅಪಾರ್ಥ ಮಾಡಿಕೊಂಡಾಳು ಎಂಬ ಭಯ ಮಾತ್ರ ಕಾಡುತ್ತದೆ."

ಚೇನಿ ಇಷ್ಟನ್ನು ಹೇಳಿ ಗುಲಬ್‌ನ ಮುಖವನ್ನು ತನ್ನೆಡೆಗೆ ಎಳೆದುಕೊಂಡು ಚುಂಬಿಸಿದಳು. ಮತ್ತೆ ಗುಲಬ್ ಅವಳನ್ನು ಅಪ್ಪಿಕೊಳ್ಳಬಯಸಿದ. ಆದರೆ ಚೇನಿ ದೂರ ಸರಿದು ನಿಂತು ಹೇಳಿದಳು - "ಯಾರಾದರೂ ಬಂದರೆ? ಸರಿ, ಹೋಗೋಣ."

ಇಬ್ಬರೂ ಹೊರಟರು.

ಸ್ವಲ್ಪ ಹೊತ್ತು ಮೌನವಾಗಿದ್ದು ಅನಂತರ ಚೇನಿ ಹೇಳಿದಳು- "ಕೈಯಲ್ಲಿ ಕಾಸಿದ್ದರೆ ನಾನೂ ಗೋಲಾಘಾಟಿಗೆ ಬರಬಹುದಾಗಿತ್ತು. ನಗರವನ್ನು ನೋಡೋ ಅವಕಾಶ ಸಿಗುತ್ತಿತ್ತು ಮತ್ತು ನಮ್ಮ ಮನೆಯವರಿಗಾಗಿ ಏನು ವ್ಯವಸ್ಥೆಯಾಯಿತು ಎಂಬುದನ್ನು ತಿಳಿದುಕೊಳ್ಳಬಹುದಾಗಿತ್ತು."

ಗುಲಬ್ ಹೇಳಿದ - "ನಾನೂ ಊರು ಬಿಟ್ಟು ಹೊರಗಡೆ ಯಾವಾಗಲೂ ಹೋಗಿಲ್ಲ. ಒಮ್ಮೆ ಹೋಗಬೇಕು ಅಂತ ಇಷ್ಟ ಇತ್ತು. ನೋಡೋಣ. ಬಹುಶಃ ಕೇಲಾಈಯ ಜೊತೆಯಲ್ಲೇ ಹೋಗಬೇಕಾಗುತ್ತೇನೋ? ನೀನೂ ಬರ್‍ತೀಯೇನು?"

"ಎಲ್ಲ ಹಣಕಾಸಿನ ಮೇಲೆ ನಿಂತಿದೆ. ಹೋಗ್ಬೇಕು ಅನ್ನಿಸಿದರೆ ಹೋಗೋಕೆ ಆಗುತ್ತದೆಯೇ? ನೀನು ಕರೆದುಕೊಂಡು ಹೋಗೋದಾದರೆ ಬರ್‍ತೀನಿ."

"ಸರಿ, ನಾನು ಯೋಚ್ನೆ ಮಾಡಿ ನೋಡ್ತೀನಿ. ನನಗೂ ಕೆಲ್ಸ ಇದೆ. ಡಾಲಿಮ್‌ನಲ್ಲಿರುವ ಜಮೀನನ್ನು ಮಾರಾಟ ಮಾಡಬೇಕೆಂದಿದ್ದೇನೆ. ಮಾರಾಟ ಮಾಡೋದು ಖಚಿತವಾದರೆ ರಿಜಿಸ್ಟರ್ ಮಾಡಿಸೋಕೆ ಗೋಲಾಘಾಟಿಗೆ ಹೋಗಬೇಕಾಗುತ್ತೆ ಅಂತ ಹೇಳ್ತಿದ್ದಾರೆ. ಯಾರಿಗೆ ಗೊತ್ತು, ಎರಡು ಕೆಲ್ಸವೂ ಒಂದೇ ಸಾರಿಗೆ ಆಗಬಹುದು."

ಇನ್ನೂ ಅನೇಕ ವಿಷಯಗಳನ್ನು ಕುರಿತು ಚರ್ಚೆ ಮಾಡಿ ರಾತ್ರಿ ಬಹಳ ಹೊತ್ತು ಮೀರಿದ ಮೇಲೆ ಗುಲಬ್ ಮನೆಗೆ ಹಿಂತಿರುಗಿದ.

# ಮೂವತ್ತು

ಏನೇನೋ ಕೆಲಸ ಹಚ್ಚಿಕೊಂಡು ಒಮ್ಮೆ ಗುಲಬ್ ಹೇಗೋ ಡಾಲಿಮ್‌ಗೆ ಹೋದ. ಆತನ ಮನೆಯ ಹತ್ತಿರದ ಎಲ್ಲ ಜಮೀನಿನ ನಾಟಿ ಆಗಿತ್ತು. ಆದರೆ ಹೊಸದಾಗಿ ಮಾಡಿದ ಇಡೀ

ಜಮೀನು ಹಾಗೆಯೇ ಉಳಿದಿತ್ತು. ಸರಿಯಾಗಿ ನೀರು ಬತ್ತಿರಲಿಲ್ಲ. ಈ ಜಮೀನಿಗೆ ಆಶ್ವೀಜ ಮಾಸದ ಆರಂಭದಲ್ಲೇ ನಾಟಿ ಹಾಕಿಸುತ್ತಾನೆ. ಅಂಥ ತರಾತುರಿ ಏನೂ ಇಲ್ಲ. ತರಾತುರಿ ಮಾಡಿದರೆ ಏನೂ ಪ್ರಯೋಜನವಿಲ್ಲ.

ಜಮೀನು ಪಾಳು ಬಿದ್ದಿದ್ದರೂ ಶಿಖರನನ್ನು ಗುಲಬ್ ತನ್ನ ಉಳುಮೆಯ ಕೆಲಸಕ್ಕೆ ನೇಮಿಸಿಕೊಳ್ಳುವುದಿಲ್ಲ. ಇದು ಖಚಿತ. ಕಪಾಹಿ ಮತ್ತು ಚೇನಿ ಇಬ್ಬರೂ ವಿಷಯ ತಿಳಿಸಿದ ಮೇಲೆ ಶಿಖರನನ್ನು ಮನೆಗೆ ಬರಲು ಅವಕಾಶ ಒದಗಿಸಿದರೆ ತಪ್ಪಾಗುತ್ತೆ. ತರಾಳ ಮೇಲೆ ಶಿಖರ್ ಕಣ್ಣು ಹಾಕಿದರೆ ಗುಲಬ್‌ನಿಗೆ ಸಹಿಸೋಕಾಗೊಲ್ಲ.

ಭೀಮನನ್ನು ವಿಚಾರಿಸಿ ಒಂದು ತಿಂಗಳ ಮಟ್ಟಿಗೆ ಒಬ್ಬ ನೇಪಾಲಿಯ ಹುಡುಗನನ್ನು ಗೊತ್ತು ಮಾಡಿಕೊಂಡರೆ ಆತ ಹೇಗೋ ಆರಂಬದ ಕೆಲಸ ಪೂರೈಸುತ್ತಾನೆ. ಆರಂಬದ ಕೆಲಸ ಮುಗಿದ ಮೇಲೆ ದನಕರುಗಳನ್ನು ನೋಡಿಕೊಳ್ಳಲು ಭೀಮನನ್ನೇ ನೇಮಿಸುತ್ತಾನೆ.

ಎರಡನೇ ವಿಷಯ - ತನ್ನ ಜಮೀನು ಮಾರಾಟದ ವಿಷಯವನ್ನು ಕುರಿತು ಅಣ್ಣನೊಡನೆ ಕೊನೆಯಲ್ಲಿ ಮಾತನಾಡುತ್ತಾನೆ. ಒಂದು ವೇಳೆ ಅಣ್ಣ ಆಗಲೇ ಹೆಚ್ಚು ಹಣ ಕೊಡೋದಾದರೆ ಆತ ಟೌನಿಗೆ ಹೋಗಿ ಅವನ ಹೆಸರಿಗೆ ಬರೆದುಕೊಡುತ್ತಾನೆ. ಈ ಕೆಲಸಕ್ಕಾಗಿ ಆತ ಪದೇಪದೇ ಡಾಲಿಮ್‌ಗೆ ಹೋಗೋಕೆ ಆಗೋಲ್ಲ. ಆತನಿಗೆ ಬೇರೆ ಕೆಲಸ ಇದೆ.

ಮೂರನೇ ವಿಷಯ - ಆತ ಹೇಗಾದರೂ ಮಾಡಿ ಚಂದ್ರನನ್ನು ಭೇಟಿ ಮಾಡುತ್ತಾನೆ. ಶ್ರಾವಣ ಮಾಸ ಮುಗಿಯುವುದರಲ್ಲಿದೆ. ಕೇಲಾಈಯನ್ನು ಕರೆದುಕೊಂಡು ಹೋಗುವುದಾದರೆ ಜೊತೆಯಲ್ಲಿ ಚೇನಿ ಮತ್ತು ಆತ ಹೋಗಬೇಕಾದರೆ ಚಂದ್ರನೊಡನೆ ಮಾತನಾಡಿ ಎಲ್ಲ ವ್ಯವಸ್ಥೆ ಮಾಡಬೇಕಾದುತ್ತೆ. ಜಾಸ್ತಿ ದಿನ ಇಲ್ಲ.

ನಾಲ್ಕನೇಯ ವಿಷಯ : ಅವಕಾಶ ಸಿಕ್ಕಿದರೆ ಬಸೀರತ್ ಜೊತೆಯಲ್ಲಿ ಈ ವಿಷಯ ಮತ್ತು ಬೇರೆ ವಿಷಯದ ಬಗ್ಗೆ ಸಹ ಸಮಾಲೋಚನೆ ಮಾಡಬೇಕು.

ಉಳಿದ ಕೆಲಸ ಚಂದ್ರನ ಇಷ್ಟದಂತೆ ಆಗಲಿ.

ಚಂದ್ರನನ್ನು ಹುಡುಕಿಕೊಂಡು ಸಂಜೆಯ ವೇಳೆಗೆ ಅವನ ಮನೆಗೆ ಹೋದ.

ಚಂದ್ರನಿಗೆ ಜ್ವರ. ಮಲಗಿದ್ದ.

"ನೀನು ಇಷ್ಟು ಹೊತ್ತಿನಲ್ಲಿ ಬಂದೆ. ಗುಲಬ್?"

"ಮಧ್ಯಾಹ್ನದ ಮೇಲೆ ಹೊರಟು ಬಂದೆ. ಎಷ್ಟು ದಿನಗಳಿಂದ ಜ್ವರ ಇದೆ?"

"ಈವೊತ್ತಿಗೆ ಎರಡು ದಿನ ಆಯ್ತು. ಉಷ್ಣಾಂಶ ಜಾಸ್ತಿ. ನೆನ್ನೆಯಂತೂ ತುಂಬಾ ಜ್ವರವಿತ್ತು. ಸುಮಾರು ಹಂಡ್ರೆಡ್ ಡಿಗ್ರಿ ಇತ್ತು."

"ಏನಾದರೂ ಕೆಲ್ಸ ಹಚ್ಚಿಕೊಂಡಿದ್ದೆಯೋ?"

ಚಂದ್ರ ಮಲಗಿದ್ದವನು ಎದ್ದು ಹಾಸಿಗೆಯ ಮೇಲೆಯೇ ಕುಳಿತ.

"ಒಂದು ಸ್ಟೇಜ್ ಕಟ್ಟಿಸೋ ಕೆಲ್ಸಕ್ಕೆ ಕೈ ಹಾಕಿದ್ದೇನೆ."

"ಸ್ಟೇಜ್? ಅಂದರೇನು?"

"ಥಿಯೇಟರ್. ಸ್ಟೇಜ್! ಟೌನಿನಲ್ಲಿ ದೊಡ್ಡದೊಡ್ಡ ಸ್ಟೇಜುಗಳಿವೆ. ಸುಂದರವಾದ ಥಿಯೇಟರ್ ಆಗುತ್ತೆ. ಬೇರೆ ಹಳ್ಳಿಗಳಲ್ಲೂ ಸ್ಟೇಜ್ ಇದೆ. ನಮ್ಮಲ್ಲಿಯೂ ಒಂದು ಇರಬೇಕು."

ಅರ್ಥವಾಗದಿದ್ದರೂ ಗುಲಬ್ ಹೇಳಿದ - "ಅಂಥದು ಬೇಕು."

"ನಮ್ಮ ಹಳ್ಳಿಯವರಿಗೂ ಇದು ಇಷ್ಟವಿದೆ. ಮರ-ಬಿದಿರು ಕೂಡಿ ಹಾಕ್ತಿದ್ದಾರೆ."

"ಆ ಕೆಲ್ಸಕಾರ್ಯಕ್ಕೆ ಮಳೆಗಾಲ ಮುಗಿದ ಮೇಲೆ ಕೈಹಾಕಬೇಕಾಗಿತ್ತು."

"ಅಯ್ಯೋ, ಕೆಲ್ಸ ಮಾಡಿಸೋದು ಇನ್ನಾವ ಕಾಲದಲ್ಲಿ? ಈಗಲಿಂದಲೇ ಬಿದಿರು-ಮರ ಮುಂತಾದುವುಗಳನ್ನು ಜೊತೆ ಮಾಡಿಟ್ಟರೆ ವಿಂಟರ್‌ನಲ್ಲಿ ಸ್ಟೇಜ್ ಕಟ್ಟೋಕೆ ಸುಲಭ ಆಗುತ್ತೆ. ಒಳ್ಳೆಯದು, ನಿನ್ನ ಆರಂಬ-ಸಾರಂಬ ಹೇಗೆ ನಡೀತಾ ಇದೆ?"

ಗುಲಬ್ ತನ್ನ ವ್ಯವಸಾಯದ ವಿಷಯ ತಿಳಿಸಿದ. ಅನಂತರ ತಾನು ಬಂದ ಉದ್ದೇಶ ಸಹ ತಿಳಿಸಿದ

"ಅನುಕೂಲವೇ ಆಗುತ್ತೆ ಗುಲಬ್. ನೀನು ಬಾ. ಪಟ್ಟಣ-ಗಿಟ್ಟಣ ನೋಡದೆ ಮುದುಕ ಆಗೋದು ಸರಿಯಲ್ಲ. ಬೇರೆ ಯಾವ ವಿಷಯವನ್ನೂ ತಲೆಗೆ ಹಚ್ಚಿಕೊಳ್ಳಬೇಡ. ಪತ್ರ ರಿಜಿಸ್ಟರ್ ಮಾಡಿಸೋ ವ್ಯವಸ್ಥೆ ನಾನು ಮಾಡ್ತೀನಿ."

ಸ್ವಲ್ಪ ತಡೆದು ಚಂದ್ರ ಹೇಳಿದ - "ಸರಿ, ಒಂದು ಮಾತು. ಡಾಲಿಮ್‌ನಲ್ಲಿರೋ ಜಮೀನು ಮಾರಾಟ ಮಾಡಬೇಕೆಂದಿದ್ದೀಯೋ ?"

"ಅಹುದು"

"ತಳಪಾಯ ಹಾಕಿರೋ ಮನೆ, ಜೋಗ ಮತ್ತು ತೋಟ."

"ಈಗಲೇ ಮಾರೊಲ್ಲ."

"ಒಂದು ಮಾತು ಹೇಳಬಯಸುತ್ತೇನೆ" ಚಂದ್ರ ಹೇಳಿದ.

"ಏನದು?"

"ನೀನು ನಮಗೆ ಡೊನೇಷನ್ ಕೊಡಬೇಕಾಗುತ್ತೆ."

"ಡೊನೇಷನ್ ಎಂದರೇನು?"

"ಡಾಲಿಮ್‌ನಲ್ಲಿ ನಿನಗೆ ಬರುವ ತೋಟದಲ್ಲಿ ಸ್ಟೇಜ್ ಕಟ್ಟಲು ಸ್ವಲ್ಪ ಜಮೀನು ನಮಗೆ ಕೊಡಬೇಕು."

ಸ್ವಲ್ಪ ಯೋಚಿಸಿ ಗುಲಬ್ ಹೇಳಿದ - "ಜನಗಳು ಬೇಕು ಅಂತ ಹೇಳಿದರೆ ಕೊಡ್ತೀನಿ. ಯಾಕೆ ಕೊಡೋದಿಲ್ಲ ಅಂತೀನಿ?"

ಚಂದ್ರ ಹೇಳಿದ ಯಾರಿಗಾಗಿಯೇ ಅವರು ಕೊಡದೆ ಹೋದರೆ ಹಳ್ಳಿಯ ಅಭಿವೃದ್ಧಿ ಹೇಗೆ ಸಾಧ್ಯ? ನನ್ನ ಹತ್ತಿರ ಏನೂ ಇಲ್ಲ ...... ನನಗೆ ನಾನೇ. ವಿಶೇಷವಾಗಿ ನಾನು ಓದು ಬರಹ ಮಾಡಿಲ್ಲ. ಆದುದರಿಂದ ಕೆಲಸಕ್ಕೆ ನಾನೇ ಕೈಹಾಕುತ್ತೇನೆ. ಜನರು ಬೈಯುತ್ತಾರೆ. ಬೈಯಲಿ ಬಿಡು, ಅಲ್ವೇ?"

"ಯಾರು ನಿನ್ನನ್ನು ಬೈಯುತ್ತಾರೆ? ಬೇರೆಯವರ ಹಿತಕ್ಕಾಗಿ ಶ್ರಮ ಪಡುತ್ತಿದ್ದೀಯೆ? ಹಳ್ಳಿಯವರು ನಿನ್ನ ಪ್ರಶಂಸೆ ಮಾಡದಿದ್ದರೂ ನಿನ್ನನ್ನು ಆಶೀರ್ವದಿಸುತ್ತಾರೆ."

"ಏನೇ ಹೇಳಲಿ, ಐ ಡು ಮೈ ಡ್ಯೂಟಿ. ನೀನು ನಿನ್ನ ಪಾಲು ಕೊಡ್ತೀಯೆ ತಾನೇ? ನಿನ್ನ ತೋಟದಲ್ಲಿ ಜಮೀನು ಕೊಡ್ತೀಯೆ ತಾನೇ?"

"ಹೇಳಲಿಲ್ವೇ? ತೋಟ ಪಾಳು ಬಿದ್ದಿರೋದಕ್ಕೆ ಬದಲಾಗಿ ಹಳ್ಳಿಯ ಹುಡುಗರು ಆಟಪಾಟ ಆಡ್ತಾರೆ."

ಜಮೀನು ವಹಿಸಿಕೊಳ್ಳುವುದಕ್ಕೆ ಬದಲಾಗಿ ದಾನ ಕೊಡುವುದರಲ್ಲಿಯೇ ಸಹಜವಾಗಿಯೇ ಹೆಚ್ಚಿನ ಆನಂದವಿದೆ ಎಂದು ಗುಲಬ್‌ಗೆ ಅನ್ನಿಸಿತು. ಒಂದು ಸ್ಕೂಲು ಆಗುತ್ತೆ. ಒಂದು ಆಸ್ಪತ್ರೆ ಆಗುತ್ತೆ. ಒಂದು ಸ್ಟೇಜ್ ಆಗುತ್ತೆ. ಒಂದು ಸಾರ್ವಜನಿಕ ಸಂಸ್ಥೆ ಆಗುತ್ತೆ. ನಾವು ಶಾಶ್ವತವಲ್ಲ. ಆದರೆ ಸಂಸ್ಥೆ ಶಾಶ್ವತ. ಈ ರೀತಿಯ ದಾನಿ ಆಗೋದು ಅಭಿಮಾನ ಮತ್ತು ಆನಂದದ ಮಾತು.

ಮತ್ತೆ ನನ್ನ ಸಂಪತ್ತನ್ನು ನನ್ನ ರಾಜಿಖುಷಿಯಿಂದ ದಾನ-ಮಾರಾಟ ಮಾಡಿ ಹಸ್ತಾಂತರ ಮಾಡುವ ಸ್ವಾತಂತ್ರ್ಯ ಇದೆ. ತನ್ನ ಸಾಧಾರಣ ದಾನ ಮಹತ್ತರವಾದುದೆಂದು ಕಿವಿಯಾರೆ ಕೇಳಿ ಗುಲಬ್ ಸ್ವಾತಂತ್ರ್ಯದ ಸವಿ ಸವಿದನು.

ತನ್ನ ಅಣ್ಣನಿಗೆ ಮಾರಬೇಕೆಂದಿರುವ ಜಮೀನಿನ ಬೆಲೆಯಲ್ಲಿ ಒಂದು ಬಿಡಿಗಾಸು ಕಡಿಮೆ ಮಾಡುವುದಿಲ್ಲ. ಅಗತ್ಯ ಬಿದ್ದರೆ ಸ್ವಲ್ಪ ಹಣಕಾಸು ಕೊಡುತ್ತಾನೆ. ಆದರೆ ಬೆಲೆಯಲ್ಲಿ ಕಡಿಮೆ ಮಾಡುವುದಿಲ್ಲ. ಗುಲಬ್‌ನ ಮಾತು ಖಡಾಖಂಡಿತವೆಂಬುದು ಆತನ ಅಣ್ಣನಿಗೂ ಗೊತ್ತು. ಆತನ ಅಣ್ಣ ಈ ವಿಷಯವನ್ನು ಕುರಿತು ಹೆಚ್ಚಿಗೆ ಪ್ರಸ್ತಾಪ ಮಾಡಲಿಲ್ಲ.

ಬಸೀರತ್‌ನನ್ನು ಘಟ್ಟದಲ್ಲಿ ಗುಲಬ್ ಭೇಟಿ ಮಾಡಿದ.

ಬಸೀರತ್‌ನ ದೋಣಿಯಲ್ಲೇ ಕೆಲಾಈ ದೊಡ್ಡ ಘಾಟಿನವರೆಗೆ ಹೋಗುತ್ತಾನೆ. ದೊಡ್ಡ ದೋಣಿ. ಏನೂ ಚಿಂತೆಯಿಲ್ಲ. ದೋಣಿಗೆ ಕಮಾನಿದೆ. ಬಿಸಿಲು ಹಾಗೂ ಮಳೆಯ ಭಯ ಸಹ ಇಲ್ಲ.

ಗುಲಬ್ ನಿರ್ಭೀತನಾಗಿ ನಗರಕ್ಕೆ ಹೋಗಲು ನಿಶ್ಚಯಿಸಿದ. ಆತ ಈ ವಿಷಯವನ್ನು ಬಸೀರತ್‌ಗೆ ತಿಳಿಸಿದ. ಅವನಿಗೆ ಸಂತೋಷವಾಯಿತು.

ಬಸೀರತ್‌ನು ಆತ್ಮೀಯತೆಯಿಂದ ಗುಲಬ್‌ನ ವಿಚಾರವನ್ನು ಸ್ವಾಗತಿಸಿದ. ಹೋಗಬೇಕು. ನಗರವನ್ನು ನೋಡಬೇಕು. ಗೋಲಾಘಾಟ್ ಏನು ಮಹಾ ದೂರ! ಅರ್ಧದಿನದ ಹಾದಿ.

ಗುಲಬ್ ವಿನಯದಿಂದ ಹೇಳಿದ - "ಅಂಥದೇನೂ ಚಿಂತೆಯಿಲ್ಲ. ಇಬ್ಬರು ಹೆಂಗಸರನ್ನು ಈ ಮಳೆಗಾಲದಲ್ಲಿ ಬಿಟ್ಟು ಹೋಗೋದು ಸರಿಯಲ್ಲವೆನಿಸುತ್ತದೆ. ಸಾಧ್ಯವಾದರೆ ನೀವು ಸ್ವಲ್ಪ ಅವರ ಯೋಗಕ್ಷೇಮ ನೋಡಿಕೊಳ್ಳಿ."

ಬಸೀರತ್ ತನ್ನ ಒಪ್ಪಿಗೆ ಸೂಚಿಸಿದ. ಅವಕಾಶ ಸಿಕ್ಕಿದಾಗ ಹಾಗೂ ಅಗತ್ಯ ಬಿದ್ದಾಗ ಅವನು ಖಂಡಿತ ಹೊಗುತ್ತಾನೆ. ಅದು ಏನು ದೂರವೇ? ಗುಲಬ್‌ಗೆ ವಿಶ್ವಾಸ ಮೂಡಿತು.

ಆದರೆ ಸಾಯಂಕಾಲ ಒಬ್ಬನೇ ಮನೆಗೆ ಹಿಂದಿರುಗಿದ ಮೇಲೆ ಆತನ ಮನಸ್ಸು ಇದ್ದಕ್ಕಿದ್ದಂತೆ ವಿಷಾದಗ್ರಸ್ತವಾಯಿತು. ಚೇನಿ ಸುಮ್ಮಸುಮ್ಮನೇ ಹೇಳಲಿಲ್ಲ - "ಮನೆಯಲ್ಲಿ ಮಕ್ಕಳುಮರಿ ಇಲ್ಲದೆ ಹೋದರೆ ಮನೆಯೊಳಗಡೆ ಹೋಗಲು ಮನಸ್ಸೇ ಬರುವುದಿಲ್ಲ. ಮನೆ ಬಿಕೋ ಅನ್ನಿಸುತ್ತೆ. ಗುಲಬ್‌ನ ಮನೆಯಂಗಳದಲ್ಲಿ ಮಗುವಿನ ಹೆಜ್ಜೆಯ ಗುರುತು ಬೀಳೋದು ಯಾವಾಗ ? ಆತನಿಗೆ ಒಬ್ಬ ಮಗ ಇದ್ದಿದ್ದರೆ ಡಾಲಿಮ್ ಗ್ರಾಮದ ನೇಪಾಲಿ ಮೊಹಲ್ಲಾಗೆ ಹೋಗುವ ಅಗತ್ಯವಿರುತ್ತಿರಲಿಲ್ಲ. ಮಗ ದೊಡ್ಡವನಾಗಿ ಉಳುಮೆ ಕೆಲಸ ಮಾಡುತ್ತಿದ್ದ. ಆತ ಕೋಣವನ್ನು ಕಟ್ಟಿಕೊಂಡು ಉಳುತ್ತಿದ್ದ. ಗುಲಬ್ ಎತ್ತುಗಳನ್ನು ಕಟ್ಟಿಕೊಂಡು ಉಳುತ್ತಿದ್ದ. ಆತ ಗದ್ದೆಯ ನಾಲ್ಕು ಮೂಲೆಗಳನ್ನು ಸವರಿ ಸಮ ಮಾಡುತ್ತಿದ್ದ. ಗುಲಬ್ ಹಲುಬೆ ಹೊಡೆಯುತ್ತಿದ್ದ. ಎರಡು ಉಳುಮೆ ಮಾಡಿದರೆ ಮಗ ಹೊಸದಾಗಿ ಜಮೀನು ಮಾಡುತ್ತಿದ್ದ. ಗುಲಬ್ ಆ ಜಮೀನಿಗೆ ಹೊಸ ಬಿತ್ತನೆ ಹಾಕುತ್ತಿದ್ದ.

ಆದರೆ ಆ ಆಸೆಯ ಯಾವ ಕುರುಹೂ ಗುಲಬ್‌ನಿಗೆ ಇಲ್ಲಿಯವರೆಗೂ ಗಮನಕ್ಕೆ ಬಂದಿಲ್ಲ. ಕಪಾಹಿಯನ್ನು ಕಟ್ಟಿಕೊಂಡು ಮೂರು ವರ್ಷವಾಗಿದೆ. ಮಕ್ಕಳು ಮರಿ ಇಲ್ಲಿಯವರೆಗೂ ಆಗಲಿಲ್ಲ. ಇಷ್ಟು ದಿನಗಳ ತನಕ ಆಗದೆ ಹೋದ ಮೇಲೆ ಬಹುಶಃ ಆಗೋದೇ ಇಲ್ಲ.

ಒಬ್ಬ ಮಗನಾದರೂ ಹುಟ್ಟದೆ ಹೋದರೆ ಇಷ್ಟೊಂದು ಶ್ರಮ ಪಡುವ ಅಗತ್ಯವಾದರೂ ಏನು? ನಾನು ತೀರಿಕೊಂಡ ಮೇಲೆ ಈ ಆಸ್ತಿಪಾಸ್ತಿ ಯಾರ ಪಾಲಾಗುತ್ತೋ? ಯಾರಿಗೆ ಗೊತ್ತು? ಕಪಾಹಿಯ ವಯಸ್ಸು ನನಗಿಂತಲೂ ಜಾಸ್ತಿ. ಆದರೆ ಆಕೆ ಮುದುಕಿ ಆಗಲಿಲ್ಲ. ಅವಳಿಗಿಂತ ಮುದುಕಿ ಆಗಿರುವವರಿಗೂ ಮಕ್ಕಳುಮರಿ ಆಗುತ್ತಿವೆ.

ನಿನಗೇನಾದರೂ ಮಕ್ಕಳುಮರಿ ಆಗೋ ಸಾಧ್ಯತೆಯಿದೆಯೋ ಇಲ್ಲವೋ ಎಂದು ಕಪಾಹಿಯನ್ನು ಕೇಳಬೇಕೆಂದು ಗುಲಬ್ ಆ ದಿನ ಮನಸ್ಸಿನಲ್ಲಿಯೇ ಯೋಚಿಸಿದ. ಒಂದುವೇಳೆ ಆಗದಿದ್ದರೆ ಏನು ಮಾಡುವುದು? ಗುಲಬ್ ಯಾವ ತೀರ್ಮಾನವನ್ನೂ ಕೈಗೊಳ್ಳಲಿಲ್ಲ.

# ಮೂವತ್ತೊಂದು

ಎಲ್ಲ ವ್ಯವಸ್ಥೆ ಮಾಡಿ ಚಂದ್ರ ಸಮಯಕ್ಕೆ ಸರಿಯಾಗಿ ಬಂದ. ಅಷ್ಟರಲ್ಲಿ ಗುಲಬ್ ನಾಟಿ ಹಾಕಬೇಕಾಗಿದ್ದ ಜಮೀನಿಗೂ ನಾಟಿ ಹಾಕಿ ಮುಗಿಸಿದ್ದ. ನೇಪಾಲಿಯ ಉಳುಮೆಯವನು ಕಟ್ಟುಮಸ್ತಾಗಿದ್ದ. ಆತ ಉಳುಮೆ ಕೆಲಸ ಮಾಡುವುದರ ಜೊತೆಗೆ ಗದ್ದೆಯ ಎಲ್ಲ ಕೆಲಸಕಾರ್ಯಗಳಲ್ಲಿ ಬಹಳ ಸಹಾಯ ಮಾಡಿದ. ಕಪಾಹಿ ಮತ್ತು ತರಾ ಸಹ ದಣಿವನ್ನು ಲೆಕ್ಕಿಸದೆ ಕೆಲಸ ಮಾಡಿ ನಾಟಿ ಕೆಲಸವನ್ನು ಪೂರೈಸಿದರು. ಚೇನಿಮಾಇ ಸಹ ಮೂರು ದಿನ ಬಂದು ಅವರಿಗೆ ಸಹಾಯ ಮಾಡಿದಳು. ಒಳ್ಳೆಯ ಬೆದೆಕಾಲ. ಎರಡು ದಿನ ಮುಂಚಿತವಾಗಿ ನಾಟಿ ಹಾಕಿದರೆ ಎಲ್ಲರಿಗೂ ಮೇಲು.

ಸ್ವಲ್ಪ ತಗ್ಗು ಜಮೀನು ಮತ್ತು 'ಬಿರವಾ' ಬೆಳೆಯುವ ಜಮೀನು ಉಳಿದಿತ್ತು. ಗುಲಬ್‌ನ ಮನಸ್ಸು ಸ್ವಲ್ಪ ಹಗುರವಾಯಿತು. ಆತ ಇಲ್ಲದಿದ್ದರೂ ನೇಪಾಲಿ ಉಳುಮೆಗಾರನ ಸಹಾಯದಿಂದ ಕಪಾಹಿ ಮತ್ತು ತರಾ ನಾಟಿ ಕೆಲಸ ಪೂರೈಸಬಲ್ಲರು.

ಹತ್ತು - ಹದಿನೆಂಟು ದಿವಸಗಳವರೆಗೂ ಮಳೆಯಾಗಲಿಲ್ಲ. ಭಾದ್ರಪದದ ಬೇಗೆ ತಡೆಯಲಾಗುತ್ತಿಲ್ಲ. ಬಿಸಿಲು ಬೆಂಕಿಯಂತೆ ಇದೆ. ಆದರೆ ಅಂದು ಗುಲಬ್ ದಕ್ಷಿಣ ದಿಕ್ಕಿನಲ್ಲಿ ಮೋಡ ಹೆಪ್ಪುಗಟ್ಟುತ್ತಿರುವುದನ್ನು ಕಂಡ. ಮೂರು ನಾಲ್ಕು ದಿವಸಗಳಲ್ಲೇ ಭಾರಿ ಮಳೆ ಮತ್ತು ಪ್ರವಾಹ ಬರುವ ಸಂಭವವಿದೆ. ಇಷ್ಟೊಂದು ದಿನಗಳವರೆಗೆ ಮಳೆ ಬೀಳಲಿಲ್ಲ. ಒಮ್ಮೆ ಬೀಳತೊಡಗಿದರೆ ಬೇಗ ಬಿಡುವು ಕೊಡುವ ಲಕ್ಷಣ ಕಂಡು ಬರುತ್ತಿಲ್ಲ. ಬಹಳ ಒಣಗಿದ ಮೇಲೆ ಭಾರಿ ಪ್ರವಾಹ ಬರಬಹುದು.

ಭಗವಂತನೆ ದಯೆಯಿಂದ ಬರದಿರಲಿ!

ಗುಲಬ್‌ನ ಜಾಸ್ತಿ ಜಮೀನು ನದಿಯ ಪಕ್ಕದಲ್ಲಿದೆ. ತಗ್ಗಾದ ಜಮೀನು ಪ್ರವಾಹ ನುಗ್ಗಿದರೆ ಉಳಿಯುವ ಆಸೆಯಿಲ್ಲ.

ಆದರೆ ಆರು ವರ್ಷಗಳಿಂದ ಧನಶಿರಿಯಲ್ಲಿ ಪ್ರವಾಹ ಬಂದಿಲ್ಲ. ಈ ಕಡೆ ಅಣೆಕಟ್ಟು ಸಹ ಇಲ್ಲ.

ಭಗವಂತನ ದಯೆಯಿಂದ ಪ್ರವಾಹ ಬರದಿರಲಿ!

ಗುಲಚ್ ಇರುವ ಮನೆಯ ಜಾಗ ಎತ್ತರದಲ್ಲಿದೆ. ಇಡೀ ಹಳ್ಳಿ ನೀರಿನಲ್ಲಿ ಮುಳುಗಿದ ಮೇಲೆ ಆತನ ಮನೆ ಮುಳುಗುತ್ತೆ. ಮನೆಯ ನಾಲ್ಕು ಕಡೆಗಳಲ್ಲೂ ಇಳಿಜಾರಾದ ಜಮೀನು. ಅಲ್ಲೇ ಒಂದು ಗುಡ್ಡದಂತಿರುವ ಜಾಗದ ಮೇಲೆ ಆತನ ಮನೆಯಿದೆ.

ಪ್ರವಾಹ ಬಂದೇ ಬಿಟ್ಟರೆ!

ಅದು ಅವನಿಗೋಸ್ಕರವೇ ಬರುತ್ತದೆಯೇ? ಎಲ್ಲರಿಗೂ ಬರುತ್ತೆ. ಬೇಗೆ, ಬಿರುಗಾಳಿ, ಪ್ರವಾಹ - ಇವುಗಳನ್ನು ತಡೆಯುವವರಾರು?

ಭಾದ್ರಪದ ಮಾಸದ ಎಂಟನೇ ತಾರೀಖು ರವಿವಾರ.

ಆದರ ಹಿಂದಿನ ಶುಕ್ರವಾರ ಬಹಳವಾಗಿ ವಿಚಾರ ಮಾಡಿ ಬೆಳಗ್ಗೆಯಿಂದ ಸಿದ್ಧತೆ ಮಾಡಿಕೊಂಡು ಗುಲಚ್ ಶುಕ್ರವಾರದಂದು ನಮಾಜು ಮಾಡಲು ಸಿಪರಿಯಾ ಹಳ್ಳಿಯ ಮಸೀದಿಗೆ ಹೋದ. ನಮಾಜಿನ ಎಲ್ಲ ನಿಯಮಗಳೂ ಆತನಿಗೆ ಗೊತ್ತಿರಲಿಲ್ಲ. ಆದರೆ ಈದ್, ಬಕ್ರೀದ್ ಮುಂತಾದ ದಿನಗಳಲ್ಲಿ ಮಸೀದಿಗೆ ಹೋಗಿ ಸಮೂಹದಲ್ಲಿ ಬೆರೆತು ಊಟ್-ಬೈಸ್ ಕೆಲಸ ಮಾಡುತ್ತಾನೆ. ಮೂರು ವರ್ಷಗಳಿಂದಲೂ ಆತ ಈದ್‌ನ ನಮಾಜ್ ಹೊರತು ಬೇರೆ ದಿನ ನಮಾಜು ಮಾಡಲಿಲ್ಲ. ಆತನಿಗೆ ಜ್ಞಾಪಕವೇ ಇರುವುದಿಲ್ಲ.

ಅಂಗಡಿಯಿಂದ ಆತ ಎರಡು ಮೇಣದ ಬತ್ತಿಗಳನ್ನು ಕೊಂಡುಕೊಂಡ. ಗೋಲಾಘಾಟಿಗೆ ಹೋಗಲು ಆತ ಹೊಲಿಸಿದ್ದ ಹೊಸ ಬನೀನು ಮತ್ತು ಹೊಸ ಪಂಚೆ ಧರಿಸಿಕೊಂಡ.

ಭಾದ್ರಪದ ಮಾಸ. ಮಸೀದಿಯಲ್ಲಿ ಕಡಿಮೆ ಮಂದಿ ಇದ್ದಾರೆ. ತರುಣರು ಯಾರೂ ಇಲ್ಲ. ಆತ ಒಬ್ಬನೇ ತರುಣ. ಗದ್ದೆ ಕೆಲಸಕ್ಕೆ ಹೋಗಲಾರದ ಮೂರು ನಾಲ್ಕು ಮಂದಿ ಮುದುಕರಿದ್ದಾರೆ.

ಕೈಕಾಲು ಮುಖ ತೊಳೆದುಕೊಂಡು ಗುಲಚ್ ಮಸೀದಿಯೊಳಗಡೆ ಹೋದ. ಮೇಣದ ಬತ್ತಿಯನ್ನು ದೀಪ ಹತ್ತಿಸುವ ಜಾಗದಲ್ಲಿಟ್ಟ. ಆತ ಮನಸ್ಸಿನಲ್ಲೇ ಪ್ರಾರ್ಥಿಸಿದ. ಅದು ಅವನಿಗೇ ಅರ್ಥವಾಗಲಿಲ್ಲ.

ಗೋಲಾಘಾಟಿಗೆ ಹೊರಟಿದ್ದೇನೆ. ಇದಕ್ಕಿಂತ ಮುನ್ನ ಎಂದೂ ಹೋಗಿಲ್ಲ. ಹೇ ಅಲ್ಲಾ, ವಿಪತ್ತುಗಳಿಂದ ಪಾರುಮಾಡು.

ಚೇನಿಮಾಇ ಸಹ ಹೊರಡುತ್ತಾಳೆ. ಅವಳಿಗೂ ಯಾವುದೇ ರೀತಿಯ ತೊಂದರೆ ಒದಗದಿರಲಿ. ಆಕೆ ಗಂಡನನ್ನು ಆಸ್ಪತ್ರೆಗೆ ಸೇರಿಸಿ ಹಿಂದಿರುಗುತ್ತಾಳೆ.

ನನಗೆ ಮಕ್ಕಳುಮರಿ ಇಲ್ಲ. ನನಗೆ ಒಂದು ಮಗು ಬೇಕು. ಮಗು ಆದಮೇಲೆ ನನಗೆ ಬೇರಾವ ದುಃಖವೂ ಇರುವುದಿಲ್ಲ.

ಎರಡು ಮೇಣದ ಬತ್ತಿಗಳನ್ನು ಮಸೀದಿಯಲ್ಲಿ ಹೊತ್ತಿಸಿದ. ನೀನು ನನ್ನ ಪ್ರಾರ್ಥನೆ ಆಲಿಸು, ಅಲ್ಲಾ.

ನಮಾಜು ಪೂರೈಸಿಕೊಂಡು ಮನೆಗೆ ಹಿಂತಿರುಗುವ ವೇಳೆಯಲ್ಲಿ ಗುಲಚ್‌ನ ಮನಸ್ಸಿನಲ್ಲಿ ಒಂದು ಸಂಶಯ ಉದ್ಭವಿಸಿತು.

ಏನು? ಅಲ್ಲಾ ನನ್ನ ಎಲ್ಲಾ ಪ್ರಾರ್ಥನೆಗಳನ್ನೂ ಪೂರೈಸುತ್ತಾನೆಯೇ? ಯಾವುದಾದರೊಂದನ್ನು ಕುರಿತು ಪ್ರಾರ್ಥನೆ ಸಲ್ಲಿಸಬೇಕಾಗಿತ್ತು. ಎಲ್ಲವನ್ನೂ ಒಟ್ಟಿಗೆ ಕೇಳಿದ್ದು ಸರಿಯಲ್ಲ. ಆದರೆ ಏನೇ ಆಗಲಿ ನನಗೊಂದು ಮಗು ಬೇಕು. ಅದಕ್ಕೋಸ್ಕರ ಅಗತ್ಯ ಬಿದ್ದರೆ ಇನ್ನೂ ಎರಡು ಮೇಣದ ಬತ್ತಿಗಳನ್ನು ಹೊತ್ತಿಸುತ್ತೇನೆ. ಮಸೀದಿಯಲ್ಲಿ ಪ್ರಾರ್ಥನೆ ಸಹ ಸಲ್ಲಿಸುತ್ತೇನೆ.

ಬತ್ತದ ಪೈರು ಸೊಗಸಾಗಿ ಬರುತ್ತಿದೆ. ಮೊದಲು ನಾಟಿ ಹಾಕಿದ್ದ ಪೈರು ಕಪ್ಪುಬಣ್ಣಕ್ಕೆ ತಿರುಗಿದೆ. ಕಪಾಹಿ ಮತ್ತು ತರಾ ಕೈಯಲ್ಲಿ ಲಕ್ಷ್ಮಿ ಇದ್ದಾಳೆ. ಒಂದು ವಾರದ ಪೈರು ಕಿತ್ತು ಅವರು ನಾಟಿ ಹಾಕಿದರೂ ಪೈರು ಸೊಗಸಾಗಿ ಬರುತ್ತದೆ.

ಚೆನ್ನಾಗಿ ಬಿಸಿಲು ಬಂದಿದೆ. ಬತ್ತದ ಪೈರಿನ ಹುಳುವಿನ ಕಾಟ ಈ ಸಾರಿ ಇರುವುದಿಲ್ಲ. ಕೆಲವು ಗದ್ದೆಗಳಲ್ಲಿ ಹಾಲುದುಂಬುವ ವಾಸನೆ ಬರುತ್ತಿದೆ.

ತನ್ನ ಗದ್ದೆ ನೋಡಿ ಗುಲಬ್ ಸಂತುಷ್ಟನಾದ.

ಇದು ನನ್ನದು. ಇದೆಲ್ಲಾ ನನ್ನದು. ಜಮೀನು ಸಹ. ಬೆಳೆ ಸಹ. ಆ ಬೋರೆ ಜಮೀನಿನ ಬೆಳಸು ಸ್ವಲ್ಪ ಕೆಂಪು ಬಣ್ಣಕ್ಕೆ ತಿರುಗಿದೆ. ಒಂದೆರಡು ಸಾರಿ ಗೊಬ್ಬರ ಹಾಕಬೇಕು. ಹಲುಬೆಯಿಂದ ತಳ್ಳಿದ ಕೆಸರು ಒಂದು ಕಡೆ ರಾಶಿಯಾಗಿದೆ.

ಕೇಲಾಈ ಗುಣಮುಖವಾಗುವಂತೆ ಪ್ರಾರ್ಥಿಸಲು ಚೇನಿಮಾಇ ತನ್ನ ಕಡೆಯಿಂದ ಎರಡು ಚಿಪ್ಪು ಬಾಳೆಹಣ್ಣು ಮಸೀದಿಗೆ ಕಳುಹಿಸಿದಳು. ಕೇಲಾಈ ಗುಣಮುಖನಾಗಲೆಂದು ಸಾಮೂಹಿಕ ಪ್ರಾರ್ಥನೆ ಸಲ್ಲಿಸಲೆಂಬುದು ಅವಳ ಆಶೆಯವಾಗಿತ್ತು. ಸಾಮೂಹಿಕ ಪ್ರಾರ್ಥನೆ ಸಲ್ಲಿಸಿದ್ದಾಯಿತು. ಕೆಲಾಈ ಕಾಯಿಲೆ ಬಿದ್ದಿದ್ದಾನೆ. ಚಿಕಿತ್ಸೆ ಪಡೆಯಲು ನಗರಕ್ಕೆ ಹೋಗುತ್ತಿದ್ದಾನೆ. ಅವನ ಕಾಯಿಲೆ ವಾಸಿಯಾಗಲಿ - ಅಲ್ಲಾ!

ಎಲ್ಲರ ಅಂತಿಮವಾದ ಆಶೆ ಹಾಗೂ ಆಧಾರ ಅಲ್ಲಾ!

ಸರಳ ಹಾಗೂ ಸಾಮೂಹಿಕ ಪ್ರಾರ್ಥನೆ ಸಮಾಧಾನ ನೀಡುತ್ತದೆ. ಹಾಗೂ ಆತ್ಮವಿಶ್ವಾಸ ಮೂಡಿಸುತ್ತದೆ.

ಗುಲಬ್ ಸಹ ಕೆಲಾಈಯು ಗುಣಮುಖನಾಗಲೆಂದು ಪ್ರಾರ್ಥಿಸಿದ. ಕೆಲಾಈ ಸತ್ತರೂ ಆತನಿಗೇನೂ ಕೆಡಕೆನಿಸುವುದಿಲ್ಲ. ಆದರೆ ಚೇನಿಮಾಇ ಸಾಮೂಹಿಕ ಪ್ರಾರ್ಥನೆಗಾಗಿ ಬಾಳೆಹಣ್ಣು ಕಳುಹಿಸಿದ್ದಾಳೆ.

ಬೇರೆಯವರೊಡನೆ ಸೇರಿಕೊಂಡು ಆತ ಸರಳ ಭಾವನೆಯಿಂದ ಪ್ರಾರ್ಥನೆ ಸಲ್ಲಿಸಿದ. ಕೆಲಾಈ ಗುಣಮುಖವಾದರೆ ಚೇನಿ ಸುಖವಾಗಿರುತ್ತಾಳೆ. ಮಕ್ಕಳುಮರಿ ಆಗುತ್ತವೆ. ಒಂದು ಚೊಕ್ಕ ಸಂಸಾರವಾಗುತ್ತದೆ. ಕೆಲಾಈಗೆ ಗುಣವಾಗಲಿ.

ಮಸೀದಿಯಿಂದ ಹಿಂದಿರುಗಿದ ಮೇಲೆ ಮರುದಿನ ಸಹ ಆತ ಗದ್ದೆಯಲ್ಲಿ ಕೆಲಸ ಮಾಡಿದ. ಮಾರನೆಯ ದಿನ ಭಾದ್ರಪದ ಮಾಸ ಏಳನೇ ತಾರೀಖು ಆಗಿತ್ತು.

ಬೆಳಿಗ್ಗೆಯೇ ಚಂದ್ರ ಬಂದ.

ಕೆಲಾಈಯನ್ನು ಕರೆದುಕೊಂಡು ಹೋಗಲು ಡಾಲಿಮ್‌ನಿಂದ ಒಂದು ಎತ್ತಿನ ಗಾಡಿಯನ್ನು ಮೋಲೋಕಾನ ಮನೆಯ ಬಳಿ ಕರೆತರಲಾಯಿತು. ಇದು ಸಾಧಾರಣವಾದ ಮಾತೇನಲ್ಲ. ಚಂದ್ರ ಮತ್ತು ಗುಲಬ್ ಜೊತೆಯಲ್ಲಿ ಹೋಗುತ್ತಾರೆ. ಕಪಾಹಿ ಹೋಗಿ ಸಾಮಾನು

ಸರಂಜಾಮು ಕಟ್ಟಿ ಸಹಾಯ ಮಾಡಿದಳು.

ಮನೆಯಲ್ಲಿ ಒಬ್ಬಳೇ ಕುಳಿತಿದ್ದ ತರಾಳೊಡನೆ ಗುಲಬ್ ಹೇಳಿದ - "ನೀವೇನೂ ಯೋಚ್ನೆ ಮಾಡಬೇಡಿ. ಸಾಧ್ಯವಾಗದಿದ್ದರೆ ಗದ್ದೆಗೂ ಹೋಗಬೇಡಿ. ನೇಪಾಲಿಯೇ ಎಲ್ಲವನ್ನೂ ನೋಡಿಕೊಳ್ಳುತ್ತಾನೆ. ನೀನು ಮತ್ತು ನಿನ್ನ ಚಿಕ್ಕಮ್ಮ ಮನೆಯಲ್ಲೇ ಇರಿ. ನೀನು ಮತ್ತು ನಿಮ್ಮ ಚಿಕ್ಕಮ್ಮ ಮನೆಯಲ್ಲಿಯೇ ಇದ್ದು ದನಕರುಗಳನ್ನು ನೋಡಿಕೊಳ್ಳಿ."

"ಅಲ್ಲಿ ಎಷ್ಟು ದಿನಗಳ ತನಕ ಇರುತ್ತೀರಿ?"

"ಹೇಳೋಕಾಗೊಲ್ಲ. ಕೆಲಾಈಗಾಗಿ ಏನೇನು ವ್ಯವಸ್ಥೆ ಮಾಡ್ಬೇಕೋ ಅದೆಲ್ಲಾ ಚಂದ್ರ ಮಾಡ್ತಾನೆ. ನನಗೆ ಕಚೇರಿಯಲ್ಲಿ ಕೆಲಸವಿದೆ. ಜಮೀನು ಮಾರಾಟದ ಪತ್ರ ರಿಜಿಸ್ಟ್ರೇಷನ್ ಮಾಡಿಸ್ಬೇಕು. ಒಂದೇ ದಿನದಲ್ಲಿ ಮುಗಿದು ಹೋದರೆ ಸರಿ. ಇಲ್ಲದಿದ್ದರೆ ಎರಡು ಮೂರು ದಿನ ಆಗಬಹುದು. ಹವಾಮಾನದ ಮೇಲೆ ನಂಬಿಕೆ ಇಡೋಕೆ ಆಗೊಲ್ಲ. ಮೋಡ ಇದೆ. ಈ ದಿನ ಸಾಯಂಕಾಲದ ಹೊತ್ತಿಗೆ ಮಳೆ ಬೀಳಬಹುದು."

"ಹೆಚ್ಚು ದಿನ ಮಾಡಬೇಡಿ. ಬೇಗ ಕೆಲಸ ಮುಗಿಯದೆ ಹೋದರೆ ಬಂದು ಬಿಡಿ. ಬೇಕಾದರೆ ಮತ್ತೆ ಹೋಗಿ."

"ಯಾಕೆ ತಡ ಮಾಡ್ತೀನಿ? ಅಲ್ಲೇ ಇರಲು ನನಗೇನು ನಮ್ಮ ಮಾವನ ಮನೆಯಿದೆಯೇ?"

ತರಾ ತಿಂಡಿಯ ಒಂದು ಪೊಟ್ಟಣ ಕಟ್ಟಿ ಕೊಟ್ಟಳು. ಪಂಚೆ, ಬನೀನು ಮಡಿಸಿ ಕೊಟ್ಟಳು. "ಪಟ್ಟಣ-ಗಿಟ್ಟಣ ಸಹವಾಸ, ಹುಷಾರಾಗಿ ನಡೆದು ಹೋಗ್ಬೇಕು" ಎಂದು ಸಲಹೆ ನೀಡಿದಳು.

"ಸರಿ" - ಗುಲಬ್ ಹೇಳಿದ.

ಅಡಿಕೆ-ಎಲೆಯನ್ನು ಒಂದು ಚೀಲದಲ್ಲಿ ಗಂಟುಕಟ್ಟಿ ಕೊಟ್ಟು ತರಾ ಹೇಳಿದಳು "ನನಗಂತೂ ನಿಮ್ಮ ಯೋಚನೆ ಇದ್ದೇ ಇರುತ್ತೆ. ಬೇಗ ಬನ್ನಿ."

ತರಾಳ ಕೈಹಿಡಿದುಕೊಂಡು ಗುಲಬ್ ಹೇಳಿದ "ಬರುತ್ತೇನೆ. ಬಂದೇ ಬರುತ್ತೇನೆ. ನಿನ್ನನ್ನು ನೋಡದೆಯೇ ಹೆಚ್ಚಿಗೆ ದಿವಸಗಳಿರಲು ನನ್ನಿಂದ ಸಾಧ್ಯವಿಲ್ಲ."

ಅಂಗಳಕ್ಕೆ ಬಂದು ಆಕಾಶದ ಕಡೆ ನೋಡಿ ಗುಲಬ್ ಹೇಳಿದ "ಹವಾಮಾನ ಅಷ್ಟೊಂದು ಚೆನ್ನಾಗಿಲ್ಲ. ಈವೊತ್ತು ಮಳೆ ಬೀಳಬಹುದು. ಇಷ್ಟೊಂದು ದಿನ ಬಿಸಿಲಿತ್ತು. ಬಿರುಗಾಳಿ ಬೀಸದಿದ್ದರೆ ಅದೃಷ್ಟ. ಸರಿ, ನಾನು ಬರಲೇ ತರಾ.........."

ತರಾ ಹೊಸ್ತಿಲಿನಲ್ಲಿ ನಿಂತು ಅವನು ಹೋಗುವ ಕಡೆ ನೋಡತೊಡಗಿದಳು.

ಕೆಲಾಈಯ ಶರೀರ ಕೃಶವಾಗಿ ಮೂಳೆ ಕಾಣಿಸುತ್ತಿದ್ದವು. ಹೇಗೋ ಮಾಡಿ ಎತ್ತಿ ಅವನನ್ನು ಗಾಡಿಯಲ್ಲಿ ಕೂರಿಸಿದ್ದಾಯಿತು. ಚೇನಿಯು ಕಪಾಹಿಯನ್ನು ಅಪ್ಪಿಕೊಂಡು ಅಳುತ್ತಾ ಬೀಳ್ಕೊಂಡಳು. ಗುಳಿಬಿದ್ದಿದ್ದ ಕೆಲಾಈಯ ಕಣ್ಣುಗಳಲ್ಲಿ ಎರಡು ತೊಟ್ಟು ಕಣ್ಣೀರು ಬಂತು.

ಮೋಲೋಕಾ ಇಷ್ಟು ಮಾತ್ರ ಹೇಳಿದ - "ಅಲ್ಲಾ ಇದ್ದಾನೆ - ಹೋಗು."

ಧನಶಿರಿಯ ಘಟ್ಟದವರೆಗೂ ಹೆಚ್ಚುಕಡಿಮೆ ಒಂದು ಜಾತ್ರೆಯಂತೆ ಕಾಣುತ್ತಿತ್ತು. ಸಿಪರಿಯಾ ಹಳ್ಳಿಯ ಮೂರು ನಾಲ್ಕು ಮಂದಿ ಕೆಲಾಈಯನ್ನು ಬೀಳ್ಕೊಟ್ಟರು.

ಒಬ್ಬಿಬ್ಬರು ಪಿಸುಮಾತಿನಲ್ಲಿ ಹೇಳಿದರು - "ಹಿಂದಿರುಗಿ ಬರೋ ಆಶೆಯಿಲ್ಲ. ಶ್ಮಶಾನ ಆಹ್ವಾನಿಸುತ್ತಿದೆ."

ಒಬ್ಬಿಬ್ಬರು ಹೇಳಿದರು - "ತರುಣ, ಪಟ್ಟಣದ ದೊಡ್ಡ ಡಾಕ್ಟರು ನೋಡಿದರೆ

ಗುಣವಾಗಬಹುದು. ಅವನಿಗೆ ಬೇರೇನೂ ರೋಗವಿಲ್ಲ. ಕೆಮ್ಮು. ಬರೀ ಕೆಮ್ಮು. ಅದೇನು ಕೆಟ್ಟ ಕಾಯಿಲೆಯೇ?"

'ಗಂಡ ರೋಗಿಷ್ಠನಾದರೂ ಚೇನಿಗೆ ಆತನ ಬಗ್ಗೆ ಬಹಳ ಸ್ನೇಹ. ಬೇರೆ ಯಾರು ಅಂಥ ರೋಗಿಷ್ಠನ ಜೊತೆಯಲ್ಲಿರುತ್ತಾರೆ? ಅವಳು ನತದೃಷ್ಟೆ" - ಎಂದು ಕೆಲವರು ಮಾತನಾಡಿಕೊಂಡರು.

ಆದರೆ ಚಂದ್ರನ ಮಾತು ಕೇಳಿ ಎಲ್ಲರೂ ಮೌನವಾದರು. ಆತ ಹೇಳಿದ - "ಹಳ್ಳಿಯ ಒಬ್ಬ ವ್ಯಕ್ತಿ ಪಟ್ಟಣದಲ್ಲಿ ಸಾಯಲು ಹೋಗುತ್ತಿದ್ದಾನೆ. ಈಗ ವ್ಯಥೆಪಡುವುದರಿಂದ ಏನಾಗುತ್ತೆ? ನಮ್ಮ ಹಳ್ಳಿಯಲ್ಲೇ ಒಂದು ಆಸ್ಪತ್ರೆ ಕಟ್ಟಿಸಿದ್ದರೆ ಈ ರೀತಿಯಾಗಿ ಪಡುಪಾಟಲೆಯಿಂದ ಪಟ್ಟಣಕ್ಕೆ ಹೋಗೋ ಅಗತ್ಯ ಬೀಳುತ್ತಿರಲಿಲ್ಲ. ಕೆಲಾಈಗೆ ಗುಣವಾಗದೆ ಹೋದರೆ ಅದಕ್ಕೆ ನೀವೇ ಜವಾಬ್ದಾರರು. ಯೂ ಆರ್ ರೆಸ್‌ಪಾನ್ಸಿಬಲ್. ಆದರೆ ನೋಡೋಣ. ಈತ ಗುಣವಾಗಿಯೇ ಬರ್‍ತಾನೆ. ವಿ ಗೋ."

ಚಂದ್ರ ಮನಸ್ಸಿನಲ್ಲಿರುವುದನ್ನು ಇದ್ದ ಹಾಗೆ ಹೇಳುತ್ತಾನೆ. ಅವನ ಮಾತನ್ನು ವಿರೋಧಿಸಿದರೆ ಏನೂ ಪ್ರಯೋಜನವಿಲ್ಲ.

ತಿಖಿರ್ ಸಹ ಘಟ್ಟದವರೆಗೂ ಜೊತೆಯಲ್ಲಿಯೇ ಹೋದ. ದೋಣಿಯಲ್ಲಿ ಕೆಲಾಈಯನ್ನು ಕೂರಿಸಿದ ಮೇಲೆ ಆತನಿಗೂ ಅಳುವನ್ನು ತಡೆಯಲಾಗಲಿಲ್ಲ. ಆತ ಹೇಗೋ ಸುಧಾರಿಸಿಕೊಂಡು ಗುಲಬ್‌ನೊಡನೆ ಹೇಳಿದ - "ತಮ್ಮ ಅನ್ನಿಸಿಕೊಂಡು ನಾನು ಅಣ್ಣನಿಗಾಗಿ ಏನೇನೂ ಸಹಾಯ ಮಾಡಲಾಗಲಿಲ್ಲ. ನಿಮ್ಮಗಳ ಮೇಲೆ ಆತನ ಭಾರ ವಹಿಸಿದ್ದೇನೆ."

ಅನಂತರ ಚೇನಿಯೊಡನೆ ಹೇಳಿದ - "ಅತ್ತಿಗೆ, ಗುಲಬಣ್ಣ ಮತ್ತು ಚಂದ್ರಣ್ಣ ಇರುವಾಗ ನೀನೇನೂ ಚಿಂತಿಸಬೇಡ. ಯಾವುದೇ ವಸ್ತುವಿನ ಅಗತ್ಯ ಬಿದ್ದರೂ ಸಮಾಚಾರ ಕೊಡೋದನ್ನು ಮರೆಯಬೇಡ."

ಅದು ಎಲ್ಲರಿಗೂ ಅರ್ಥವಾಯಿತು. ಆದಾಗ್ಯೂ ಯಾರೂ ಕೆಟ್ಟದಾಗಿ ಭಾವಿಸಲಿಲ್ಲ. ಅಸಂಭವವಾದ ಮಾತೇನೂ ಆತ ಹೇಳಲಿಲ್ಲ. ಕೆಲಾಈ ಏನಾದರೂ ಹೆಚ್ಚುಕಡಮೆಯಾದರೆ ತಮ್ಮನಿಗೆ ತಿಳಿಸೋದು ಅಗತ್ಯ.

ಕಪಾಹಿ ಮತ್ತು ತರಾಳ ಯೋಗಕ್ಷೇಮ ನೋಡಿಕೊಳ್ಳಲು ತಿಖಿರನಿಗೆ ತಿಳಿಸಲು ಗುಲಬ್‌ನಿಗೆ ಮನಸ್ಸಾಯಿತು. ಆದರೆ ಏನೂ ಹೇಳಲಿಲ್ಲ. ತಿಖಿರ್ ಮತ್ತು ಕಪಾಹಿ ಸೇರಿ ಆತನ ಅನುಪಸ್ಥಿತಿಯಲ್ಲಿ ತರಾಳ ವಿಷಯದಲ್ಲಿ ಏನಾದರೂ ಮಾಡಿಬಿಟ್ಟರೆ ಏನು ಗತಿ! ಯಾರನ್ನು ನಂಬೋದು!

ಆದರೆ ತರಾಳ ಬಗ್ಗೆ ಆತನಿಗೆ ಪೂರ್ಣ ಭರವಸೆಯಿದೆ. ಆತ ಯಾರೊಡನೆಯೂ ಏನೂ ಹೇಳಲಿಲ್ಲ. ಇಬ್ಬರು ಹೆಂಗಸರಿರುತ್ತಾರೆ. ಹೇಗೋ ಇರಬಲ್ಲರು.

.ಸುಮಾರು ಹತ್ತು ಗಂಟೆಯಲ್ಲಿ ದೋಣಿ ಹೊರಟಿತು.

ಭಾದ್ರಪದ ಮಾಸದಲ್ಲಿ ಧನಶಿರಿಯಲ್ಲಿ ಹುಚ್ಚು ಹೊಳೆ. ನೀರು ಎರಡು ದಡಗಳನ್ನು ಕಟ್ಟಿಕೊಂಡು ಹರಿಯುತ್ತಿದೆ. ಬಗ್ಗಡದ ನೀರು. ಆಕಾಶದ ಚರ್ಯೆ ಬದಲಾಯಿಸುತ್ತಿದೆ. ದೋಣಿಯಲ್ಲಿ ಕೆಲಾಈ, ಚೇನಿ, ಗುಲಬ್ ಮತ್ತು ಚಂದ್ರ ಕುಳಿತಿದ್ದಾರೆ.

ಈ ಯಾತ್ರೆ ಮೃತ್ಯುವಿಗೆ ವಿರುದ್ಧವಾದ ಜೀವನ ಯಾತ್ರೆಯಂತಿದೆ. ಹರಿಯುತ್ತಿರುವ

ನೀರಿನ ಮೇಲೆ ದೋಣಿ ಸಾಗುತ್ತಿದೆ.

ಮೇಲಕ್ಕೆ ನೋಡಿ ಅಂಬಿಗ ಹೇಳಿದ - "ಮಳೆ ಬೀಳುವುದಕ್ಕಿಂತ ಮುಂಚೆಯೇ ನಾವು ದೊಡ್ಡಘಟ್ಟವನ್ನು ಸೇರಿದರೆ ಮೇಲು. ಆಕಾಶದಲ್ಲಿ ಕಪ್ಪಾದ ಮೋಡಗಳು ಕವಿದಿವೆ. ನದಿಯ ಮಧ್ಯದಲ್ಲೇ ಮಳೆ ಬಂದರೆ ನಮಗೆ ಮುಂದೆ ಹೋಗಲು ತೊಂದರೆಯಾಗುತ್ತೆ."

ಚಂದ್ರ, ಗುಲಬ್ ಮತ್ತು ಚೇನಿ ಸಹ ಆಕಾಶದ ಕಡೆ ನೋಡಿದರು. ಬಹುಶಃ ಕೆಲಾಈ ನತದೃಷ್ಟ. ಹವಾಮಾನ ನಮಗೆ ಕೈಕೊಡುತ್ತೆ. ಆದರೆ ಓಡಿ ಹೋದರೆ ವಿಪತ್ತಿನಿಂದ ಪಾರಾಗುತ್ತೇವೆಯೇ? ಇಷ್ಟೊಂದು ಧಗೆ ಆದಮೇಲೆ ಹಾಗೂ ಗುಲಬ್ ಮತ್ತು ಚಂದ್ರ ಜೊತೆಯಲ್ಲಿ ಹೊರಟ ಮೇಲೆ ಮಳೆ ಬರದೆ ಇರುತ್ತದೆಯೇ?

ದೋಣಿ ಎಷ್ಟೊಂದು ವೇಗವಾಗಿ ಹೋಗಲು ಸಾಧ್ಯವೋ ಅಷ್ಟು ವೇಗದಿಂದ ಹೊರಟಿತು.

# ಮೂವತ್ತೆರಡು

ಮಳೆ ಇನ್ನೂ ನಿಂತಿರಲಿಲ್ಲ. ಧಾರಾಕಾರವಾಗಿ ಭಾರಿ ಮಳೆ ಬೀಳುತ್ತಿತ್ತು. ಆಕಾಶದಲ್ಲಿ ಎಲ್ಲಿ ನೋಡಿದರೂ ಮೋಡಗಳು. ಮಳೆ ಯಾವಾಗ ನಿಲ್ಲುತ್ತೆ ಎಂದು ಹೇಳಲಾಗುವುದಿಲ್ಲ.

ದೋಣಿ ದೊಡ್ಡಘಟ್ಟದ ಹತ್ತಿರ ಬರುತ್ತಿದ್ದಂತೆಯೇ ದಪ್ಪದಪ್ಪ ಮಳೆಹನಿ ಬೀಳ ತೊಡಗಿದವು. ಹೇಗೋ ದೋಣಿಯನ್ನು ಘಟ್ಟದಲ್ಲಿ ಕಟ್ಟುವವರೆಗೂ ಮಳೆ ಪ್ರವಾಹದೋಪಾದಿಯಲ್ಲಿ ಬಂತು.

ಚೇನಿಮಾಇ ಮತ್ತು ಕೆಲಾಈ ದೋಣಿಯ ಕಮಾನಿನ ತಳಭಾಗದಲ್ಲೇ ಕುಳಿತಿದ್ದರು. ಮಳೆಯನ್ನು ಲೆಕ್ಕಿಸದೆ ಗುಲಬ್ ಮತ್ತು ಚಂದ್ರ ದಡ ತಲುಪಿದರು. ಈವೊತ್ತು ಬಸ್ಸು ಸಿಕ್ಕುವ ಆಶೆಯಿಲ್ಲ. ಘಟ್ಟದ ಯಾವುದಾದರೂ ಛಾವಣಿಯ ಕೆಳಗಡೆ ಕಾಲ ಕಳೆಯ ಬೇಕಾಗಬಹುದು. ರಾತ್ರಿಗೆ ಊಟ ಮಾಡುವ ಪ್ರಶ್ನೆಯೇ ಇಲ್ಲ. ಉಪಾಹಾರ ತಿಂದು ಕಾಲ ಕಳೆಯಬೇಕು. ಮಳೆಯಿಂದ ಪಾರಾಗುವುದೇ ದೊಡ್ಡ ಪ್ರಶ್ನೆ. ರೋಗಿಷ್ಠ ಕೆಲಾಈ ಮಳೆಯಲ್ಲಿ ನೆನಯದೇ ಹೋದರೆ ಅದೃಷ್ಟ. ಇಲ್ಲದಿದ್ದರೆ ಆತ ಸತ್ತು ಹೋಗುತ್ತಾನೆ.

ಆ ರಾತ್ರಿ ಅಲ್ಲೇ ತಂಗಿದ್ದು ಮಾರನೆಯ ದಿನ ಮಳೆಯಲ್ಲೇ ಅವರೆಲ್ಲರೂ ಬಸ್ಸಿನಲ್ಲಿ ಗೋಲಾಘಾಟ್ ತಲುಪಿದರು. ಮಾರನೆಯ ದಿನ ದಶಮಿ ಭಾದ್ರಪದ ಮಾಸ. ಅದನ್ನು ತಿಳಿದು ಚಂದ್ರ ಮತ್ತು ಗುಲಬ್‌ರು ಕೆಲಾಈಯನ್ನು ಆಸ್ಪತ್ರೆಗೆ ಸೇರಿಸಿದರು. ಈಗ ಕೆಲಾಈ ಬದುಕುವುದು ಡಾಕ್ಟರ್ ಮತ್ತು ಅಲ್ಲಾನ ಕೈಯಲ್ಲಿದೆ. ಡಾಕ್ಟರ್ ಅವನನ್ನು ಪರೀಕ್ಷೆಮಾಡಿ ಭಯ ಪಡಬೇಕಾದುದೇನಿಲ್ಲವೆಂದು ಭರವಸೆ ನೀಡಿದರು. ಚಂದ್ರ, ಗುಲಬ್- ಯಾರೂ ಸಹ ಆ ಮಾತನ್ನು ನಂಬಲಿಲ್ಲ. ಸಿಪರಿಯಾ ಹಳ್ಳಿಯಿಂದ ಇಲ್ಲಿಗೆ ತಲುಪುವ ಹೊತ್ತಿಗೆ ಆತ ಮತ್ತಷ್ಟು ನಿಶ್ಶಕ್ತನಾಗಿದ್ದ. ಆಸ್ಪತ್ರೆಗೆ ಸೇರಿಸುವ ಹೊತ್ತಿಗೆ ಅವನ ಸ್ಥಿತಿ ಹೇಗಾಗಿತ್ತು ಎಂದರೆ ಯಾವ ಹೊತ್ತಿನಲ್ಲಿ ಗೊಟಕ್ ಎನ್ನುತ್ತಾನೋ? ಹಾಗಾಗುವುದು ಅಸ್ವಾಭಾವಿಕ ಅನ್ನಿಸಿರಲಿಲ್ಲ. ಡಾಕ್ಟರ್ ಸುಮ್ಮಸುಮ್ಮನೆ ಹೇಳುವುದಿಲ್ಲ. ಬಹುಶಃ ಕೆಲಾಈ ಗುಣಮುಖವಾಗಬಹುದೆಂಬ

ನಂಬಿಕೆ ಚೇನಿಮಾಇಯಲ್ಲಿ ಮೂಡಿತ್ತು.

ಚಂದ್ರ ಹೇಳಿದ್ದ ಒಂದು ಮಾತು ಚೇನಿಮಾಇಗೆ ನೆನಪಾಯಿತು. ಆಕೆ ಗುಲಬ್‌ನನ್ನು ಒಂದು ಕಡೆ ಕರೆದು ಹೇಳಿದಳು - "ನಮ್ಮ ಮನೆಯವರನ್ನು ಹೀಗೆಯೇ ಬಿಟ್ಟು ಹೋಗುವುದು ಸರಿಯೇ? ಡಾಕ್ಟರಿಗೆ ಏನಾದರೂ ಕೊಡಬೇಡವೇ? ಆ ಇಬ್ಬರೂ ಹುಡುಗಿಯರಿಗೆ ಸ್ವಲ್ಪ ದುಡ್ಡು ಕೊಟ್ಟರೆ ಬಹುಶಃ ಕೆಲಸ ಆಗುತ್ತದೆಯೇ?"

ನಡುವಿಗೆ ಕಟ್ಟಿಕೊಂಡು ಬಂದಿದ್ದ ಹಣಕೆ ಚೀಲದ ಗಂಟನ್ನು ಬಿಚ್ಚಿ ಗುಲಬ್‌ನು ಚೇನಿಯ ಕೈಗೆ ಕೊಟ್ಟ.

ಒಂದು ನೂರಹತ್ತು ರೂಪಾಯಿ ಇತ್ತು. ದೋಣಿ ಮತ್ತು ಬಸ್ಸಿಗಾಗಿ ಎಷ್ಟು ಖರ್ಚಾಯಿತೆಂಬುದು ಗೊತ್ತಿಲ್ಲ. "ಎಷ್ಟು ಕೊಡಬೇಕೆನ್ನುತ್ತೀಯೋ ಅಷ್ಟನ್ನು ಅದರಿಂದ ತೆಗೆದು ಕೊಡು."

"ನನಗೇನು ಗೊತ್ತು.?"

ಆಕೆ ರೂಪಾಯಿಯನ್ನು ಚಂದ್ರನ ಕೈಗೆ ಕೊಟ್ಟಳು.

ಹಳ್ಳಿಯಲ್ಲಿ ದೊಡ್ಡಸ್ಥಿಕೆ ತೋರಿಸಿಕೊಂಡರೂ ಇಲ್ಲಿಯ ದೊಡ್ಡ ವ್ಯಕ್ತಿಗಳೊಡನೆ ಆತ ನಮ್ರತೆಯಿಂದ ನಡೆದುಕೊಳ್ಳುತ್ತಾನೆ. ಆದರೆ ಅವನು ಚೇನಿಮಾಇ ಮತ್ತು ಗುಲಬ್‌ನ ಎದುರಿನಲ್ಲಿ ಯಾವುದೇ ರೀತಿಯ ದೌರ್ಬಲ್ಯವನ್ನೂ ತೋರಿಸಿಕೊಳ್ಳಲಿಲ್ಲ. ಆತನು ಎರಡು ಪಾದವನ್ನು ಮುಂದಿಟ್ಟು ಹೇಳಿದ - "ಇದು ಸರಕಾರಿ ಆಸ್ಪತ್ರೆ. ಡಾಕ್ಟರುಗಳಿಗೆ ಸರಕಾರದಿಂದ ಸಂಬಳ ದೊರೆಯುತ್ತೆ. ಆದರೆ ಯಾವ ರೋಗಿಯನ್ನು ಡಾಕ್ಟರು ಹೆಚ್ಚಿಗೆ ನಿಗಾದಿಂದ ನೋಡ್ತಾರೋ ಆಗ ಏನಾದರೂ ಸ್ವಲ್ಪ ಗೌರವಾರ್ಥವಾಗಿ ಕೊಡಲೇಬೇಕು. ದೊಡ್ಡದೊಡ್ಡ ಆಸ್ಪತ್ರೆಗಳ ಡಾಕ್ಟರುಗಳಿಗೆ ಮೇಲೇನಾದರೂ ಕೊಡದಿದ್ದರೆ ರೋಗಿ ಸತ್ತು ಹೋದರೂ ಯಾವ ಡಾಕ್ಟರೂ ಅವನ ಕಡೆ ತಿರುಗಿ ಸಹ ನೋಡೋದೇ ಇಲ್ಲ ಅಂತ ನಾನು ಕೇಳಿದ್ದೇನೆ. ಇಲ್ಲಿಯಾದರೂ ಇದರ ಅರ್ಥದಲ್ಲಿ ಅರ್ಘ ಕೊಡಬೇಕಾಗುತ್ತೆ. ಈ ರೀತಿ ಕೊಡೋದು ನಾಟ್ ಗುಡ್. ಆದರೆ ಕೊಡೋ ನಿಯಮ ಅಂತೂ ಇದೆ."

ಗುಲಬ್ ಹೇಳಿದ - "ಮನುಷ್ಯನ ಪ್ರಾಣಕ್ಕಿಂತ ರೂಪಾಯಿ ಹೆಚ್ಚಲ್ಲ. ಗೌರವಾರ್ಥದ ರೂಪದಲ್ಲಿ ಸ್ವಲ್ಪ ಕೊಡಬೇಕು."

ಹಣದ ಅವಶ್ಯಕತೆ ಬೀಳಬಹುದೆಂಬುದನ್ನು ಗುಲಬ್‌ನಿಗೆ ಚೇನಿ ಜ್ಞಾಪಿಸಿದಳು - "ಪತ್ರ ರಜಿಸ್ಟರ್ ಏನೋ ಮಾಡಿಸಬೇಕಾಗಿದೆಯಲ್ವೇ? ಅಲ್ಲಿಯೂ ಯಾರು ಯಾರಿಗೆ ಎಷ್ಟೆಷ್ಟು ಕೊಡಬೇಕೋ ಗೊತ್ತಿಲ್ಲ."

"ನನ್ನ ಕೆಲಸ ಆಗುತ್ತೆ. ಈ ಸಾರಿ ಆಗದೆ ಹೋದರೆ ಮತ್ತೊಮ್ಮೆ ಬರುತ್ತೇನೆ. ಮೊದಲು ರೋಗಿಷ್ಠನ ಬಗ್ಗೆ ಯೋಚಿಸು" - ಗುಲಬ್ ಹೇಳಿದ.

"ಪಟ್ಟಣವನ್ನು ನೋಡೋ ಕೆಲ್ಸ ಬಾಕಿ ಇದೆ. ಇರೋದಕ್ಕೆ ಮತ್ತು ಊಟ-ತಿಂಡಿಗೆ ವ್ಯವಸ್ಥೆ ಮಾಡಬೇಕಾಗಿದೆ" -ಚೇನಿ ಹೇಳಿದಳು.

"ಎಲ್ಲಾ ವ್ಯವಸ್ಥೆಯೂ ಆಗುತ್ತೆ. ನೀವು ಇಲ್ಲಿ ಮೂರು ನಾಲ್ಕು ದಿವಸಗಳು ಇರಲು ಸಾಧ್ಯವೇ?"

"ಯಾತಕ್ಕೆ?"

"ನಾನು ಮೂರು ದಿವಸಗಳು ಇರಬೇಕಾಗುತ್ತೆ. ನೀವು ಇರೋದಾದರೆ ಒಟ್ಟಿಗೆ ಹೋಗಬಹುದು. ಇರೋಕೆ ಆಗದೆ ಹೋದರೆ ನೀವಿಬ್ಬರೂ ಹೋಗಿ. ನಾನು ನಿಮ್ಮ ಜೊತೆಯಲ್ಲಿ ಬರೋಕೆ ಆಗೊಲ್ಲ."

ಚೇನಿಯು ಗುಲಬ್‌ನ ಮುಖ ನೋಡಿದಳು. ಗುಲಬ್ ಚೇನಿಯ ಮುಖ ನೋಡಿದ.

ಗುಲಬ್ ಹೇಳಿದ - "ನೀನೊಬ್ಬಳೇ ಹೋಗಲಾರೆ?"

ಚೇನಿ ಹೇಳಿದಳು - "ಇಲ್ಲಿ ಬಸ್ಸಿಗೆ ಹತ್ತಿಸಿದರೆ 'ದೊಡ್ಡಘಟ್ಟ'ದಲ್ಲಿ ಇಳಿದು ಅಲ್ಲಿಂದ ಹೋಗಬಲ್ಲೆ. ಆದರೆ ಒಟ್ಟಿಗೆ ಹೋಗಿದ್ದರೆ ಚೆನ್ನಾಗಿತ್ತು."

ಗುಲಬ್‌ನ ಪತ್ರ ರಿಜಿಸ್ಟರ್ ಆಗಲಿಲ್ಲ. ಉಭಯ ಪಕ್ಷದವರೂ ಹಾಜರಿರಬೇಕಾಗಿತ್ತು. ಗುಲಬ್‌ನ ಅಣ್ಣ ಬಂದಿರಲಿಲ್ಲ. ಅದರ ಬಗ್ಗೆ ಗುಲಬ್‌ನಿಗೆ ವ್ಯಥೆ ಆಗಲಿಲ್ಲ. ಆತನ ಜಮೀನು ಈಗಲೂ ಇದ್ದೇ ಇದೆ. ಅವರ ಅಣ್ಣ ಸ್ವಲ್ಪ ಹಣ ಸಹ ಕೊಟ್ಟಿದ್ದಾನೆ. ಈ ಸಾರಿ ಆಗದೆ ಹೋದರೆ ಮತ್ತೊಮ್ಮೆ ಬರುತ್ತಾನೆ. ಪಟ್ಟಣಕ್ಕೆ ಬರೋದು ಆರಂಭವಾದ ಹಾಗೆ ಆಯಿತು.

ಚಂದ್ರ, ಗುಲಬ್ ಮತ್ತು ಚೇನಿ - ಮೂವರೂ ಮಧ್ಯಾಹ್ನದ ಊಟವನ್ನು ಒಂದು ಹೋಟಲಿನಲ್ಲಿ ಮಾಡಿದರು. ಚಂದ್ರನಿಗೆ ಊಟ ಹಿಡಿಸಿದರೂ ಚೇನಿ ಮತ್ತು ಗುಲಬ್‌ನಿಗೆ ಹಿಡಿಸಲಿಲ್ಲ. ಕಹಿ ತರಕಾರಿ, ಅಷ್ಟೇ ಅಲ್ಲದೆ ಬೇಳೆ ಮತ್ತು ಅನ್ನದ ಜೊತೆಗೆ ಸ್ವಲ್ಪವೇ ಮೀನು ಕೊಟ್ಟಿದ್ದ. ಅಷ್ಟಕ್ಕೇ ಐದು ರೂಪಾಯಿ ನಾಲ್ಕಾಣೆ ಕೊಡಬೇಕಾಯಿತು.

ಒಂದು ಟೀ ಅಂಗಡಿಗೆ ಹೋಗಿ ರಸಗುಲ್ಲ ಮತ್ತು ಟೀ ಕುಡಿದ ಮೇಲೆ ಅವರಿಗೆ ಖುಷಿಯಾಯಿತು. ಪಟ್ಟಣದಲ್ಲಿ ಟೀ ಮಾಡುವ ವಿಧಾನವೇ ಬೇರೆ. ಸಕ್ಕರೆ ಮತ್ತು ಹಾಲು ಬೆರಸಿ ಕಾಯಿಸುತ್ತಾರೆ. ಕುಡಿದರೆ ಮತ್ತೇರುವುದಿಲ್ಲ. ಆದರೆ ಸಿಹಿಯಾಗಿರುತ್ತೆ. ಮಿಠಾಯಿ ಗುಲಬ್‌ಗೆ ಹಿಡಿಸಿತು. ಆತ ಮತ್ತೊಂದು ಲಾಲ್‌ಮೋಹನ್ ಮತ್ತು ಪೇಡಾ ತೆಗೆದುಕೊಂಡು ತಿಂದ. ಸಾಕಷ್ಟು ದುಡ್ಡು ಖರ್ಚಾಯಿತು. ಆದರೆ ಆವನಿಗೇನೂ ವ್ಯಥೆಯಾಗಲಿಲ್ಲ. ಪಟ್ಟಣಕ್ಕೆ ಬಂದಮೇಲೆ ಖರ್ಚು ಆಗಿಯೇ ಆಗುತ್ತೆ.

ಮಳೆ ಬೀಳುತ್ತಿದ್ದ ಕಾರಣ ಅವರಿಗೆ ಹೆಚ್ಚಿಗೆ ಸುತ್ತಾಡಲಾಗಲಿಲ್ಲ. ಆದಾಗ್ಯೂ ಚಂದ್ರ ಇಬ್ಬರು ರಿಕ್ಷಾಗಾಡಿಯವರನ್ನು ಕರೆದ. ಒಂದರಲ್ಲಿ ತಾನು ಕುಳಿತುಕೊಂಡ. ಮತ್ತೊಂದರಲ್ಲಿ ಗುಲಬ್ ಮತ್ತು ಚೇನಿಯನ್ನು ಕುಳ್ಳಿರಿಸಿದ. ಪಟ್ಟಣದಲ್ಲಿ ಸುತ್ತಾಡಿಸಿದ. ಕಚೇರಿ, ಹೈಸ್ಕೂಲು, ಬರುವಾ ಭವನ, ಯಮುನಾ, ದೋಸ್ ಕಂಪನಿ - ಮುಂತಾದ ಅನೇಕ ಸ್ಥಾನಗಳನ್ನು ತೋರಿಸಿದ.

ಆರಂಭದಲ್ಲಿ ಗುಲಬ್ ಮತ್ತು ಚೇನಿಗೆ ಅಚ್ಚರಿಯಾಯಿತು. ಕುತೂಹಲದಿಂದ ಆಕಡೆ ಈಕಡೆ ನೋಡುತ್ತಿದ್ದರು. ಆದರೆ ಸ್ವಲ್ಪ ಹೊತ್ತಾದಮೇಲೆ ಕುತೂಹಲವಿದ್ದರೂ ವಿಸ್ಮಯವಿರಲಿಲ್ಲ. ಎಲ್ಲವೂ ಪರಿಚಿತ ವಸ್ತುಗಳಂತೆ ಕಾಣತೊಡಗಿದವು. ಅವರು ಪಟ್ಟಣದಲ್ಲಿ ಬಹಳ ದಿವಸಗಳಿಂದಲೂ ಇರುವಂತೆ ಭಾಸವಾಯಿತು.

ಚಂದ್ರ ಪಶ್ಚಾತ್ತಾಪ ವ್ಯಕ್ತಪಡಿಸಿದ - "ನಿಮ್ಮ ಅದೃಷ್ಟ ಚೆನ್ನಾಗಿಲ್ಲ. ಹವಾಮಾನ ಹಿತಕರವಾಗಿರಬೇಕಾಗಿತ್ತು. ಆಗ ಸುತ್ತಾಡಿದ್ದರೆ ಆರಾಮವಾಗಿರುತ್ತಿತ್ತು. ನೀವೂ ಬಂದಿರಿ, ಮಳೆಯೂ ಬಂತು. ಹೇಗೆ ಸುತ್ತಾಡೋದು? ಏನನ್ನು ನೋಡೋದು?"

ಆದರೆ ಗುಲಬ್ ಹೇಳಿದ - "ಆಯಿತು. ಪಟ್ಟಣ ನೋಡಿದ್ದಾಯಿತು. ಪಟ್ಟಣವೂ

ಹಳ್ಳಿಯಂತೆಯೇ ಇದೆ. ಜಾಸ್ತಿ ಜನ ಇದ್ದಾರೆ." ಜಾಸ್ತಿ ಅಂಗಡಿಗಳಿವೆ. ಮತ್ತೇನಿದೆ? ಪಟ್ಟಣ ಏನೋ ಒಂದು ರೀತಿ ಸೊಗಸಾಗಿ ಇರುತ್ತೆ ಅಂತ ನಾನು ತಿಳಿದುಕೊಂಡಿದ್ದೆ. ಒಂದೇ ದಿನಕ್ಕೆ ಬೇಸರವಾಯಿತು."

ಗುಲಬ್‌ನಿಗೆ ಮತ್ತೊಂದು ಯೋಚನೆ.

ಆತನಿಗೆ ಪದೇಪದೇ ತರಾಳ ಜ್ಞಾಪಕ ಬರುತ್ತಿತ್ತು. ಮನೆಯಲ್ಲಿ ತರಾ ಮತ್ತು ಕಪಾಹಿ ಇಬ್ಬರೇ ಇದ್ದಾರೆ. ಅದಲ್ಲದೆ ಮೂರು ದಿನಗಳಿಂದ ಭಾರಿ ಮಳೆ ಧಾರಾಕಾರವಾಗಿ ಬೀಳುತ್ತಿದೆ. ಹವಾಮಾನ ಚೆನ್ನಾಗಿಲ್ಲ. ಮಳೆ ಬೀಳುವುದರಿಂದ ಏನೂ ನಷ್ಟ ಆಗೊಲ್ಲ. ಆದರೆ ಧನಶಿರಿಯಲ್ಲಿ ಪ್ರವಾಹ ಬರದಿದ್ದರೆ ಸರಿ. ದನಕರುಗಳನ್ನು ಬಿಟ್ಟು ಬಂದಿದ್ದಾನೆ. ಜಾಸ್ತಿನೀರು ಬಂದರೆ ಒಬ್ಬಳೇ ಹೆಂಗಸು ಏನು ಮಾಡುತ್ತಾಳೆ? ಆದರೆ ಆತನ ಮನೆ ಬೋರೆಯಲ್ಲಿದೆ. ಸಾಮಾನ್ಯವಾಗಿ ನೀರು ಅಲ್ಲಿಯವರೆಗೂ ಹತ್ತುವುದಿಲ್ಲ.

ರಾತ್ರಿಗೂ ಮೂವರೂ ಹೋಟಲಿನಲ್ಲಿ ಊಟ ಮಾಡಿದರು.

ಚಂದ್ರನ ಜೊತೆಯಲ್ಲಿ ಗುಲಬ್ ಹೇಳಿದ - "ರಾತ್ರಿಗೆ ಎಲ್ಲೋ ಒಂದು ಕಡೆ ತಂಗುವ ವ್ಯವಸ್ಥೆ ಮಾಡು. ನಾಳೆ ಬೆಳಿಗ್ಗೆಯೇ ನಾನು ಹೊರಟು ಹೋಗ್ತೀನಿ. ಯಾಕೋ ಸರಿ ಬೀಳುತ್ತಿಲ್ಲ."

ಚಂದ್ರ ಹೇಳಿದ - "ಏನೂ ಯೋಚಿಸಬೇಡ. ನನಗೆ ಪರಿಚಯವಿರುವ ಕೆಲವು ಹುಡುಗರಿದ್ದಾರೆ. ನಾನು ಬಂದಾಗಲೆಲ್ಲಾ ಅವರ ರೂಮಿನಲ್ಲೇ ಇರುತ್ತೇನೆ. ಅವರು 'ಮೆಸ್'ನಲ್ಲಿ ಇದ್ದಾರೆ. ನಾವು ಸಹ ರಾತ್ರಿಗೆ ಅಲ್ಲೇ ತಂಗೋಣ."

"ಅಲ್ಲಿ ಜಾಗ ಇದೆಯೇನು?" - ಗುಲಬ್ ಕೇಳಿದ.

"ಇದೆ. ಸ್ವಲ್ಪ ಅನನುಕೂಲ ಆಗಬಹುದು. ಹುಲ್ಲಿನ ಗುಡಿಸಲು. ಜಾಗ ಬಹಳ ಕಡಿಮೆ. ನಿಮ್ಮಿಬ್ಬರಿಗೂ ಏನೂ ತೊಂದರೆ ಆಗೊಲ್ಲ. ನನಗೆ ಎಲ್ಲಾದರೂ ವ್ಯವಸ್ಥೆ ಮಾಡಿಕೊಳ್ತೀನಿ."

ರಿಕ್ಷಾದಲ್ಲಿ ಮೂವರೂ ಬಂದು ಪಟ್ಟಣದ ಒಂದು ಮೂಲೆಯಲ್ಲಿದ್ದ ಗುಡಿಸಿಲಿನ ಮುಂದೆ ಇಳಿದರು. ಲಾಟೀನು ಹಿಡಿದುಕೊಂಡು ಒಬ್ಬ ಹುಡುಗ ಹೊರಗಡೆ ಬಂದ.

"ಇವರೇನಾ?"

ಒಳಗಡೆ ಹೋಗಿ ಚಂದ್ರ ಹೇಳಿದ - "ಅಹುದು. ಆದರೆ ಇಲ್ಲಿ ವ್ಯವಸ್ಥೆ ಮಾಡಿದ್ದೀಯಾ?"

ಹುಡುಗ ಹೇಳಿದ - "ಅಲ್ಲೇ ಹಾಸಿಗೆ ಹಾಸಿದೆ. ನೀವು ಮತ್ತು ನಾನು ರಮೇಶನ ಮನೆಗೆ ಹೋಗಲೇ ಬೇಕಾಗುತ್ತೆ. ಅಲ್ಲಿ ಯದು ಮಾತ್ರ ಇದ್ದಾನೆ. ಒಂದು ಹಾಸಿಗೆ ಖಾಲಿ ಬಿದ್ದಿದೆ. ಅಲ್ಲೇ ನಾವು ಮಲಗಿಕೊಳ್ಳಬಹುದು."

ಗುಲಬ್ ಹೇಳಿದ - "ನಮ್ಮ ಹತ್ತಿರವೂ ಬಟ್ಟೆ ಬರಿ ಇವೆ."

ಹುಡುಗ ಹೇಳಿದ - "ನೀವು ಇಲ್ಲೇ ಮಲಗಿಕೊಳ್ಳಿ. ಏನೂ ಯೋಚಿಸಬೇಡಿ. ನಾವು ಹತ್ತಿರದಲ್ಲೇ ಇರುತ್ತೇವೆ. ರಾತ್ರಿಯಲ್ಲಿ ಏನಾದರೂ ಏಳಬೇಕಾದರೆ ಕೂಗಿ."

ಚಂದ್ರ ಸಹ ಎಲ್ಲಾ ಜಾಗವನ್ನೂ ತೋರಿಸಿದ. ಅನಂತರ ಅವನು ರಮೇಶನ ಮನೆಯಲ್ಲಿ ಮಲಗಲು ಹೊರಟು ಹೋದ. ಚೇನಿ ಮತ್ತು ಗುಲಬ್ ಮಲಗುವುದು ಹೇಗೆ? ಅದರ ಬಗ್ಗೆ ಆತ ಯೋಚನೆ ಮಾಡಲಿಲ್ಲ.

ಒಂದು ಮಂಚದ ಮೇಲೆ ಒಂದು ಹಾಸಿಗೆ ಹಾಸಿತ್ತು. ಇನ್ನೊಂದು ಬರೇ ಮರಾಕ ಇದೆ.

ಅದರಲ್ಲಿ ಹಾಸಿಗೆ ಇರಲಿಲ್ಲ.

ಆ ಕಡೆ ಈ ಕಡೆ ನೋಡಿ ಗುಲಬ್ ಹೇಳಿದ - "ನೀನು ಅಲ್ಲೇ ಮಲಗಿಕೋ. ನಾನು ಇಲ್ಲೇ ಹೇಗೋ ಮಲಗುತ್ತೇನೆ."

"ಬೇರೆಯವರ ಹಾಸಿಗೆಯ ಮೇಲೆ ಮಲಗೋದು ನನಗೆ ಇಷ್ಟವಿಲ್ಲ. ನೀವೇ ಮಲಗಿ. ನಾನೇ ಅಲ್ಲಿ ಮಲಗುತ್ತೇನೆ."

"ಇಲ್ಲ. ನೀವು ಅಲ್ಲೇ ಮಲಗಿ. ಇಲ್ಲಿ ಮಂದವಾದ ಬಟ್ಟೆ ಮಾತ್ರ ಹಾಸಿದೆ. ಒತ್ತುತ್ತೆ."

ಚೇನಿ ಹಾಸಿಗೆ ಹಾಸಿದ್ದ ಮಂಚದ ಮೇಲೆ ಮಲಗಲು ಹೋಗಲಿಲ್ಲ.

"ನಿನ್ನ ಇಷ್ಟ" - ಎಂದು ಹೇಳಿ ಆಯಾಸಗೊಂಡಿದ್ದ ಗುಲಬ್ ಅಲ್ಲೇ ಪವಡಿಸಿದ.

ಮಳೆ ಧಾರಾಕಾರವಾಗಿ ಸುರಿಯುತ್ತಿತ್ತು. ಮಳೆಯ ಸದ್ದಲ್ಲದೆ ಬೇರೆ ಯಾವುದೇ ತರಹದ ಸದ್ದೂ ಕೇಳಿಸುತ್ತಿರಲಿಲ್ಲ. ಸ್ವಲ್ಪ ಚಳಿಯಾಗುತ್ತಿತ್ತು. ಗುಡಿಸಲಿನ ಗೋಡೆಗಳ ಸಂದಿನಿಂದ ಗಾಳಿ ನುಗ್ಗುತ್ತಿತ್ತು.

ಚೇನಿಮಾಇ ತನ್ನ ಗಂಟನ್ನು ಬಿಚ್ಚಿ ಒಂದು ಜೊತೆ ಬಟ್ಟೆ ತೆಗೆದಳು. ಉಟ್ಟಿದ್ದ ಬಟ್ಟೆಯನ್ನು ಒಣಗಲು ಹಾಕಿದಳು. ಬಟ್ಟೆ ಒದ್ದೆಯಾಗಿದ್ದುವು. ಅನಂತರ ತನ್ನ ಜೊತೆಯಲ್ಲಿ ತಂದಿದ್ದ ದೊಡ್ಡ ಬಟ್ಟೆಯನ್ನು ತೆಗೆದು ಹಾಸಿಕೊಂಡು ಗುಲಬ್ ಮಲಗಿದ್ದ ಹಾಸಿಗೆಯ ಒಂದು ಮೂಲೆಯಲ್ಲಿ ಮಲಗಿಕೊಂಡು ಹೇಳಿದಳು - "ಬೇರೆಯವರ ಹಾಸಿಗೆಯ ಮೇಲೆ ಮಲಗಲಾರೆ. ನೋಡು ಸ್ವಲ್ಪ ಆಕಡೆ ಮಲಗಿಕೊ."

ಮಲಗಿಕೊಂಡು ಆಕೆ ದೀಪ ಆರಿಸಿದಳು.

ಸ್ವಲ್ಪ ಹೊತ್ತಿನ ತನಕ ಇಬ್ಬರೂ ಮೌನವಾಗಿದ್ದು ನಿದ್ರಿಸಲು ಪ್ರಯತ್ನಿಸಿದರು. ಆದರೆ ಒಬ್ಬರಿಗೂ ನಿದ್ರೆ ಹತ್ತಲಿಲ್ಲ.

"ಚೇನಿ..............?"

"ಹೂಂ."

"ನಾಳೆ ನಾವು ಇಲ್ಲಿಂದ ಹೊರಡಲೇ ಬೇಕು. ಜೋರಾಗಿ ಮಳೆ ಬಿದ್ದಿದೆ. ನಮ್ಮ ಕಡೆ ಏನಾಗಿದೆಯೋ ಗೊತ್ತಿಲ್ಲ."

"ಅಹುದು. ನದಿಯಲ್ಲಿ ಪ್ರವಾಹ ಬರದಿದ್ದರೆ ಮೇಲು."

ಆಕೆ ಗುಲಬ್‌ನ ಕಡೆ ಮಗ್ಗುಲಾಗಿ ಹೊರಳಿದಳು.

"ನೀನು ನನಗೋಸ್ಕರ ಬಹಳ ಕಷ್ಟಪಟ್ಟಿರಿ ಅಲ್ವೇ?

ಗುಲಬ್ ಏನೂ ಮಾತನಾಡಲಿಲ್ಲ. ಆತನು ಸಹ ಚೇನಿಯ ಮುಖದ ಕಡೆ ಮಗ್ಗುಲಾಗಿ ಮಲಗಿದ.

"ನನಗೂ ನಿಮ್ಮ ಹಣದಲ್ಲೇ ಖರ್ಚು ಮಾಡುತ್ತಿದ್ದೀರಿ? ನಮ್ಮ ಮನೆಯವರು ಗುಣಮುಖರಾಗುತ್ತಾರೆಯೇ?"- ಚೇನಿಯ ಮಾತಿನಲ್ಲಿ ಸಂದೇಹವಿತ್ತು.

"ಹೇಗೆ ಗೊತ್ತಾಗುತ್ತೆ? ವಾಸಿಯಾಗಬಹುದು" - ಗುಲಬ್ ಹೇಳಿದ.

"ನನ್ನ ಮನಸ್ಸು ಹೇಳುತ್ತಿದೆ : ಅವರಿಗೆ ಗುಣಮುಖವಾಗುವುದಿಲ್ಲ. ಅವರಿಗೆ ಕಾಯಿಲೆ ವಾಸಿಮಾಡಿಕೊಳ್ಳಬೇಕೆಂಬ ಬಹಳ ಆಶೆ ಇತ್ತು."

"ಅಹುದು"- ಗುಲಬ್ ಸ್ವಾಭಾವಿಕವಾಗಿಯೇ ಹೇಳಿದ.

ಇಬ್ಬರೂ ಸ್ವಲ್ಪ ಹೊತ್ತು ಮೌನವಾಗಿದ್ದರು. ಟಪ್ ಟಪ್ ಎಂದು ಬೀಳುತ್ತಿದ್ದ ಮಳೆಯ ಸದ್ದವನ್ನು ಕೇಳಿಕೊಳ್ಳುತ್ತಿತದ್ದರು.

ಮೆಲ್ಲಗೆ ಚೇನಿ ಹೇಳಿದಳು- "ನಾವಿಬ್ಬರೂ ಒಟ್ಟಿಗೆ ಇದ್ದೀವಲ್ಲಾ. ಚಂದ್ರ ಈ ಬಗ್ಗೆ ಏನೂ ಯೋಚಿಸೋದಿಲ್ವೇ?"

"ಚಂದ್ರ ಏನೂ ಅಂದುಕೊಳ್ಳುವುದಿಲ್ಲ. ಅವನು ಒಂದು ತರಹ ಮನುಷ್ಯ"- ಗುಲಬ್ ಹೇಳಿದ.

"ನಿಜವೇ?"- ಚೇನಿ ಕೇಳಿದಳು. ಅನಂತರ ಗುಲಬ್‌ನ ಕಡೆ ಇನ್ನಷ್ಟು ಹತ್ತಿರ ಸರಿದು ಹೇಳಿದಳು.- "ಅಂದುಕೊಂಡರೆ ಅಂದುಕೊಳ್ಳಲಿ ಬಿಡಿ."

## ಮೂವತ್ತಮೂರು

ದೊಡ್ಡಘಟ್ಟದ ಬಳಿ ಬಸ್ಸಿನಿಂದ ಇಳಿದು ಗುಲಬ್ ಮತ್ತು ಇನ್ನಿತರರು ಧನಸಿರಿಯ ದರ್ಶನ ಮಾಡಿದರು. ಅದರ ಸ್ವರೂಪವನ್ನು ನೋಡಿ ಆತನ ಎದೆ ಝಲ್ಲೆಂದಿತು. ಧನಸಿರಿಯಲ್ಲಿ ನೀರೋ ನೀರು. ಎಲ್ಲೆಲ್ಲೂ ನೊರೆಯೋ ನೊರೆ. ನದಿಯ ದಡಗಳು ಬಿರುಕು ಬಿಡುವುದರಲ್ಲಿವೆ. ಇಂದು ಮಳೆ ಸ್ವಲ್ಪ ನಿಂತಿದೆ. ಇದೇ ರೀತಿ ಇದ್ದರೆ ಪ್ರವಾಹ ಹೆಚ್ಚದೆ ಏಕರೀತಿಯಾಗಿರುತ್ತೆ. ಆದರೆ ಮೇಲುಗಡೆಯ ಬೆಟ್ಟದಲ್ಲಿ ಮಳೆ ಬಿದ್ದರೆ ಈ ಸಾರಿ ಧನಸಿರಿ ದಡ ಕೊಚ್ಚಿಹೋಗುವ ಹಾಗೆ ಹರಿಯುತ್ತೆ. ಇದರಲ್ಲೇನೂ ಸಂಶಯವಿಲ್ಲ.

ಸ್ವಲ್ಪ ಕೆಳಭಾಗಕ್ಕೆ ಹೋಗಿ ಡಾಲಿಮ್ ಘಟ್ಟದಲ್ಲಿ ಇಳಿದರೆ ಅವರು ಬೇಗ ತಲುಪ ಬಹುದು. ಆದರೆ ಆ ರೀತಿ ಮಾಡೋಕೆ ಸಾಧ್ಯವಿಲ್ಲ. ಸಣ್ಣ ದೋಣಿಯಲ್ಲಿ ಹೋದರಂತೂ ಅಪಾಯದಿಂದ ತಪ್ಪಿಸಿಕೊಳ್ಳುವಂತಿಲ್ಲ. ದೊಡ್ಡ ದೋಣಿ ಘಟ್ಟದಲ್ಲಿರಲಿಲ್ಲ. ಬಸೀರತ್‌ನ ದೋಣಿ ವಾಪಸು ಹೊರಟು ಹೋಗಿತ್ತು.

ಚಂದ್ರ ಇದ್ದರೆ ಯೋಚಿಸಿ ಏನಾದರೂ ಮಾಡುತ್ತಿದ್ದ. ಅವನಲ್ಲಿ ಸಾಹಸವಿದೆ. ಬುದ್ಧಿವಂತಹ. ಇಲ್ಲದಿದ್ದರೆ ಪಟ್ಟಣ ಮತ್ತು ಹಳ್ಳಿ-ಹೀಗೆ ಎಲ್ಲ ಕಡೆಗಳಲ್ಲಿಯೂ ಮುಂದಾಳಾಗಿ ಇರುತ್ತಿದ್ದನೇ?

ಆದರೆ ಆತ ಪಟ್ಟಣದಲ್ಲಿಯೇ ಉಳಿದುಕೊಂಡ. ಯಾರನ್ನೋ ಭೇಟಿ ಮಾಡಬೇಕು ಅಂತಿದ್ದ. ಸಿಪರೀಯಾ ಹಳ್ಳಿಯಲ್ಲಿ ಇತ್ತೀಚೆಗೆ ಸ್ಥಾಪಿಸಿದ ಪಾಠಶಾಲೆಯ ಗ್ರ್ಯಾಂಟ್ ವಿಷಯವಾಗಿ ಯಾರನ್ನೋ ಭೇಟಿಮಾಡಬೇಕಾಗಿದೆಯಂತೆ. ಅದೆಷ್ಟು ಕೆಲಸ ಹಚ್ಚಿಕೊಂಡಿದ್ದಾನೋ ಗೊತ್ತಿಲ್ಲ. ಆತ ಬಹುಶಃ ನಾಳಿದ್ದಿನ ಹೊತ್ತಿಗೆ ಬರಬಹುದು. ನಮ್ಮ ಜೊತೆಯಲ್ಲೇ ಬಂದಿದ್ದರೆ ಜನರ ಕೆಲಸ ಹೇಗೆ ಆಗುತ್ತೆ?

ಚೇನಿ ಮತ್ತು ಗುಲಬ್ ಇಬ್ಬರೂ ಹೊರಟರು. ಹಾದಿ ಸರಿಯಾಗಿರಲಿಲ್ಲ. ಸಾಕಷ್ಟು ದೂರ ಇದೆ. ಬೇಸಿಗೆ ಕಾಲದಲ್ಲಿ ಆರೇಳು ಮೈಲಿಗಳ ದೂರ ಆಗುತ್ತೆ. ಈಗ ಮಳೆಗಾಲದಲ್ಲಿ ಸುತ್ತಿ, ಬಳಸಿಕೊಂಡು ಹೋಗುವುದರಿಂದ ಹತ್ತು ಮೈಲಿಗಳಿಗಿಂತ ಕಡಿಮೆಯಾಗುವುದಿಲ್ಲ. ಹತ್ತು

ಮೈಲಿ ನಡೆದುಕೊಂಡು ಹೋಗುವುದು ಗುಲಚ್‌ನಿಗೆ ಅಂಥ ಕಷ್ಟದ ಕೆಲಸವೇನೂ ಅಲ್ಲ. ಬಹುಶಃ ಚೇನಿಗೆ ಸ್ವಲ್ಪ ಕಷ್ಟ ಆಗಬಹುದು.ಹಾದಿ-ಘಟ್ಟ ಸಹ ಕೆಸರಿನಿಂದ ತುಂಬಿದೆ.

ಬೆಳಿಗ್ಗೆಯೇ ಆಸ್ಪತ್ರೆಗೆ ಹೋಗಿ ಕೆಲಾಈಗೆ ಹೇಳಿ ಬಂದಿದ್ದರು. ಆಗ ಗುಲಚ್ ಕೆಲಾಈಗೆ ತಿಳಿಸಿದ - "ಕಷ್ಟ ಬಂದಾಗ ಬೇಕಾಗುತ್ತೆ, ಇಟ್ಟುಕೊ." "ಡಾಕ್ಟರ್ ನೀನು ಗುಣವಾಗುತ್ತೀಯೆ ಎಂದು ಹೇಳಿದ್ದಾರೆ. ಏನೂ ಚಿಂತೆ ಮಾಡಬ್ಯಾಡ." ಅನಂತರ ಆತನ ಕೈಗೆ ಹದಿನೈದು ರೂಪಾಯಿ ಕೊಟ್ಟು ಗುಲಚ್ ಹೇಳಿದ -

ಕಲಾಈ ಎರಡು ತೊಟ್ಟು ಕಂಬನಿಗಳಿಂದ ತನ್ನ ಅವ್ಯಕ್ತ ಕೃತಜ್ಞತೆ ಸಲ್ಲಿಸಿದ್ದ.

ಚೇನಿಯು ಕೆಲಾಈಯ ಮುಖದ ಮೇಲೆ ಕೈಯಿಟ್ಟು ನೋಡಿದಳು. ಕೈಕಾಲುಗಳನ್ನು ಸುಮ್ಮನೆ ಉಜ್ಜಿ ನೋಡಿ ಅನಂತರ ಹೇಳಿದಳು- "ಇಲ್ಲಿ ಇರಲು ಏನೂ ಅನುಕೂಲ ಇಲ್ಲ. ಎಲ್ಲರೂ ಅಪರಿಚಿತ ಜನ. ತುಂಬಾ ಖರ್ಚಾಗುತ್ತೆ. ಇಲ್ಲದಿದ್ದರೆ ನಾನು ಇದ್ದೆ ಇರುತ್ತಿದ್ದೆ."

ಆಕೆಯ ಮುಖವನ್ನು ದೃಷ್ಟಿಸಿ ನೋಡು ಕ್ಷೀಣ ಸ್ವರದಲ್ಲಿ ಕೆಲಾಈ ಹೇಳಿದ- "ಇಲ್ಲಿರಬೇಕಾದ ಅಗತ್ಯವಿಲ್ಲ. ಊಟ ಎಲ್ಲಿ ಮಾಡ್ತೀಯಾ? ಇರೋದು ಜಾಗ ಎಲ್ಲಿ? ಗುಲಚಣ್ಣನ ಜೊತೆಯಲ್ಲಿ ನೀನು ಹೋಗು."

ಸ್ವಲ್ಪ ತಡೆದು ಹೇಳಿದ- "ನಮ್ಮ ಮನೆಯಲ್ಲಂತೂ ಏನೂ ಇಲ್ಲ. ನಮ್ಮ ಮುದುಕ ಊಟಕ್ಕೆ ಏನು ಏರ್ಪಾಡು ಮಾಡ್ತಾನೆ. ತಿಖಿರ್ ತಾನೇ ಏನು ಮಾಡ್ತಾನೆ? ಒಂದೂ ಅರ್ಥವಾಗುವುದಿಲ್ಲ. ನೀನು ನನ್ನನ್ನು ಕಟ್ಟಿಕೊಂಡು ಸುಖ ಅನುಭವಿಸಲಿಲ್ಲ. ಬಹಳ ಕಷ್ಟ ಅನುಭವಿಸಿದೆ. ಗುಲಚಣ್ಣ ನಿನ್ನ ಯೋಗಕ್ಷೇಮ ನೋಡಿಕೊಳ್ಳುತ್ತಾನೆ."

ಇಷ್ಟು ಹೇಳಿ ಆತ ದಣಿದ. ಆತನ ಕಣ್ಣುಗಳ ಅಂಚಿನಲ್ಲಿ ನೀರು ತುಂಬಿಕೊಂಡಿತು. ಚೇನಿ ಮತ್ತು ಗುಲಚ್ ಸ್ವಲ್ಪ ಹೊತ್ತಿನ ತನಕ ಆತನ ಕಡೆ ನೋಡುತ್ತಲೇ ಇದ್ದರು. ಅವರಿಗೆ ಅವನ ಕಣ್ಣುಗಳಲ್ಲಿ ಜೀವನದ ಜ್ಯೋತಿ ಕಾಣಿಸಲಿಲ್ಲ. ಒಂದೇ ಸಮನೆ ಆತ ಮೃತ್ಯುವಿನ ಕಡೆ ಧಾವಿಸುತ್ತಿರುವಂತೆ ಭಾಸವಾಯಿತು.

ಚೇನಿಯ ಕಣ್ಣುಗಳಲ್ಲಿ ಕಣ್ಣೀರು ಬಂತು.

ಬಹುಶಃ ತನ್ನ ಪತಿದೇವನ ರೂಪವನ್ನು ನೋಡಿ ಅಲ್ಲ. ಬದುಕಬೇಕೆಂಬ ಬಯಕೆ ಹೊಂದಿರುವ ಒಬ್ಬ ತರುಣನನ್ನು ನೋಡಿ.

ಅನಂತರ ಅವರು ಆಸ್ಪತ್ರೆಯಿಂದ ಹೊರಬಂದರು.

ದೊಡ್ಡಘಾಟಿಗೆ ಬರುವ ಹೊತ್ತಿಗೆ ಮಧ್ಯಾಹ್ನವಾಗಿತ್ತು. ಬೇಗ ಮನೆ ಸೇರುವುದೇ ಮೇಲು. ಇಲ್ಲದಿದ್ದರೆ ಮನೆ ತಲುಪುವ ಹೊತ್ತಿಗೆ ರಾತ್ರಿಯಾಗುತ್ತೆ.

ಕೆಸರಿನಲ್ಲಿ ನಡೆಯುವ ಅಭ್ಯಾಸ ಇಬ್ಬರಿಗೂ ಇದೆ. ಗುಲಚ್ ತರುಣ, ಆಕೆ ತರುಣಿ. ಇಬ್ಬರೂ ದೃಢಕಾಯರಾಗಿದ್ದಾರೆ. ಗುಲಚ್‌ನಿಗೆ ಇಪ್ಪತ್ತೇಳು ವರ್ಷ, ಚೇನಿಗೆ ಇಪ್ಪತ್ತೊಂದು ವರ್ಷ. ಕಾಡಿನ ಮಧ್ಯದ ಹಾದಿಯಲ್ಲಿ ಅವರಿಬ್ಬರೂ ನಿಧಾನವಾಗಿ ಹೊರಟರು. ದಕ್ಷಿಣ ದಿಕ್ಕಿನ ಆಕಾಶದಲ್ಲಿ ಕಾರ್ಮೋಡ ಕವಿದಿದೆ. ಮಳೆಗಾಲದ ಮಳೆ, ನಂಬಲಾಗುವುದಿಲ್ಲ. ರಸ್ತೆಯಿಲ್ಲ. ಮಳೆಗೆ ಸಿಕ್ಕಿಬಿದ್ದರೆ ತಲೆ ಮರೆಸಿಕೊಳ್ಳಲೂ ಎಲ್ಲಾ ಜಾಗವಿಲ್ಲ. ನೆನೆದು ಚೆನ್ನಾಗಿ ಒದ್ದೆಯಾಗಬೇಕು.

ನಿರ್ಜನ ಹಾಗೂ ನಿಶ್ಶಬ್ದವಾದ ರಸ್ತೆ. ಜೊತೆಯಲ್ಲಿ ಚಿರಪರಿಚಿತ ಯುವತಿಯನ್ನು

ಕರೆದುಕೊಂಡು ಮಧ್ಯಾಹ್ನದ ನಿಶ್ಶಬ್ದತೆಯನ್ನು ಭಂಗಪಡಿಸಿ ನಡೆಯುವುದರಲ್ಲಿ ಒಂದು ತರವಾದ ಆನಂದವಾಗುತ್ತೆ. ಇಬ್ಬರ ಮನಸ್ಸಿನಲ್ಲೂ ಅಪಾರ ಕತೆಗಳಿವೆ. ಆದರೆ ಹೇಳಬೇಕಾದ ಅವಶ್ಯಕತೆಯಿಲ್ಲ. ಇಂದು ಚೇನಿಗೆ ಗುಲಬ್‌ನೇ ಆಧಾರ ಹಾಗೂ ಆಶ್ರಯ. ಆಕೆ ಆತನನ್ನೇ ಅವಲಂಬಿಸಿದ್ದಾಳೆ. ಆತ ಅವಳನ್ನು ಎಲ್ಲಾ ವಿಪತ್ತುಗಳಿಂದ ರಕ್ಷಿಸುತ್ತಿರುತ್ತಾನೆ.

ಗುಲಬ್ ಇಲ್ಲಿಯತನಕ ಸಹ ಚೇನಿಯ ಬಗ್ಗೆ ನಿರ್ಣಯ ತೆಗೆದುಕೊಳ್ಳಲಾರದವನಾಗಿದ್ದಾನೆ.

ಕೆಲಾಈ ಇನ್ನೂ ಜೀವಂತವಾಗಿದ್ದಾನೆ. ಬಹುಶಃ ಆತ ಬದುಕಬಹುದು. ಆಗ ಅವನಿಗೆ ಅಷ್ಟೊಂದು ಚಿಂತೆಯಿಲ್ಲ. ಆದರೆ ಕೆಲಾಈ ತೀರಿ ಹೋದರೆ.'

ಚೇನಿಯ ಯೋಗಕ್ಷೇಮ ಗುಲಬ್ ನೋಡಿಕೊಳ್ಳಬಲ್ಲ. ಖರ್ಚು ಸಹ ವಹಿಸಿಕೊಳ್ಳ ಬಲ್ಲ. ಆದರೆ ಅವರಿಬ್ಬರ ಸಾಮಾಜಿಕ ಸಂಬಂಧ ಏನಾಗುತ್ತೆ? ಕಪಾಹಿ ಇದ್ದಾಳೆ. ತರಾ ಇದ್ದಾಳೆ. ಸಮಾಜ ಬೇರೆ ಇದೆ.

ಗುಲಬ್‌ನ ಯೋಚನೆಗೆ ಅಡ್ಡಿಮಾಡಿ ಮಧ್ಯದಲ್ಲೇ ಚೇನಿ ಹೇಳಿದಳು- "ಏನು ಯೋಚನೆ ಮಾಡುತ್ತಿದ್ದೀರಿ? ನನ್ನ ಬಗ್ಗೆ ಅಷ್ಟಾಗಿ ಯೋಚಿಸೋ ಅಗತ್ಯವಿಲ್ಲ."

"ಯೋಚಿಸದಿದ್ದರೆ ಹೇಗೆ?"- ಗುಲಬ್ ಹೇಳಿದ.

ಚೇನಿ ಹೇಳಿದಳು- "ಯೋಚನೆ ಮಾಡಿ ಏನು ಮಾಡಬಲ್ಲರಿ? ನನ್ನ ಹಣೆಯ ಬರಹವಿದ್ದಂತೆ ಆಗುತ್ತೆ."

ಸ್ವಲ್ಪ ತಡೆದು ಆಕೆ ಹೇಳಿದಳು- "ನನಗೆ ಏನಾದರೂ ಆದರೆ ನೀವು ಚಿಂತಿಸಬೇಡಿ."

"ನೀನು ಹೇಗೆ ಜೀವನ ಸಾಗಿಸುತ್ತೀಯೇ?"

"ಕಪಾಹಿ ಜೊತೆಯಲ್ಲಿದ್ದರೂ ನೀವು ಈಗ ನನ್ನೊಡನೆ ಸ್ನೇಹದಿಂದ ಇಲ್ಲವೇ? ಇದೇ ರೀತಿ ಸ್ನೇಹದಿಂದ ಇರಿ. ನನಗೆ ಇನ್ನೇನು ಬೇಕು? ನೀವು ಎಲ್ಲಿಯವರೆಗೆ ನನ್ನೊಡನೆ ಸ್ನೇಹದಿಂದಿರುತ್ತೀರೋ ಅಲ್ಲಿಯವರೆಗೆ ನನಗೆ ಯಾರ ಭಯವೂ ಇಲ್ಲ."

ಆತನ ಪತ್ನಿಯಾಗಬೇಕೆಂಬ ಆಶೆಯಿಂದ, ಜೀವನ ಸಂಗಾತಿಯಾಗಬೇಕೆಂಬ ಸಂಕಲ್ಪದಿಂದ ಹಿಂದೊಮ್ಮೆ ಚೇನಿ ಆತನ ಜೊತೆಯಲ್ಲಿ ಮನೆಮಠ ಬಿಟ್ಟು ಓಡಿ ಬಂದಿದ್ದಳು. ಆ ಆಶೆಗಳು ನುಚ್ಚುನೂರಾದಾವು; ಅವಳ ಜೀವನಧಾರೆ ಬೇರೆ ಕಡೆಗೆ ಹರಿಯತೊಡಗಿತು. ಚೇನಿ ಪುನಃ ಪರಿಸ್ಥಿತಿಯ ಬಿಕ್ಕಟ್ಟಿನಿಂದಾಗಿ ಆತನಲ್ಲಿಗೆ ಬಂದ್ದಾಳೆ. ಬಂದಿದ್ದರೂ ಇಂದು ಆತನನ್ನು ತನ್ನ ಕಡೆ ಒಲಿಸಿಕೊಂಡು ತನ್ನವನನ್ನಾಗಿ ಮಾಡಿಟ್ಟುಕೊಳ್ಳುವ ಮಾರ್ಗ ಮುಕ್ತಾಯವಾಗಿ ಹೋಗಿತ್ತು. ಆಕೆಯ ಜೀವನದಲ್ಲಿ ಬಹಳ ಅಚ್ಚರಿಗೀಡು ಮಾಡುವ ಸ್ಥಿತಿಯಲ್ಲಿ ಕಪಾಹಿ ಬಂದಳು. ಸಾಮಾಜಿಕ ಸಮ್ಮತಿಯ ಮುದ್ರೆಯ ಮೂಲಕ ಕಪಾಹಿಯೊಡನೆ ಗುಲಬ್‌ನ ಸಂಬಂಧ ಪತಿ-ಪತ್ನಿಯರ ಸಂಬಂಧವಾಗಿ ಪರಿಣಮಿಸಿದೆ.

ಕೆಲಾಈ ಇನ್ನೂ ಜೀವಂತನಾಗಿದ್ದಾನೆ.

ಚೇನಿ ಬಹುಶಃ ಸಂತಾನದ ಕನಸು ಕಾಣುತ್ತಿದ್ದಾಳೆ. ಆದರೆ ಜಗತ್ತು ಏನೇ ಯೋಚಿಸಲಿ ಸರಿ, ಯೋಚಿಸಲಿ ಬಿಡು. ಚೇನಿಗೆ ಏನಾದರೂ ಸಂತಾನ ಪ್ರಾಪ್ತಿಯಾದರೆ ಅದರ ತಂದೆ ಕೆಲಾಈ ಅಲ್ಲ ಎಂಬ ವಿಷಯ ಗುಲಬ್‌ನಿಗೆ ಗೊತ್ತು. ಒಂದು ವೇಳೆ ಸಂತಾನ ಪ್ರಾಪ್ತಿಯಾದರೆ ಆತನೇ ಅದರ ತಂದೆ!

ಬಹುಶಃ ಕಪಾಹಿ ಆತನಿಗೆ ತಂದೆ ಅನ್ನಿಸಿಕೊಳ್ಳುವ ಪಟ್ಟ ಕಲ್ಪಿಸಲಾರಳು.

ಆದರೆ ಆಳವಾಗಿ ಯೋಚನೆ ಮಾಡಿ ಗುಲಚ್‌ನಿಗೆ ಒಂದು ಮಾತಿನ ತೀವ್ರಾನುಭವವಾಯಿತು. ಚೇನಿ ಮತ್ತು ಕಪಾಹಿ ಇವರಿಬ್ಬರಲ್ಲಿ ಒಬ್ಬರನ್ನೂ ಆತ ಬಯಸುವುದಿಲ್ಲ. ಕಪಾಹಿ ಮತ್ತು ಚೇನಿಯೊಡನೆ ಆತನ ಸಾಮಾಜಿಕ ಅಥವಾ ಬೇರೆ ಪ್ರಕಾರವಾದ ಸಂಬಂಧವೇನೇ ಇರಲಿ. ಒಂದು ವೇಳೆ ಅವರಿಬ್ಬರೂ ಆತನ ಸ್ನೇಹವನ್ನು ಬಿಟ್ಟರೂ ಅದರಿಂದ ಆತನ ಜೀವನ ಅಪೂರ್ಣವಾಗುವುದಿಲ್ಲ.

ಬಹಳವಾಗಿ ಯೋಚಿಸಿ ತೀರ್ಮಾನಕ್ಕೆ ಬಂದ. ಕಪಾಹಿ ಮತ್ತು ಚೇನಿ ಇಬ್ಬರಲ್ಲಿ ಒಬ್ಬರಾದರೂ ಆತ ಅಪೇಕ್ಷಿಸಿದ್ದನ್ನು, ಆತನ ಅಂತಃಕರಣ ಬಯಸಿದ್ದನ್ನು ಪೂರ್ಣಗೊಳಿಸಲು ಶಕ್ತರಲ್ಲ. ಅವನಿಗೆ ಅವರ ಬಯಕೆ ಇಲ್ಲ. ಇವರಿಲ್ಲದಿದ್ದರೂ ಆತನ ಜೀವನ ಸಾಗುತ್ತೆ.

ಗುಲಚ್‌ನಿಗೆ ದಿಗಿಲಾಯಿತು.

ಕಾರ್ಮೋಡ ಧರೆಗಿಳಿಯುತ್ತಿತ್ತು. ಆಗ ಇನ್ನೂ ಕೊಂಚ ಹಗಲು ಇತ್ತು. ಆದರೆ ಸಾಯಂಕಾಲವಾದಂತೆ ಭಾಸವಾಗುತ್ತಿತ್ತು.

ಒಂದು ಬೀಡಿ ಹೊತ್ತಿಸಿಕೊಳ್ಳಲು ಗುಲಚ್ ಸ್ವಲ್ಪ ನಿಂತ. ಆಲದ ಮರದ ಬುಡದ ಮೇಲೆ ಕುಳಿತು ಚೇನಿ ಸಹ ಎಲೆ ಅಡಿಕೆ ಗಂಟು ಬಿಚ್ಚಿದಳು.

ಬಾಯಲ್ಲಿ ಬೀಡಿ ಕಚ್ಚಿಕೊಂಡು ಆತ ಎದುರುಗಡೆ ನೋಡಿದ. ಎಲ್ಲಿಯವರೆಗೆ ದೃಷ್ಟಿ ಹಾಯಿಸಬಹುದಾಗಿತ್ತೋ ಅಲ್ಲಿಯವರೆಗೆ ಹಸಿರಿನಿಂದ ಕಂಗೊಳಿಸುವ ಬತ್ತದ ಗದ್ದೆ ಕಾಣಿಸುತ್ತಿತ್ತು. ಬತ್ತದ ಪೈರಿನ ಗರಿಗಳು ಹಚ್ಚ ಹಸಿರಾಗಿವೆ. ಬತ್ತದ ಪೈರು ಬೆಳೆಯುತ್ತಿದೆ. ಬತ್ತದ ಪೈರಿನ ಗರಿಗಳು ಗಾಳಿಗೆ ಓಲಾಡುತ್ತಾ ಚರ್ ಚರ್ ಸದ್ದು ಮಾಡುತ್ತಾ ನರ್ತನ ಮಾಡುತ್ತಿವೆ. ಕಣ್ಣಿಗೆ ಕಾಣಿಸುವವರೆಗೂ ಬಯಲು ಗದ್ದೆಯ ಹರಹು ಮಾತ್ರ ಇದೆ.

ಗುಲಚ್‌ನ ಮನಸ್ಸಿನ ದಿಗಿಲು ಎಲ್ಲೋ ಮಾಯವಾಯಿತು. ಆತನ ಮನಸ್ಸು ಯಾವುದೋ ಅದ್ಭುತ ಆನಂದದಿಂದ ತುಂಬಿ ತುಳುಕಾಡತೊಡಗಿತು. ಆತ ಎವೆಯಿಕ್ಕದೆ ಬತ್ತದ ಗದ್ದೆಯನ್ನು ನೋಡತೊಡಗಿದ. ಚೇನಿ ಸಹ ನೋಡತೊಡಗಿದಳು. " ಬತ್ತದ ಗದ್ದೆಯನ್ನು ನೋಡುತ್ತಿದ್ದೇನೆ. ಬಹಳ ಚೆನ್ನಾಗಿದೆ-ಕನಸಿನ ಆವೇಶದಲ್ಲಿ

ಗುಲಚ್ ಹೇಳಿದ. ಆತನ ದೃಷ್ಟಿ ಬತ್ತದ ಗದ್ದೆಯ ಕಡೆ ಇತ್ತು.

"ನಮ್ಮ ಕಡೆಯೂ ಈ ಬಾರಿ ಇದೇ ರೀತಿ ಇದೆ."

ಆನಂದದಿಂದ ಗುಲಚ್ ಸುತ್ತಲೂ ನೋಡಿದ. ಅಕಸ್ಮಾತ್ ಯಾವುದೋ ಕೋಣವನ್ನು ನೋಡಿ ಎದ್ದು ನಿಂತ. ಬೇಗನೆ ಆ ಕಡೆ ಓಡಿದ.

"ಆ ಕಡೆ ಏಕೆ ಓಡಿತ್ತೀರಿ?"- ಚೇನಿ ಕೇಳಿದಳು. ಗುಲಚ್ ಏನೂ ಉತ್ತರ ನೀಡಲಿಲ್ಲ. ಚೇನಿ ಎದ್ದು ನಿಂತು ಕುತೂಹಲದಿಂದ ಗುಲಚ್ ಓಡುತ್ತಿದ್ದ ಕಡೆ ನೋಡತೊಡಗಿದಳು.

ಸ್ವಲ್ಪ ಹೊತ್ತಿನಮೇಲೆ ಒಂದು ಕೋಣದ ಮೂಗುದಾರವನ್ನು ಹಿಡಿದು ಎಳೆದುಕೊಂಡು ಗುಲಚ್ ಬಂದ.

"ಯಾರ ಕೋಣ ಸಿಕ್ಕಿಬಿತ್ತು?"- ಚೇನಿ ಕೇಳಿದಳು.

"ಯಾರದು ಅಂತ ಗೊತ್ತಿಲ್ಲ! ಬೇಲಿ ಮುರಿದು ಗದ್ದೆಗೆ ನುಗ್ಗಿ ತುಂಬಾ ತಿಂದಿದೆ. ಬತ್ತದ ಬೆಳೆಸನ್ನು ಕೋಣ ಈ ರೀತಿ ಹಾಳು ಮಾಡಿದರೆ ಬತ್ತ ಎಲ್ಲಿ ಸಿಗುತ್ತೆ? ಸರಿ, ನಡಿ."

ಕೋಣವು ದೂರು ಹೇಳೋ ದೃಷ್ಟಿಯಲ್ಲಿ ಗುಲಬ್‌ನ ಕಡೆ ನೋಡಿತು. ಅನಂತರ ಹುಲ್ಲು ಮೇಯತೊಡಗಿತು.

"ಕೇವಲ ಗದ್ದೆಗೆ ಬೆಳಸು ಹಾಕಿದ ಮಾತ್ರಕ್ಕೆ ಆಗೊಲ್ಲ. ಅದರ ಉಸ್ತುವಾರಿ ನೋಡಿಕೊಳ್ಳಬೇಕು. ದನಕರು ಮೇದು ಮುಗಿಸಿದರೆ ಬೆಳಸು ಹಾಕಿದವನು ಏನು ಮಾಡೋದು?"- ಗುಲಬ್ ಹೇಳಿದ.

ಅನಂತರ ಅವರು ಹೊರಟರು. ರಸ್ತೆಯಲ್ಲಿ ಅಂಥ ವಿಶೇಷವಾದ ಮಾತುಕತೆ ನಡೆಯಲಿಲ್ಲ.

ಸಾಯಂಕಾಲವಾಗುತ್ತಾ ಬಂತು. ಚೇನಿಯನ್ನು ಗುಲಬ್ ಆಕೆಯ ಮನೆಗೆ ಬಿಟ್ಟು ತನ್ನ ಮನೆಯ ಕಡೆ ಬೇಗಬೇಗ ಹೊರಟ. ಕಲಾಈಯ ವಿಷಯವನ್ನು ಮೋಲೋಕಾ ಮತ್ತು ಬೇರೆಯವರಿಗೆ ಹೇಳಬೇಕಾದರೆ ಚೇನಿಯೇ ತಿಳಿಸುತ್ತಾಳೆ.

ಹೋಗಿ ಬಂದ ಖರ್ಚು. ಚಂದ್ರನ ಮೂಲಕ ಡಾಕ್ಟರ್ ಮತ್ತು ನರ್ಸ್‌ಗೆ ಕೊಟ್ಟ ಹಣ. ಕಲಾಈಯ ಕೈಗೆ ಕೊಟ್ಟ ಹಣ ಮತ್ತು ಹೋಟಲಿನಲ್ಲಿ ಊಟ-ತಿಂಡಿಗೆ ಆದ ಖರ್ಚು-ಎಲ್ಲಾ ಸೇರಿ ಆತ ತೆಗೆದುಕೊಂಡು ಹೋಗಿದ್ದ ಹಣದಲ್ಲಿ ಕೇವಲ ಇಪ್ಪತ್ತೇಳು ರೂಪಾಯಿ ಮಾತ್ರ ಉಳಿದಿತ್ತು. ಗಂಟನ್ನು ಬಿಚ್ಚಿ ಅದರಲ್ಲಿ ಏಳು ರೂಪಾಯಿ ಮಾತ್ರ ತೆಗೆದುಕೊಂಡ. ಉಳಿದ ಒಂದಿಪ್ಪತ್ತು ರೂಪಾಯಿಗಳನ್ನು ಚೇನಿಯ ಕೈಗೆ ಕೊಟ್ಟು ಹೇಳಿದ- "ಕೆಲವು ದಿನಗಳು ಕಾಲ ಕಳಿ. ನಾನು ಈಕಡೆ ಯಾವೊತ್ತು ಬರೋಕೆ ಆಗುತ್ತೋ ಹೇಳೋಕೆ ಆಗೊಲ್ಲ. ಅಗತ್ಯ ಬಿದ್ದರೆ ನೀನೇ ಬಾ."

ಕೈನೀಡಿ ಚೇನಿ ರೂಪಾಯಿ ಈಸಿಕೊಂಡಳು. ಕತ್ತಲಲ್ಲೇ ಆತನ ಮುಖವನ್ನು ಒಮ್ಮೆ ನೋಡಿದಳು. ಆತ ನಿಂತುಕೊಳ್ಳಲಿಲ್ಲ; ಹೊರಟು ಹೋದ.

ಮನೆ ತಲುಪಿದ ಕೂಡಲೇ ಮನೆಯ ಮುಂಭಾಗದಲ್ಲಿ ಕುಳಿತು ಕಪಾಹಿಯೊಡನೆ ತಿಖರ್ ಮಾತನಾಡುತ್ತಿದ್ದುದು ಕಣ್ಣಿಗೆ ಬಿತ್ತು. ಆತ ಅವರೀರ್ವರ ಕಡೆ ನೋಡಿದ. ತಿಖರ್ ಕೇಳಿದ- "ಓ, ಬಂದಿರಾ!"

ಆತನ ಮಾತಿಗೆ ಉತ್ತರ ಹೇಳದೆ ಗುಲಬ್ ನೇರವಾಗಿ ಹಿತ್ತಿಲಕಡೆ ಹೋಗಿ ಕೂಗಿದ- "ತರಾ!"

ತರಾ ಬೇಗ ಬಂದು ಆತನ ಕೈಯಿನ ಚಿಕ್ಕಗಂಟನ್ನು ಈಸಿಕೊಂಡು ಕೈಕಾಲು ತೊಳೆಯಲು ಒಂದು ಚೆಂಬು ನೀರು ತಂದಳು. ಆಗ ಹೊರಗಡೆ ಕತ್ತಲು ಕವಿಯುತ್ತಿತ್ತು. ಲಾಟೀನು ಮತ್ತು ಚೆಂಬು ತೆಗೆದುಕೊಂಡು ಗುಲಬ್ ಅಂಗಳಕ್ಕೆ ಬಂದ.

ಈ ಜುಜು ್ಬಲು ಅಂಗಳದಲ್ಲೇ ಇಟ್ಟು ಲಾಟೀನು ಹಿಡಿದುಕೊಂಡು ಆತ ಕೊಟ್ಟಿಗೆಗೆ ಹೋದ. ಲಾಟೀನಿನ ಬೆಳಕಿನಲ್ಲಿ ಒಮ್ಮೆ ದನಕರುಗಳನ್ನು ಒಂದೊಂದಾಗಿ ನೋಡಿದ.

"ದನಕರುಗಳಿಗೆ ಮೇವು ಹಾಕಿದ್ದೀಯಾ ತರಾ? ಎಮ್ಮೆಗೆ ಹೊಟ್ಟೆ ತುಂಬಿದಂತೆ ಕಾಣುವುದಿಲ್ಲ. ಹುಲ್ಲು ಕೊಯ್ಕೊಂಡು ಬರಲಿಲ್ವೇ? ಬಿಳಿ ಕರು? ಸರಿ, ಸರಿ. ಇದೆ ಇದೆ."

ಲಾಟೀನು ಹಿಡಿದುಕೊಂಡು ಆತ ಹೋಗುತ್ತಿದ್ದದನ್ನು ನೋಡಿ ಕೋಣ ಎದ್ದು ನಿಂತಿತು. ಆತ ಅದರ ಕಪೋಲವನ್ನು ಸವರಿದ. ಕೋಣ ತನ್ನ ಕಪ್ಪು ಕಣ್ಣುಗಳನ್ನು ಅರಳಿಸಿ ಆತನನ್ನು ನೋಡಿತು. ಪ್ರೀತಿ ಪೂರ್ಣ ದೃಷ್ಟಿಯಿಂದ.

ಚೆಂಬಿನಿಂದ ನೀರನ್ನು ಬಲಗಾಲಿನ ಮೇಲೆ ಹಾಕಿದ; ಇದ್ದಕ್ಕಿದ್ದಂತೆ ಆತನಿಗೆ ಏನೋ

ನೆನಪಾಯಿತು. ಚಿಂಬನ್ನು ಅಲ್ಲೇ ಇಟ್ಟು, ಮಚ್ಚು ತೆಗೆದುಕೊಂಡು, ದೊಂದಿ ಮಾಡಿ ಅದನ್ನು ಹೊತ್ತಿಸಿಟ್ಟು ಗದ್ದೆಯ ಕಡೆ ಬೇಗಬೇಗ ಹೊರಟ.

"ಅಲ್ಲಿಗೆ ಈಗಲೇ ಹೋಕಬೇಕಾ?" - ತರಾ ಕೇಳಿದಳು.

"ಒಮ್ಮೆ ಗದ್ದೆ ನೋಡಿಕೊಂಡು ಬರ್ತೀನಿ. ನದಿಯಲ್ಲಿ ಭಾರಿ ಪ್ರವಾಹ ಬಂದಿದೆ. ಎಲ್ಲಿ ಯಾದರೂ ತೆವರಿ ಒಡೆದುಕೊಂಡು ನೀರು ನುಗ್ಗಿದರೆ ಎಲ್ಲವೂ ಕೊಚ್ಚಿಹೋಗುತ್ತೆ"- ಎಂದು ಹೇಳುತ್ತಾ ಕೈಯಲ್ಲಿ ದೊಂದಿ ಹಿಡಿದುಕೊಂಡು ಆತ ಗದ್ದೆಕಡೆ ಹೊರಟ.

ತಿಖಿರ್ ಜೊತೆಯಲ್ಲಿ ಕಪಾಹಿ ಹೇಳಿದಳು- "ಬರುತ್ತಲೇ ಗದ್ದೆ ನೋಡೋಕೆ ಹೊರಟರು. ಈ ರಾತ್ರಿ ಕಳೆಯುವುದರೊಳಗೆ ಗದ್ದೆ ಎಲ್ಲಿಗೆ ಓಡಿ ಹೋಗುತ್ತೆ? ಬೆಳಿಗ್ಗೆ ಹೋಗಿ ನೋಡಿದರೆ ಆಗೋದಿಲ್ವೇ? ನಮ್ಮ ಜೊತೆಯಲ್ಲಿ ಒಂದು ಮಾತು ಸಹ ಆಡಲಿಲ್ಲ. ನೇರವಾಗಿ ಗದ್ದೆ ಕಡೆಗೆ ಓಟ. ಈ ಮನುಷ್ಯನಿಗೆ ಮತ್ತೇನು ಚಿಂತೆ?

ಸ್ವಲ್ಪ ಹೊತ್ತಿನ ತನಕ ತರಾ ಗುಲಬ್ ಹೋದ ಕಡೆ ನೋಡುತ್ತಾ ನಿಂತಳು. ಅನಂತರ ಆತನಿಗೆ ಊಟದ ಸಿದ್ಧತೆ ಮಾಡಲು ತೊಡಗಿದಳು.

# ಮೂವತ್ನಾಲ್ಕು

ಮಾರನೆಯ ದಿನ.

ಬಾನು ಭಯಂಕರವಾದ ಕಾರ್ಮೋಡಗಳಿಂದ ಕವಿದಿದೆ. ರಾತ್ರಿ ಭಾರಿ ಮಳೆ ಬಿದ್ದ ಮೇಲೆ ಬೆಳಿಗ್ಗೆ ಮಳೆ ನಿಂತಿದ್ದರೂ ಪುನಃ ಮಳೆ ಬೀಳುವ ಸೂಚನೆ ಈಗಲೂ ಆಕಾಶದಲ್ಲಿ ಕಂಡು ಬರುತ್ತಿದೆ. ದಕ್ಷಿಣದ ಕಡೆ ಒಂದೇ ಸಮನೆ ಮೋಡಗಳ ಗುಡುಗು ಕೇಳಿಸುತ್ತಿದೆ. ಮಿಂಚು ಥಣಾಯಿಸುತ್ತಿದೆ. ಒಂದು ಅಸಂಭಾವ್ಯ ವಿಪತ್ತಿನಿಂದ ಪೃಥ್ವಿ ಗಾಬರಿಯಾಗಿದೆ. ಸ್ವಲ್ಪ ಹೊತ್ತಾದ ಮೇಲೆ ಧಾರಾಕಾರವಾಗಿ ಭಾರಿ ಮಳೆ ಬರುವ ಸಂಭವವಿದೆ.

ಈ ರೀತಿ ಒಂದೇ ಸಮನೆ ಮಳೆ ಬಿದ್ದರೆ ಅದರ ಪರಿಣಾಮವಾಗಿ ಬೆಳಸು ನಷ್ಟವಾಗುತ್ತೆ.

ಬೆಳಿಗ್ಗೆಯೇ ಏರು ಕಟ್ಟೋ ಹೊತ್ತಿಗೆ ಸರಿಯಾಗಿ ಗುಲಬ್ ಮಲಗಿದ್ದವನು ಎದ್ದು ಹೊರಗಡೆ ಬಂದ. ಒಂದು ಕಡೆಸುತ್ತಲೂ ದೃಷ್ಟಿ ಹಾಯಿಸಿದ. ಈವೊತ್ತು ಉಳುಮೆ ಮಾಡಲಾಗುವುದಿಲ್ಲ. ನದಿಯ ದಡದ ಪಕ್ಕದ ಗದ್ದೆಯಲ್ಲಿ ನೀರು ನಿಂತಿದೆ. ನದಿಯ ನೀರು ಇನ್ನೂ ಗದ್ದೆಯೊಳಗೆ ನುಗ್ಗಲಿಲ್ಲ. ಆದರೆ ಮಳೆಯ ನೀರೇ ಇಡೀ ಗದ್ದೆಯಲ್ಲಿ ಸುಂದರವಾದ ಬಿಳಿ ದುಪಟಿ ಹಾಸಿದಂತಿದೆ. ಗದ್ದೆಯಲ್ಲಿ ನಡುಮಟ್ಟ ನೀರಿದೆ.

ತುಸು ಗಾಬರಿಯಿಂದ ಗುಲಬ್ ಸ್ವಲ್ಪ ಹೊತ್ತು ಆಕಡೆ ನೋಡುತ್ತಾ ನಿಂತ. ಅನಂತರ ಗುದ್ದಲಿ ತೆಗೆದುಕೊಂಡು ನದಿಯ ದಡದ ಕಡೆ ಹೊರಟ.

ಕಪಾಹಿ ಮತ್ತು ತರಾ ಏನನ್ನೂ ಹೇಳುವ ಸಾಹಸ ಮಾಡಲಿಲ್ಲ. ಗುಲಬ್‌ನ ಮುಖ ಸಹ ಆಕಾಶದಂತೆಯೇ ಗಂಭೀರವಾಗಿತ್ತು. ನಿನ್ನೆ ಮನೆಗೆ ಬಂದಾಗಿದಿಂದಲೂ ಆತ ಯಾರೊಡನೆಯೂ ಮಾತಾಡಲಿಲ್ಲ. ಕಪಾಹಿ ಮತ್ತು ತರಾಳಿಗೆ ಏನೂ ಅರ್ಥವಾಗುತ್ತಿಲ್ಲ.

ಹಳ್ಳಿಯ ಬೇರೆಯವರು ಸಹ ದೊಂದಿ, ಗುದ್ದಲಿ ಹಿಡಿದುಕೊಂಡು ನದಿಯ ದಡದಲ್ಲಿ ನಿಂತಿರುವುದು ಗುಲಬ್ ಗದ್ದೆಯ ಹತ್ತಿರ ಹೋದ ಮೇಲೆ ಕಣ್ಣಿಗೆ ಬಿತ್ತು. ಎಲ್ಲರೂ ಕೂಡಿ ಪ್ರವಾಹದ ಹಾವಳಿಯಿಂದ ತಮ್ಮ ಗದ್ದೆಗಳನ್ನು ರಕ್ಷಿಸಲು ನದಿಯ ದಡಕ್ಕೆ ಮಣ್ಣು ಹಾಕಿ ಏರಿಯನ್ನು ಸರಿಪಡಿಸುತ್ತಿದ್ದರು. ಅಕ್ಕಪಕ್ಕದ ಮರಗಿಡ-ಸೊಪ್ಪುಸದೆ ಕಡಿದು ಹಾಕಿ ಮಣ್ಣು ಸುರಿದರೂ ಏರಿಯನ್ನು ಸರಿಪಡಿಲಾಗುತ್ತಿರಲಿಲ್ಲ. ಈವೊತ್ತು ರಾತ್ರಿ ಕಳೆಯುವವರೆಗೂ ಪ್ರವಾಹದಿಂದ ಹಳ್ಳಿಯನ್ನು ರಕ್ಷಿಸುವುದು ಕಷ್ಟಸಾಧ್ಯವಾಗಿತ್ತು.

ಸಿಪರೀಯಾ ಹಳ್ಳಿಯ ತರುಣರು, ಮುದುಕರು ಎಲ್ಲರೂ ಕೆಲಸ ಮಾಡುತ್ತಿದ್ದರು. ಅವರಿಗೆ ಧೈರ್ಯವೇ ಉಡುಗಿ ಹೋಗಿತ್ತು. ಧನಸಿರಿಯ ಪ್ರವಾಹವನ್ನು ತಡೆಗಟ್ಟಬೇಕಾಗಿತ್ತು. ಇಲ್ಲದಿದ್ದರೆ ಧನಸಿರಿ ಮೃತ್ಯುವಿನೊಡನೆ ಆಗಮಿಸುತ್ತಾಳೆ. ಗುದ್ದಲಿ, ಕೈ ಮತ್ತು ಮಚ್ಚು-ಎಲ್ಲಾ ವಿಧಾನಗಳನ್ನೂ ಅನುಸರಿಸಿ ನದಿಯ ದಡವನ್ನು ಸರಿಪಡಿಸುತ್ತಿದ್ದರು. ಹೇಗಾದರೂ ಮಾಡಿ ಒಂದು ಮೂರು ಎತ್ತರ ಮಣ್ಣು ಹಾಕಿದರೆ ಬಹುಶಃ ವಿಪತ್ತಿನಿಂದ ಪಾರಾಗಬಹುದಾಗಿತ್ತು. ಆಕಡೆ ನದಿಯ ದಡ ಎತ್ತರವಾಗಿತ್ತು. ಸುಲಭವಾಗಿ ಒಡೆಯಲಾಗುತ್ತಿರಲಿಲ್ಲ. ಕೆಳಗಡೆ ಡಾಲಿಮ್ ಘಟ್ಟದ ಕಡೆ ಎತ್ತರವಾದ ದಡವಿತ್ತು. ಈ ಮಧ್ಯೆ ಸುಮಾರು ಅರ್ಧ ಮೈಲಿ ನದಿಯ ದಡ ತಗ್ಗಾಗಿತ್ತು. ಈ ಜಾಗದಿಂದಲೇ ಹಳ್ಳಿಗೆ ವಿಪತ್ತು ಒದಗಬಹುದಾಗಿತ್ತು.

ಪ್ರಾಣವನ್ನೇ ಪಣವಾಗಿಟ್ಟು ಉಸಿರೆಳೆದುಕೊಳ್ಳಲೂ ಬಿಡುವು ತೆಗೆದುಕೊಳ್ಳದೆ ಬೆಳಿಗ್ಗೆಯಿಂದ ಸಾಯಂಕಾಲದವರೆಗೂ ಎಲ್ಲರೂ ಸೇರಿ ನದಿಯ ದಡವನ್ನು ಸ್ವಲ್ಪ ಎತ್ತರಿಸಿದರು. ಬಿದಿರು, ಮರಗಿಡ ಮುಂತಾದವುಗಳನ್ನು ಗೂಟವಾಗಿ ನೆಟ್ಟು ಸೊಪ್ಪುಸದೆ, ಹುಲ್ಲು ಮುಂತಾದವುವನ್ನು ಹಾಕಿ ಅದರ ಮೇಲೆ ಮಣ್ಣು ಸುರಿದು ದಡವನ್ನು ಸರಿಪಡಿಸಿದರು. ಭಾರಿ ಮಳೆ ಬೀಳದಿದ್ದರೆ ದಡ ಕೊಚ್ಚಿ ಹೋಗುವುದಿಲ್ಲ. ಪ್ರವಾಹದ ನೀರು ಹಳ್ಳಿಗೆ ನುಗ್ಗುವುದಿಲ್ಲ.

ಬೇರೆಯವರು ಹೊರಟು ಹೋದಮೇಲೂ ಗುಲಬ್ ಇನ್ನೂ ಸ್ವಲ್ಪ ಹೊತ್ತು ತನ್ನ ಗದ್ದೆಯ ಪಕ್ಕದ ನದಿಯ ದಡಕ್ಕೆ ಮಣ್ಣು ಹಾಕುತ್ತಲೇ ಇದ್ದ. ಪ್ರವಾಹ ಬಂದರೆ ನದಿ ದಡದ ಪಕ್ಕದಲ್ಲೇ ಆತ ಹೊಸದಾಗಿ ಮಾಡಿದ ಜಮೀನಿನ ಬದು ಭಾಗದಲ್ಲಿ ನೀರು ನಿಂತುಕೊಳ್ಳುತ್ತೆ. ಕೊನೆಗೆ ತೀರಾ ಹಸಿವಾದ ಕಾರಣ ಗದ್ದೆಯ ಕಡೆಗೆ ತಿರುಗಿ ತಿರುಗಿ ನೋಡುತ್ತಾ ನಿಧಾನವಾಗಿ ಮನೆಯ ಕಡೆ ಹೊರಟ.

ಆ ಹೊತ್ತಿಗೆ ಮಧ್ಯಾಹ್ನ ಕಳೆದಿತ್ತು.

ಕಪಾಹಿ ಮತ್ತು ತರಾ ಆತನಿಗಾಗಿ ವ್ಯಗ್ರತೆಯಿಂದ ಕಾಯುತ್ತಿದ್ದರು. ಕೊಳದಲ್ಲಿ ಮೈ ತೊಳೆದುಕೊಂಡು ಬಂದ ಕೂಡಲೇ ತರಾ ಊಟ ಬಡಿಸಿದಳು. ಆತ ಯೋಚನೆ ಮಾಡುತ್ತಾ ಊಟ ಮಾಡಿದ.

ಆತನಿಗೆ ಆಯಾಸವಾಗಿತ್ತು. ಆದರೆ ವಿಶ್ರಾಂತಿ ಪಡೆಯಲು ಸಮಯವಿರಲಿಲ್ಲ. ಆತ ಷರಾಯಿ ಹಾಕಿಕೊಂಡ. ಅಟ್ಟದ ಮೇಲಿಟ್ಟಿದ್ದ ಚಾವಟಿಯೊಂದನ್ನು ಎಳೆದ. ಅಡಿಕೆ-ಎಲೆ ಆತನ ಕೈಗೆ ಕೊಟ್ಟು ಕಪಾಹಿ ಕೇಳಿದಳು "ಪುನಃ ಎಲ್ಲಿಗೋ ಸವಾರಿ?" ಗುಲಬ್ ಏನೂ ಹೇಳಲಿಲ್ಲ.

"ತಿಖಿರ್ ನಿನ್ನೆ ಸಹ ಬಂದಿದ್ದ. ಈವೊತ್ತು ಬಂದು ಕುಳಿತಿದ್ದ." ಕಪಾಹಿ ಮಾತಿನ ಮಧ್ಯೆ ಗುಲಬ್ ಗಡುಸಾಗಿ ಹೇಳಿದ- " ಯಾಕೆ ಬಂದಿದ್ದ? ನನ್ನ ಮನೆಗೆ ಯಾಕೆ ಬರುತ್ತಾನೆ?"

"ಒಬ್ಬ ಮನುಷ್ಯ ಬರೋದೆ ತಪ್ಪೇ? ಕಲಾಈಯನ್ನು ಕರೆದುಕೊಂಡು ಹೋಗಿ ಪಟ್ಟಣದಲ್ಲಿ ಬಿಟ್ಟು ಬಂದಿದ್ದೀರಿ. ಅದರ ಬಗ್ಗೆ ತಿಳಿದುಕೊಳ್ಳಲೂ ಬರಬೇಡವೇ?"

"ಅವರ ಅತ್ತಿಗೆ ಇಲ್ಲವೇನು? ಆಕೆಯನ್ನು ಕೇಳಿದರೆ ಆ ವಿಷಯ ಗೊತ್ತಾಗೂದಿಲ್ವೇನು? ಇಲ್ಲಿ ಎಲೆಅಡಿಗೆಕೆ ಹಾಕಿಕೊಂಡು ಕಾಡುಹರಟೆ ಕೊಚ್ಚಿದರೆ ಮಾತ್ರ ಅವನಿಗೆ ಕಲಾಈಯ ವಿಷಯ ಗೊತ್ತಾಗುತ್ತದೆಯೇ? ಇವನಿಗೇನು ಬೇರೆ ಕೆಲಸವಿಲ್ಲವೇ? ಹಳ್ಳಿಯವರೆಲ್ಲರೂ ನದಿಯ ದಡವನ್ನು ಸರಿಪಡಿಸಲು ಹೋಗಿದ್ದಾರೆ. ಆದರೆ ಈತ ಹರಟೆ ಕೊಚ್ಚೋದಕ್ಕೆ ಬಂದಿದ್ದಾನೆ."

ರಪಾಹಿಗೆ ಕೋಪ ಬಂತು. ಗುಲಬ್ ಎಂದೂ ಇಷ್ಟು ಒರಟಾಗಿ ಅವಳೊಡನೆ ಮಾತಾಡಿರಲಿಲ್ಲ. ಆಕೆಯೂ ಒರಟಾಗಿಯೇ ಉತ್ತರಿಸಿದಳು- "ನೀವು ಹೋಗಿ ಬೇರೆಯವರ ಮನೆಯಲ್ಲಿ ಹರಟೆ ಕೊಚ್ಚುವುದಿಲ್ವೇ? ನನಗೆ ಗೊತ್ತಿಲ್ವೇ? ದಿವಸಕ್ಕೆ ಒಂದು ಸಾರಿಯಾದರೂ ಚೇನಿಯ ಮನೆಗೆ ಹೋಗದಿದ್ದರೆ ಮನಸ್ಸಿಗೆ ನೆಮ್ಮದಿ ಸಿಗುವುದಿಲ್ಲ. ತಾನು ದುಡಿದು ಸಂಪಾದಿಸಿದ ಹಣವನ್ನು ಖರ್ಚುಮಾಡಿ ಕಲಾಈಯನ್ನು ಗೋಲಾಘಾಟಿಗೆ ಕರೆದುಕೊಂಡು ಹೋಗಲು ದರದು ಬಿದ್ದಿತ್ತೆ?"

ಜೋರಾಗಿ ಕಿರುಚುತ್ತಾ ಗುಲಬ್ ಹೇಳಿದ- "ರಪಾಹಿ, ಈವೊತ್ತು ನಿನಗೆ ಸರಿ ಮಾಡ್ತೀನಿ. ನನ್ನ ಹಣವನ್ನು ನಾನು ಖರ್ಚು ಮಾಡ್ತೀನಿ. ಅಥವಾ ನದಿಗೆ ಬಿಸಾಡ್ತೀನಿ. ಅದನ್ನೆಲ್ಲಾ ಕೇಳೋದಕ್ಕೆ ನೀನ್ಯಾರು? ರಖಾವುದಾರಳ ಬಾಯಲ್ಲಿ ಇಷ್ಟೊಂದು ದೊಡ್ಡ ಮಾತು."

"ನಾನು ರಖಾವುದಾರಳಾದರೆ ನೀವೇನು? ಬೇರೆಯವನ ಹೆಂಡತಿಯನ್ನು ಪಟ್ಟಣಕ್ಕೆ ಕರೆದುಕೊಂಡು ಹೋಗಿ ತಿರುಗೋದಕ್ಕೆ- ತಿರುಗಾಡಿಸೋದಕ್ಕೆ ನಾಚಿಕೆ ಆಗೋದಿಲ್ವೇ? ಇಲ್ಲಿ ಜನ ಬಾಯಿಗೆ ಬಂದ ಹಾಗೆ ಮಾತಾಡಿಕೊಳ್ಳುತ್ತಾರೆ."

ಗುಲಬ್ ಒಮ್ಮೆಲೇ ತಿರುಗಿಬಿದ್ದ. ಅತ್ಯಂತ ಕೋಪದಿಂದ ಕೈಯಲ್ಲಿದ್ದ ಚಾವಟಿಯಿಂದ ರಪಾಹಿಗೆ ಬಾರಿಸಿದ.- "ಓಡಿ ಬಂದವಳು, ಕಳ್ಳ ಲೌಡಿ, ಹೋಗು. ನನ್ನ ಮನೆ ಬಿಟ್ಟು ತೊಲಗು."

ರಪಾಹಿ ಸ್ತಬ್ಧವಾದಳು. ಆಕೆ ಅಳಲಿಲ್ಲ. ಕೂಗಾಡಲೂ ಇಲ್ಲ. ಧೈರ್ಯವಾಗಿ ಹೇಳಿದಳು- "ಹೊಡಿ. ಎಷ್ಟು ಹೊಡೆಯುತ್ತೀಯೋ ಹೊಡಿ. ನನ್ನನ್ನು ಹೊಡೆದು ಓಡಿಸು. ಕಲಾಈಯನ್ನು ಸಾಯೋದಕ್ಕೆ ಆಸ್ಪತ್ರೆಗೆ ಸೇರಿಸಿ ಬಂದಿದ್ದೀಯಲ್ವೇ? ಚೇನಿಯನ್ನು ಈಗಲೇ ಮನೆಗೆ ಕರೆದುಕೊಂಡು ಬಂದು ಇಟ್ಟುಕೊ. ನಾನು ಈಗಲೇ ಹೊರಟೆ. ನಾನು ನಿಮ್ಮಿಬ್ಬರಿಗೂ ಅಡ್ಡಿಯಾಗಿ ನಿಂತಿದ್ದೇನೆ."

"ಹೋಗು, ಹೋಗು. ನಿನ್ನನ್ನು ಹೋಗಬ್ಯಾಡ ಎಂದು ಯಾರು ಹೇಳಿದ್ದಾರೆ. ಹೋಗು. ಎಲ್ಲಿಗೆ ಹೋಗಬೇಕು ಅನ್ನಿಸುತ್ತದೆಯೋ ಹೋಗು. ನಾನು ನಿನ್ನನ್ನು ವಾಪಸು ಬಾ ಎಂದು ಕರೆಯಲು ಬಂದರೆ ನಾಯಿ ಅಂತ ನನ್ನನ್ನು ಕರಿ. ಘಟ್ಟದಲ್ಲಿ ಬಸೀರತ್ ದೋಣಿ ಇಟ್ಟುಕೊಂಡು ಕಾಯುತ್ತಿದ್ದಾನೆ. ಹೋಗು ಅವನು ಕಾಯುತ್ತಿದ್ದಾನೆ. ನನಗೆ ಗೊತ್ತಿಲ್ವೇ. ನಾಹರ್‌ನನ್ನು ಕೈ ಹಿಡಿದು ಬಸೀರತ್‌ನನ್ನು ಪ್ರೀತಿಸುತ್ತಿದ್ದವಳು ನೀನು. "

ತರಾ ಗಾಬರಿಯಾದಳು. ಆಕೆ ಒಮ್ಮೆ ಗುಲಬ್‌ನ ಕಡೆ ಮತ್ತೊಮ್ಮೆ ರಪಾಹಿಯ ಕಡೆ ನೋಡಿ ಇಷ್ಟು ಮಾತ್ರ ಹೇಳಿದಳು - " ಇಂದು ನಿಮಗೇನಾಗಿದೆ? ಬುದ್ಧಿ-ಗಿದ್ಧಿ

ಕೆಟ್ಟಿರುತ್ತದೆಯೇ? ಯಾತಕ್ಕೆ ಜಗಳ ಕಾಯುತ್ತೀರಿ?"

ಗುಲಬ್ ಮನೆಯಿಂದ ನೇರವಾಗಿ ಹೊರಟ. ಆತ ಕಟ್ಟಿಹಾಕಿದ್ದ ದನಕರುಗಳನ್ನು ಬಿಚ್ಚಿಬಿಟ್ಟ. ಚೇನಿಮಾಳಿಯ ಮನೆಕಡೆ ಅಟ್ಟಿಕೊಂಡು ಹೊರಟ.

ಕಪಾಹಿ ಸ್ವಲ್ಪ ಹೊತ್ತು ನಿಂತಿದ್ದಳು.

"ಎಲ್ಲಿಯೂ ಇರೋಕೆ ಒಂದಿಷ್ಟು ಜಾಗವಿರಲಿಲ್ಲ. ನಾನು ಬಂದು ಮನೆಮಠ ಮಾಡಿದೆ. ನಾನು ಈವೊತ್ತು ಓಡಿ ಬಂದವಳಾದೆ. ಕಳಂಕದಿಂದ ಕೂಡಿದ ಈ ಮನೆಯಲ್ಲಿ ಅನ್ನ ತಿನ್ನೊಲ್ಲ. ಬಸೀರತ್‌ನ ಜೊತೆಯಲ್ಲಿ ಅಥವಾ ಬೇರೆಯವರ ಜೊತೆಯಲ್ಲಿ ಹೋಗಲೇ. ಎಲ್ಲಿಯಾದರೂ ಹೊರಟು ಹೋಗಲೇ? ಕೈಕಾಲು ಗಟ್ಟಿಯಾಗಿವೆ. ದುಡಿದು ತಿನ್ನುತ್ತೇನೆ. ಇಲ್ಲದಿದ್ದರೆ ಜಗತ್ತಿದೆ. ಭಿಕ್ಷೆ ಬೇಡಿ ತಿನ್ನುತ್ತೇನೆ. ನೀವೇ ಮೃಷ್ಟಾನ್ನ ಊಟ ಮಾಡಿ" - ತನ್ನಷ್ಟಕ್ಕೆ ತಾನೇ ಕಪಾಹಿ ಗೊಣಗಿಕೊಂಡಳು.

ಒಂದು ಸಣ್ಣ ಗಂಟನ್ನು ಸೊಂಟದ ಕೆಳಗಡೆ ಸಿಕ್ಕಿಕೊಂಡು ಕಪಾಹಿ ನಿಧಾನವಾಗಿ ಮನೆಬಿಟ್ಟು ಹೊರಟಳು. ಡಾಲಿಮ್ ಘಟ್ಟದ ಕಡೆ ಹೊರಟಳು.

ತರಾ ಗಾಬರಿಗೊಂಡು ಏನೂ ತೋಚದೆ ಕಪಾಹಿ ಹೋಗುವ ಕಡೆಗೆ ನೋಡುತ್ತಾ ನಿಂತಳು. ಆಕೆಯ ಚಿಕ್ಕಮ್ಮ ಕಣ್ಣಿಗೆ ಕಾಣಿಸದಷ್ಟು ದೂರ ಹೊರಟು ಹೋದ ಮೇಲೆ ಅವಳು ತನ್ನಷ್ಟಕ್ಕೆ ತಾನೇ ಅಂದುಕೊಂಡಳು - "ಏನು ನಡೆಯುತ್ತಿದೆ ಎಂಬುದೇ ಅರ್ಥವಾಗುತ್ತಿಲ್ಲ."

ಮನೆಯೊಳಗಡೆ ಒಬ್ಬಳೇ ಇರಲು ತರಾಳಿಗೆ ಬೇಸರವಾಯಿತು. ಅವಳು ಅಂಗಳಕ್ಕೆ ಬಂದಳು. ಆಕಾಶ ಕಾರ್ಮೋಡದಿಂದ ಕವಿದಿತ್ತು. ಸೆಕೆಯಾಗುತ್ತಿತ್ತು. ಭಾರಿ ಮಳೆ ಬೀಳಲು ಹೆಚ್ಚು ಸಮಯ ಬೇಕಾಗಿರಲಿಲ್ಲ.

ಆಕೆ ಅಂಗಳದ ಮೂಲೆಯಲ್ಲಿದ್ದ ಚೆಂಡು ಹೂವಿನ ಗಿಡದ ಬಳಿ ಬಂದು ನಿಂತಳು. ಎರಡು ಗಿಡಗಳೂ ಒಣಗಿ ಹೋಗಿದ್ದವು. ಒಣಗಿ ಕಪ್ಪಾಗಿದ್ದ ಕೆಲವು ಹೂವುಗಳು ಕಾಂಡದಲ್ಲೇ ನೇತಾಡುತ್ತಿದ್ದುವು.

ಆಕೆ ಸೂರ್ಯಕಾಂತಿ ಹೂವಿನ ಕಡೆ ದೃಷ್ಟಿ ಹಾಯಿಸಿದಳು. ಬೆಳಿಗ್ಗೆ ಒಂದು ಹೂವು ಅರಳಿತ್ತು. ಈಗ ಸೂರ್ಯ ಪಶ್ಚಿಮದ ಕಡೆ ತೆರಳಿದ್ದರಿಂದ ಅದು ಪಶ್ಚಿಮದ ಕಡೆ ತಿರುಗಿತ್ತು. ಸೂರ್ಯ ಮೋಡಗಳ ಮಧ್ಯದಲ್ಲಿ ಮರೆಯಾಗಿದ್ದ ಕಾರಣ ಹೂವಿನ ಕಾಂತಿ ತುಸು ಕಡಿಮೆಯಾಗಿ ಬಾಡಿತ್ತು. ಆದರೆ ಅದರ ಎಸಳುಗಳು ಹಸಿರಾಗಿದ್ದುವು.

ಸ್ವಲ್ಪ ಹೊತ್ತಿನ ತನಕ ಆಕೆ ಎವೆಯಿಕ್ಕದೆ ಹೂವಿನ ಕಡೆ ನೋಡುತ್ತಿದ್ದಳು. ಅನಂತರ ಒಳಗಡೆ ಹೊರಟು ಹೋದಳು. ಒಮ್ಮೆ ಆಕೆ ಆಕಾಶದ ಕಡೆ ನೋಡಿದಳು. ಆಕಾಶದಲ್ಲಿ ಪ್ರಳಯ ಪೂರ್ವದ ಸೂಚನೆ ಕಂಡು ಬರುತ್ತಿತ್ತು.

ಗುಲಬ್‌ನು ದನಕರುಗಳನ್ನು ಅಟ್ಟಿಕೊಂಡು ಸಿಪರೀಯ ಹಳ್ಳಿಯ ಕಡೆ ಹೋದ. ಜರಘನ ಮನೆಯ ಕಡೆ ಸಾಕಷ್ಟು ಎತ್ತರವಾದ ಜಾಗವಿದೆ. ಯಾವಾಗಲೂ ಅಲ್ಲಿಗೆ ನೀರು ಹತ್ತಿಲ್ಲ. ನದಿಯಲ್ಲಿ ಪ್ರವಾಹ ಬಂದರೆ ದನಕರುಗಳು ಕೊಚ್ಚಿಹೋಗುವ ಭಯ. ಅದಲ್ಲದೆ ಊಟತಿಂಡಿಗೆ ಆತನಿಗೆ ಬಹಳ ಕಷ್ಟವಾಗುತ್ತೆ. ಪ್ರವಾಹ ಬರದಿದ್ದರೆ ಮೂರು ನಾಲ್ಕು ದಿವಸಗಳಲ್ಲಿ ಅವುಗಳನ್ನು ವಾಪಸು ಅಟ್ಟಿಕೊಂಡು ಹೋಗುತ್ತಾನೆ.

ಗುಲಬ್ ಮನೆಕಡೆ ಬೇಗ ಹಿಂದಿರುಗುತ್ತಿದ್ದ. ಅಕಸ್ಮಾತ್ತಾಗಿ ಚಂದ್ರ ಸಿಕ್ಕಿದ. ಅವನೂ ಸಹ

ತರಾತುರಿಯಲ್ಲಿ ಬರುತ್ತಿದ್ದ.

"ಎಲ್ಲಿಂದ ಬಂದೆ ಚಂದ್ರ?" -

ಚಂದ್ರ ನಿಂತ.

"ಪಟ್ಟಣದಿಂದ ಬರ್‍ತಾ ಇದ್ದೀನಿ. ಧನಶಿರಿಯಲ್ಲಿ 'ಫ್ಲಡ್' ಬಂದಿರೋ ಸುದ್ದಿ ತಿಳಿಯಿತು. ಮೇಲುದಂಡೆ ಕಡೆಗೆ ಭಾರಿ ಭಯಂಕರ ಪ್ರವಾಹ ಬಂದಿದೆ. ನಮ್ಮಲ್ಲಿ ಬರೊಲ್ಲ ಅಂತ ಯಾರೂ ಹೇಳಲಾಗಿವುದಿಲ್ಲ. 'ರಿಲೀಫ್'ಗಾಗಿ ವ್ಯವಸ್ಥೆ ಮಾಡಬೇಕಾಗುತ್ತೆ. ನೀವು ಸುಖವಾಗಿ ಬಂದು ಸೇರಿದಿರಿ ತಾನೇ?"

"ಅಹುದು. ಹೇಗೋ ತಲುಪಿದೆವು. ನಾವು ಹಳ್ಳಿಯವರು ಒಂದು ಅಣೆಕಟ್ಟು ರೀತಿ ಕಟ್ಟಿದ್ದೇವೆ. ಇಲ್ಲಿಯವರೆಗೇನೋ ಸರಿಯಾಗಿದೆ. ಆದರೆ ಜಾಸ್ತಿ ಮಳೆ ಬಂದರೆ ಅದು ನಿಲ್ಲೊಲ್ಲ."

"ಸ್ವಲ್ಪ ಆಕಾಶದ ಕಡೆ ನೋಡು. ಮಳೆ ಬೀಳೋ ಸಂಭವವಿದೆ. ನೀನು ಈ ಕಡೆ ಯಾಕೆ ಬಂದೆ?"

"ದನಕರುಗಳನ್ನು ಬಿಟ್ಟುಬರಲು ಬಂದೆ. ಪ್ರವಾಹ ಬಂದರೆ ಯಾರು, ಯಾರ ಯೋಗಕ್ಷೇಮ ವಿಚಾರಿಸಿಕೊಳ್ಳುತ್ತಾರೆ?"

"ಸರಿ, ನೋ ಟಾಇಮ್. ಮಾತಾಡಲು ಸಮಯವಿಲ್ಲ. ನಾನು ಟೌನಿನಲ್ಲಿ ಎಸ್.ಡಿ.ಒ. ಜೊತೆಯಲ್ಲಿ ರಿಲೀಫ್ ಕಳುಹಿಸಲು ಹೇಳಿ ಬಂದಿದ್ದೇನೆ. ಒಂದುವೇಳೆ ಭಾರಿ ಪ್ರವಾಹ ಬಂದರೆ ಇಲ್ಲಿಯೂ ಒಂದು ರಿಲೀಫ್ ಕಮಿಟಿ ಮಾಡ್ಬೇಕು. ನಿನ್ನ ಕಣಜದಲ್ಲಿ ಬತ್ತ ಇದೆ ತಾನೇ?"

"ಇದೆ. ಅಲ್ಪ ಸ್ವಲ್ಪ ಇದೆ."

"ಮನುಷ್ಯರು ಹೇಗೋ ಬಚಾವು ಆಗ್ತಾರೆ. ಬತ್ತದ ರಕ್ಷಣೆಯ ವ್ಯವಸ್ಥೆ ಮಾಡು. ವಿಪತ್ತು ಒದಗಿದೆ. ಬತ್ತ ಮತ್ತು ಹಣದ ಅಗತ್ಯ ಎಲ್ಲರಿಗೂ ಬೀಳುತ್ತೆ. ಸರಿ, ಚಿಂತಿಸಬೇಡ. ನಾನು ಬರಲೇ?"

"ನಮಗೆ ಸದ್ಯಕ್ಕೆ ವಿಪತ್ತಿಲ್ಲ. ಆದರೂ ನೀನು ಮಾತ್ರ ಗಮನಿಸುತ್ತಿರು" - ಎಂದು ಗುಲಚ್ ಹೇಳಿದ.

"ಸರಿ, ಖಂಡಿತ, ಖಂಡಿತ. ನೀನು ಬತ್ತವನ್ನೂ ಅಟ್ಟದಮೇಲೆ ಹಾಕು. ನಾನು ಘಟ್ಟದಿಂದ ಬಸೀರತ್‌ನ ದೋಣಿ ತೆಗೆದುಕೊಂಡು ಬರ್‍ತೀನಿ. ಸಾಧ್ಯವಾದರೆ ನೀನು ಸಹ ರಿಲೀಫ್ ಕೆಲಸಕ್ಕೆ ಬರಬೇಕು" - ಎಂದು ಹೇಳುತ್ತಾ ಚಂದ್ರ ಹೊರಟು ಹೋದ. ಅವನಿಗೆ ನಿಂತುಕೊಳ್ಳಲು ಸಮಯವಿಲ್ಲ. ಧನಶಿರಿಯಲ್ಲಿ ಪ್ರವಾಹ ಬಂದಿದೆ. ಆಕಾಶದಲ್ಲಿ ಮೋಡಗಳು ಹೆಪ್ಪುಗಟ್ಟಿಕೊಂಡಿವೆ.

"ಪ್ರವಾಹದಲ್ಲಿ ಕೊಚ್ಚಿಹೋದರೂ ನಾನು ಬಸೀರತ್‌ನ ದೋಣಿಗೆ ಕಾಲಿಡುವುದಿಲ್ಲ" ಎಂದು ಗುಲಚ್ ಮನಸ್ಸಿನಲ್ಲಿ ತನ್ನಷ್ಟಕ್ಕೆ ತಾನೆ ಅಂದುಕೊಂಡ. ಇಂದು ಕಪಾಹಿಇಯ ಬಗ್ಗೆ ಆತನಿಗೆ ಎಷ್ಟು ಜುಗುಪ್ಸೆಯೋ ಬಸೀರತ್ ಬಗ್ಗೆಯೂ ಅಷ್ಟೆ ಜುಗುಪ್ಸೆ.

ಗುಲಚ್ ನಿಧಾನವಾಗಿ ಮನೆಗೆ ಬಂದ.

ಅಂಗಳದ ಎದುರಿನಲ್ಲೇ ಆತ ಸ್ವಲ್ಪ ನಿಂತ. ಆಕಸ್ಮಾತ್ತಾಗಿ ಆತನ ದೃಷ್ಟಿ ಸೂರ್ಯಕಾಂತಿಯ ಹೂವಿನ ಮೇಲೆ ಬಿತ್ತು. ಸಾಯಂಕಾಲವಾಗುತ್ತಿತ್ತು. ಮಬ್ಬುಗತ್ತಲೆ

ಕಾರಣ ಆ ಹೂವು ಮೊದಲಿಗಿಂತಲೂ ಬಾಡಿ ಹೋಗಿತ್ತು. ಸ್ವಲ್ಪ ಹೊತ್ತಿನತನಕ ಹೂವಿನ ಕಡೆ ನೋಡುತ್ತಾ ನಿಂತಿದ್ದು ಆತ ನದಿಯ ದಡದ ಕಡೆ ಹೊರಟ.

ಆಗ ಸಾಯಂಕಾಲವಾಗಿತ್ತು. ಮೋಡಗಳಿಂದ ಆವೃತವಾದ ಬಾನು ತುಸು ಕೆಳಗಿಳಿದಂತೆ ಭಾಸವಾಗಿತ್ತಿತ್ತು. ಯಾವುದೋ ಭಯದಿಂದ ಪೈರುಗಳು ಬಾಡಿ ಹೋದಂತೆ ಕಾಣುತ್ತಿದ್ದುವು. ಆತ ನದಿಯ ದಡ ತಲುಪಿದ. ಹುಚ್ಚು ಹೊಳೆಯಾಗಿ ನರ್ತನ ಮಾಡುತ್ತಾ ಬರುತ್ತಿದ್ದ ಧನಶಿರಿಯ ಕಡೆ ನೋಡಿದ. ಆತನ ಕಣ್ಣುಗಳಲ್ಲಿ ಕಣ್ಣೀರು ಬಂತು. ನೀರು ದಡದ ಮೇಲೆ ಉಕ್ಕಿ ಹರಿಯಲು ಕೇವಲ ನಾಲ್ಕು ಅಂಗುಲ ಮಾತ್ರ ಉಳಿದಿತ್ತು. ವಿಷಾದ ಹಾಗೂ ನಿಸ್ಸಹಾಯಕತೆಯಿಂದ ಆತ ಮನೆಗೆ ಬಂದ. ಬಹಳ ದುಃಖದಿಂದ ಒಮ್ಮೆ ಆತ ತನ್ನ ಗದ್ದೆಯ ಕಡೆ ನೋಡಿದ. ಸ್ವಲ್ಪ ಹೊತ್ತಿನತನಕ ನೋಡುತ್ತಾ ನಿಂತ. ಅನಂತರ ಹುಚ್ಚನಂತೆ ಮನೆಯ ಕಡೆ ಹೊರಟ.

"ಕಪಾಹಿ ಸೋದರತ್ತೇನಾ? ಎಲ್ಲಿಗೆ ಹೊರಟೆ?" - ಎಂದು ಚಂದ್ರ ಕೇಳಿದ.

ಕಪಾಹಿ ತಲೆಯೆತ್ತಿ ನೋಡಿದಳು.

"ಸಾಯಂಕಾಲದಲ್ಲಿ ಎಲ್ಲಿಗೆ ಹೋಗುತ್ತಿರುವೆ?"

"ನೀನು ಎಲ್ಲಿಂದ ಬರುತ್ತಿದ್ದೀಯೆ?"

"ಟೌನ್‌ನಿಂದ. ಎಲ್ಲಿಗೆ ಹೋಗಲು ಬಂದಿರುವೆ?"

"ನನ್ನನ್ನು ಮನೆಬಿಟ್ಟು ಓಡಿಸಿದ್ದಾನೆ."

"ಓಡಿಸಿದ್ದಾನೆ. ಯಾರು?"

"ಗುಲಬ್."

"ತಮಾಷೆ ಮಾಡಬೇಡ. ಭಾರಿ ಮಳೆ ಬರುತ್ತಿದೆ. ನೀನು ತಮಾಷೆ ಮಾಡುತ್ತೀಯಾ! ನಿಜ ಹೇಳು. ಏನಾಯಿತು?"

"ನೀಜ ಹೇಳುತ್ತಿದ್ದೇನೆ. ಗೋಲಾಘಾಟನಿಂದ ಬರುವಾಗ ಬಹುಶಃ ಚೇನಿ ಏನೋ ಬಾಡಿ ಹೇಳಿರಬಹುದು. ನಿನ್ನೆಯಿಂದ ನನ್ನೊಂದಿಗೆ ಮಾತಾಡಲಿಲ್ಲ. ಈವೊತ್ತು ಒಂದು ವಿಷಯದ ಬಗ್ಗೆ ಕೇಳಿದ್ದಕ್ಕೆ ಚಾವಟಿಯಿಂದ ಹೊಡೆದು ಮನೆಯಿಂದ ಓಡಿಸಿದ್ದಾನೆ."

"ಏನು? ಗುಲಬ್ ಈ ರೀತಿ ಆಗಿದ್ದಾನೆಯೇ? ಚೇನಿ ಏನು ಹೇಳಿ ಕೊಟ್ಟಿದ್ದಾಳೆ?"

ಅತ್ತ-ಇತ್ತ ನೋಡಿ ಕಪಾಹಿ ಹೇಳಿದಳು - "ಆ ವಿಷಯದ ಬಗ್ಗೆ ಬೇರೆ ಯಾರಿಗೂ ಗೊತ್ತಿರಲಿಲ್ಲ. ಚೇನಿಗೆ ಹೇಗೋ ಆ ವಿಷಯ ಗೊತ್ತು."

"ಏನು ವಿಷಯ?"

"ಮತ್ತೇನು ವಿಷಯ? ಬಸೀರತ್ ವಿಷಯ"

"ಬಸೀರತ್ ವಿಷಯ? ಬಸೀರತ್‌ನ ಬಗ್ಗೆ ಮತ್ತೇನು ವಿಷಯ?"

"ಅವನ ಕಾರಣದಿಂದಲೇ ನನ್ನನ್ನು ನಾಹರ್ ಮನೆಬಿಟ್ಟು ಓಡಿಸಿರಲಿಲ್ಲವೇ?"

"ಅದಕ್ಕೇನಾಯಿತು?" - ಚಂದ್ರ ಆತುರ ಆತುರದಿಂದಲೇ ಕೇಳಿದ.

"ಬಸೀರತ್ ಮತ್ತೆ ನಮ್ಮ ಮನೆಗೆ ಬರುವುದನ್ನು ನೋಡಿದ್ದಾನೆ."

"ಆದರೆ?" - ಕಪಾಹಿಯ ಮುಖವನ್ನು ಚಂದ್ರ ದೃಷ್ಟಿಸಿ ನೋಡಿದ. ಉಗುಳು ನುಂಗುತ್ತಾ ಗಾಬರಿಯಿಂದ ಕಪಾಹಿ ಹೇಳಿದಳು - "ಯಾರೋ ಏನೋ ಹೇಳಿರಬಹುದು."

"ಬಸೀರತ್? ಅಂದರೆ ಇಲ್ಲಿರೋ ಬಸೀರತ್?" - ಕಪಾಹಿಯ ಮುಖದ ಕಡೆ ಚಂದ್ರ ನೋಡಿದ. ಕಪಾಹಿ ತನ್ನ ದೃಷ್ಟಿ ಕೆಳಮುಖ ಮಾಡಿದಳು.

ಚಂದ್ರನಿಗೆ ಬಹಳಷ್ಟು ವಿಷಯ ಗೊತ್ತಾದ ಹಾಗೆ ಆಯಿತು. "ಆತ ಬರುತ್ತಲೇ ಇರುತ್ತಾನೆ. ಆದರಿಂದ ಏನಾಗುತ್ತೆ?"

"ಯಾರೋ ಆ ಘಟನೆಯ ಬಗ್ಗೆ ಗುಲಬ್‌ನಿಗೆ ಹೇಳಿರಬಹುದು. ಹಿಂದೆ ನಡೆದಿದ್ದ ಎಲ್ಲ ವಿಷಯಗಳನ್ನೂ ತಿಳಿದು ಆತ ಕಿಡಿ ಕಾರುತ್ತಿದ್ದಾನೆ. ಚೀನಿಯೇ ಅವನೊಡನೆ ಹೇಳಿರಬಹುದು."

ಚಂದ್ರ ಒಮ್ಮೆ ಆಕಾಶದ ಕಡೆ ನೋಡಿದ. ಅನಂತರ ಶಾಂತಭಾವದಿಂದ ಹೇಳಿದ - "ನಾನೂ ನಿನಗೆ ಬಹಳ ದಿವಸಗಳಿಂದ ಒಂದು ಮಾತು ಹೇಳಬೇಕು ಅಂತ ಅಂದುಕೊಂಡಿದ್ದೆ. 'ಡೋಂಟ್ ಮೈಂಡ್'. ಗುಲಬ್‌ನು ತರಾಳನ್ನು ಮದುವೆಯಾಗಬೇಕೆಂದು ಮೊದಲಿಂದಲೂ ಯೋಚಿಸುತ್ತಿದ್ದ. ಆದರೆ ಮಧ್ಯದಲ್ಲಿ ಗಡಿಬಿಡಿ ಆಗಿ ಹೋಯಿತು. ಈಗಲೂ ನೀನು ತಪ್ಪು ತಿಳಿದುಕೊಳ್ಳದೆ ಹೋದರೆ ನೀನು ಬಸೀರತ್‌ನ ಜೊತೆಯಲ್ಲೇ ಹೊರಟು ಹೋಗು. ಆತ ಬಹುಶಃ ನಿನಗಾಗಿ ಇಲ್ಲಿಯವರೆಗೂ ಮದುವೆ ಮಾಡಿಕೊಳ್ಳದೆ ಹಾಗೆಯೇ ಇದ್ದಾನೆ. ಗುಲಬ್ ಅವನ ಪಾಡಿಗೆ ಹೀಗೆಯೇ ಇರಲಿ."

ದಪ್ಪದಪ್ಪ ಮಳೆಯ ಹನಿಗಳು ಬೀಳತೊಡಗಿದುವು. ಚಂದ್ರ ಆತುರದಿಂದಲೇ ಹೇಳಿದ - "ಸರಿ. ಅನಂತರ ಏನು ಮಾಡಬೇಕೋ ಮಾಡು. ಈಗ ಬಾ. ಮಳೆ ಬಂತು. ಘಟ್ಟದಲ್ಲಿ ಬಹುಶಃ ಬಸೀರತ್‌ನ ದೋಣಿಯಿದೆ. ನಾವು ಬೇಗ ನದಿ ದಾಟೋಣ."

ಕಪಾಹಿ ಒಮ್ಮೆ ತಾನು ಬಂದ ದಾರಿಯನ್ನು ಸ್ನೇಹದೃಷ್ಟಿಯಿಂದ ನೋಡಿದಳು. ಅನಂತರ ಏನೂ ಹೇಳದೆ ಚಂದ್ರನ ಹಿಂದೆ ಬೇಗಬೇಗ ಘಟ್ಟದ ಕಡೆ ಹೊರಟಳು.

ಚಂದ್ರ ಹೇಳಿದ - "ನೋ ಅಫ್ರೈಡ್. ಎಲ್ಲವನ್ನೂ ಸರಿಪಡಿಸುತ್ತೇನೆ. ನಿನಗೆ ಹೊಡೆದಿದ್ದಾನೆ ಅಲ್ವೇ ಸರಿ. ನಾನು ವಿಚಾರಿಸಿಕೊಳ್ಳುತ್ತೇನೆ. ನೀನು ವ್ಯಥೆ ಪಡಬೇಡ. ಎವೆರಿಥಿಂಗ್ ಆಲ್‌ರೈಟ್. ಎಲ್ಲವೂ ಸರಿ ಹೋಗುತ್ತೆ."

ಮೊರೆಯುತ್ತಾ ಬರುತ್ತಿದ್ದ ಮಳೆಯ ಸದ್ದಿನಿಂದಾಗಿ ಚಂದ್ರ ಮತ್ತೆ ಏನು ಹೇಳಿದ ಎಂಬುದು ಕೇಳಿಸಲಿಲ್ಲ. ಇಬ್ಬರೂ ಹೊರಟರು.

# ಮೂವತ್ತೈದು

ಗಂಭೀರ ರಾತ್ರಿ.

ಕತ್ತಲು. ಭಯಂಕರ ರಾತ್ರಿ.

ಆಕಾಶದ ವಕ್ಷಸ್ಥಲ ಒಡೆದು ಹೋಗಿದೆ. ಗಾಳಿಯ ಮೊರೆತ ಕಿವಿಗೆ ಬೀಳುತ್ತಿದೆ. ಸಿಡಿಲು ಗರ್ಜನೆಯಿಂದಾಗಿ ಎದೆ ನಡುಗಿಸುವಷ್ಟು ಶಬ್ದ ಕೇಳಿಸುತ್ತಿದೆ. ಮಧ್ಯೆ ಕಣ್ಣು ಕೋರೈಸುವ ಮಿಂಚು ಥಣಾಯಿಸುತ್ತಿದೆ.

ಪ್ರಳಯ ತಾಂಡವವಾಡುತ್ತಿದೆ.

ಧನಸಿರಿಯು ದಡವನ್ನು ಕೊಚ್ಚಿ ಹಾಕುತ್ತಿದೆ. ಹುಚ್ಚು ಹೊಳೆಯ ಧಾರೆ. ದಡವನ್ನು ಕೊಚ್ಚಿಹಾಕಿ ತುಂಡು ತುಂಡಾಗಿ ಮಾಡಿ ಕತ್ತಲಲ್ಲಿ ಸುತ್ತಲೂ ಮಣ್ಣು ಹರಡಿದೆ. ಪ್ರವಾಹದ ಭಯಂಕರ ಶಬ್ದ ವಿಪತ್ತಿಗೊಳಗಾಗಿರುವ ಭೂದೇವಿಯ ಆರ್ತನಾದದಂತೆ ಕೇಳಿಸುತ್ತಿದೆ. ಪ್ರಚಂಡ ಹಾಗೂ ತಡೆಯಲಸಾಧ್ಯವಾದ ವೇಗದಿಂದ ಧನಸಿರಿ ಹುಚ್ಚು ಹೊಳೆಯಾಗಿ ತನಗೆ ಖುಷಿ ಬಂದ ಹಾಗೆ ಒಂದು ಕಡೆಯಿಂದ ಸರ್ವನಾಶ ಮಾಡಿ ಹೋಗುತ್ತಿದೆ. ದೂರದಲ್ಲಿ ಕಾಡುಪ್ರಾಣಿಗಳು ಆರ್ತನಾದ ಗೈಯುತ್ತಿವೆ. ಬತ್ತದ ಗದ್ದೆಗಳು ಶೋಕಗೀತೆ ಹಾಡುತ್ತಿವೆ.

ಹರಹರ, ಗರಗರ, ಭರಭರ, ಭರರ. ಎಲ್ಲೆಲ್ಲೂ ಭೂದೇವಿಯ ಭಯಾರ್ತ ನಿನಾದ.

ಎಲ್ಲಿಯೂ ಯಾರ ಸದ್ದೂ ಕೇಳಿಸುತ್ತಿಲ್ಲ.

ದೀಪವನ್ನು ಹೊತ್ತಿಸಿ ಇಡಲು ತರಾ ಅನೇಕ ಸಾರಿ ಪ್ರಯತ್ನಿಸಿದಳು. ಆದರೆ ಸಾಧ್ಯವಾಗಲಿಲ್ಲ. ಅದು ಆರಿ ಹೋಗುತ್ತಿತ್ತು. ಬಾನು ಮತ್ತು ಬುವಿಯಲ್ಲೆಲ್ಲಾ ಕವಿದಿರುವ ಕಗ್ಗತ್ತಲು ಹೆಬ್ಬಾವಿನಂತೆ ಸರ್ವವನ್ನೂ ಕಬಳಿಸುತ್ತಿತ್ತು. ಕತ್ತಲೋ ಕತ್ತಲೆ.

ಮಧ್ಯರಾತ್ರಿ.

ಹೊರಗೆ ಧನಸಿರಿಯ ಹುಚ್ಚು ಹೊಳೆ.

ತಲೆದಿಂಬಿನ ಮೇಲೆ ಮುಖವಿಟ್ಟು ಗುಲಚ್ ಹೊಟ್ಟೆ ದಬ್ಬಾಕಿಕೊಂಡು ಮಲಗಿದ್ದ. ಆತನ ಮನಸ್ಸಿನಲ್ಲಿ ಅರಿವಿಗೆ ನಿಲುಕದ ಸಹಸ್ರಾರು ಚಿಂತೆಗಳು.

ತರಾ ಮೆಲ್ಲಗೆ ಬಂದು ಆತನ ಬಳಿ ನಿಂತಳು. ಸುಳಿವು ಸಿಕ್ಕಿದೊಡನೆ ಗುಲಚ್ ಹಾಸಿಗೆಯ ಕಡೆ ಹೊರಳಿದ.

"ಇಷ್ಟೊಂದು ಮಳೆ ಮತ್ತು ಗಾಳಿ ಬೀಸುತ್ತಿದೆ. ಚಿಕ್ಕಮ್ಮ ಎಲ್ಲಿಗೆ ಹೋದಳೋ ಗೊತ್ತಿಲ್ಲ." - ತರಾ ಹೇಳಿದಳು.

ಗುಲಚ್ ಏನೂ ಮಾತನಾಡಲಿಲ್ಲ.

ಸ್ವಲ್ಪ ಹೊತ್ತು ಹೊರಗೆ ಹರಿಯುತ್ತಿದ್ದ ಪ್ರವಾಹ ಮತ್ತು ಮಳೆ ಬೀಳುವ ಸದ್ದನ್ನು ಕೇಳುತ್ತಿದ್ದ ತರಾ ಮತ್ತೆ ಕೇಳಿದಳು - " ಈವೊತ್ತು ಏನಾಗಿದೆ? ಚಿಕ್ಕಮ್ಮನಿಗೆ ಇಷ್ಟೊಂದು ಬೈದು ಸಿಕ್ಕಾಪಟ್ಟೆ ಹೊಡೆದಿದ್ದು ಯಾಕೆ?"

ತರಾಳ ಕೈಯನ್ನು ತಡಕಿ ತನ್ನ ಅಂಗೈ ಮೇಲೆ ಇಟ್ಟುಕೊಂಡು ಕೋಮಲ ಸ್ವರದಿಂದ ಮೆಲ್ಲಗೆ ಗುಲಚ್ ಹೇಳಿದ - "ತರಾ, ನಿನಗೆ ಕೊಂಚವೂ ಗೊತ್ತಿಲ್ಲ. ವಿಷಯ ಬಹಳ ಜಾಸ್ತಿ ಇದೆ."

ಗುಲಚ್‌ನ ಶರೀರವನ್ನು ತರಾ ಪ್ರೀತಿಯಿಂದ ನೇವರಿಸಿದಳು.

"ಅದೇನು ಅಂಥ ವಿಷಯ?"

"ಒಮ್ಮೆ ನಿನ್ನನ್ನು ಸಫಿಯತ್‌ನ ಮಗ ಮೂಗನಿಗೆ ಕೊಟ್ಟು ಮದುವೆ ಮಾಡಬೇಕೆಂದು ಒಳಸಂಚು ಮಾಡಿದ್ದಳು; ಈಸಾರಿ ತಿಖರನ ಜೊತೆಯಲ್ಲಿ. ಈ ವಿಷಯ ನಿನಗೆ ಗೊತ್ತಿಲ್ಲ."

ತರಾ ಗುಲಚ್‌ನ ಬಳಿಗೆ ಹೋಗಿ ಆತನ ಕೂದಲನ್ನು ಕೈಯಿಂದ ನೇವರಿಸುತ್ತಾ ಹೇಳಿದಳು - "ಅದರಿಂದ ಏನಾಯಿತು? ಅದಕ್ಕೋಸ್ಕರವೇ ಸಿಕ್ಕಾಪಟ್ಟೆ ಹೊಡೆಯೋದೆ?"

"ನನಗೆ ಸರಿಬೀಳಲಿಲ್ಲ. ಈವೊತ್ತು ಬಹಳ ಕೋಪ ಬಂದಿತ್ತು. ಯಾಕೋ ಗೊತ್ತಿಲ್ಲ. ನಿನ್ನ ಮನಸ್ಸಿಗೆ ಬೇಸರವಾಯಿತೇ? ನಿನ್ನಲ್ಲಿ ಪ್ರೀತಿಯಿದ್ದರೆ ನಿನ್ನ ಚಿಕ್ಕಮ್ಮ ಹಿಂದಿರುಗಿ ಬರ್‍ತಾಳೆ. ನೀನು ಚಿಂತಿಸಬೇಡ."

ತರಾ ಬಂದು ಹಾಸಿಗೆಯ ಮೇಲೆ ಕುಳಿತಳು.

ಆತ ಏನೂ ಮಾತನಾಡಲಿಲ್ಲ.

ದೂರದಲ್ಲಿ ಪ್ರವಾಹದ ಸದ್ದು. ಬುವಿಯ ಮೇಲೆ ಬಾನು ಕಳಚಿ ಬಿದ್ದಿದೆ. ನಡುರಾತ್ರಿಯಲ್ಲಿ ಹುಟ್ಟಿದ್ದ ಬಿರುಗಾಳಿ ಮೊರೆಯುತ್ತಾ ಬೀಸುತ್ತಿದೆ.

ಸ್ವಲ್ಪ ಹೊತ್ತು ಆಕಡೆ ಕಿವಿಗೊಟ್ಟು ಗುಲಚ್ ಹೇಳಿದ - ''ಧನಶಿರಿ ದಡವನ್ನು ಕೊಚ್ಚಿ ಹಾಕಿ ಹರಿಯುತ್ತಿದೆ. ಮೊರೆತ ಕೇಳಿಸುತ್ತಿದೆಯೇ?''

''ಪ್ರವಾಹದ ನೀರು ನಮ್ಮ ಗದ್ದೆಯನ್ನು ಮುಳುಗಡೆ ಮಾಡುತ್ತದೆ'' - ತರಾ ಚಿಂತಾಕ್ರಾಂತಳಾಗಿ ಹೇಳಿದಳು.

''ನದಿಯಲ್ಲಿ ಹುಚ್ಚುಹೊಳೆ ಬಂದಾಗ ಅದನ್ನು ತಡೆಗಟ್ಟಲು ಮನುಷ್ಯನಿಂದ ಸಾಧ್ಯವಿಲ್ಲ'' ಎಂದು ಗುಲಚ್ ಹೇಳಿದ.

ಮನೆಯ ಛಾವಣಿಯ ಮೇಲೆ ಒಂದೇ ಸಮನೆ ಸುರಿಯುವ ಸದ್ದು ಕೇಳಿಸುತ್ತಿತ್ತು. ದೂರದಿಂದ ಪ್ರವಾಹದ ಮೊರೆತ ಕೇಳಿಸುತ್ತಿತ್ತು.

ಗುಲಚ್‌ನ ವಕ್ಷಸ್ಥಲದ ಮೇಲೆ ತರಾ ನಿಧಾನವಾಗಿ ಒರಗಿದಳು.

''ನಿನಗೆ ಭಯವಾಗುತ್ತದೆಯೇ?'' - ಆಕೆಯನ್ನು ತನ್ನ ಬಳಿ ಎಳೆದುಕೊಂಡು ಗುಲಚ್ ಕೇಳಿದ.

ಏನೂ ಹೇಳದೆ ಆಕೆ ಗುಲಚ್‌ನ ವಕ್ಷಸ್ಥಲದಲ್ಲಿ ತನ್ನ ತಲೆಯಿಟ್ಟಳು.

''ನಿನ್ನನ್ನು ನನ್ನಿಂದ ಕಸಿದುಕೊಂಡು ಹೋಗಲು ಯಾರಿಗೂ ಸಾಧ್ಯವಿಲ್ಲ'' -ತರಾಳನ್ನು ಬಾಹುಗಳಿಂದ ಅಪ್ಪಿಕೊಂಡು ಗುಲಚ್ ಹೇಳಿದ.

''ಪ್ರವಾಹ ಬಂದಾಗ ಯಾರೂ ಅದನ್ನು ತಡೆಗಟ್ಟಲಾರರು'' - ತರಾಳನ್ನು ಬಾಹುಗಳಿಂದ ಅಪ್ಪಿಕೊಂಡೇ ಮತ್ತೆ ಗುಲಚ್ ಹೇಳಿದ - ''ಪ್ರವಾಹ ಬಂದಿದೆ. ಈ ವರ್ಷದ ಫಸಲು ನಷ್ಟವಾಯಿತು. ನಿಮ್ಮ ಚಿಕ್ಕಮ್ಮ ಹೊರಟು ಹೋದಳು. ಎಲ್ಲಾ ಹೋಯಿತು; ಹೋಗಲಿ ಬಿಡು. ನೀನಿದ್ದೀಯೆ.''

ತರಾ ಬಿಗಿಯಾಗಿ ಗುಲಚ್‌ನನ್ನು ಅಪ್ಪಿಕೊಂಡಳು. ಆಕೆಯ ಸಂಶಯಾತೀತ ಉಸಿರಿನಿಂದ ಆ ಥಂಡಿ ರಾತ್ರಿಯಲ್ಲೂ ಸೆಕೆಯಾಯಿತು.

ಗುಲಚ್ ಶಾಂತಭಾವದಿಂದ ಹೇಳಿದ - ''ನೀನಿದ್ದೀಯೆ. ನೀನೇ ನನ್ನ ಸರ್ವಸ್ವ.''

ಇಂಥ ಮಹತ್ವಪೂರ್ಣ ಸತ್ಯಸಂಗತಿಯನ್ನು ಆತ ಎಂದೂ ಹೇಳಿರಲಿಲ್ಲ. ಗುಲಚ್ ಯೋಚಿಸಿದ.

ಹೊಸದಾಗಿ ಆಬಾದು ಮಾಡಿರುವ ಜಮೀನಿನ ಮೇಲೆ ಪ್ರವಾಹ ನುಗ್ಗಿದೆ. ಧನಶಿರಿಯ ಪ್ರವಾಹ ಹುಚ್ಚುವೇಗದಿಂದ ಹರಿಯುತ್ತಿದೆ.

ನದಿಯ ಧಾರೆ ನಿಲ್ಲುವುದಿಲ್ಲ. ಅದು ಜೀವನದಿ.

ರಾತ್ರಿ ವೇಳೆಯಲ್ಲಿ ಸೂರ್ಯಕಾಂತಿ ಹೂವು ಪ್ರಕಾಶವನ್ನು ಹುಡುಕುತ್ತದೆ. ಜೀವನವೂ ಗತಿಶೀಲ.

''ತರಾ'' -

ತರಾ ಮೌನತಾಳಿದ್ದಾಳೆ.

ತರಾಳನ್ನು ಎದೆಗಪ್ಪಿಕೊಂಡು ಗುಲಬ್ ಹೇಳಿದ - "ಪ್ರವಾಹ ಬಂದರೂ ನಮ್ಮ ಮನೆಯನ್ನು ಕೊಚ್ಚಿಕೊಂಡು ಹೋಗಲು ಸಾಧ್ಯವಿಲ್ಲ. ನಮ್ಮ ಮನೆಯ ಜಾಗ ಎತ್ತರದಲ್ಲಿದೆ."

ಸರಸರ, ಝುರಝುರ - ಎಂದು ಮಳೆಯ ಗಂಭೀರ ಮೊರೆತ. ಈ ಶಬ್ದದ ಹೊರತು ಬುವಿಯ ಬೇರಾವ ಶಬ್ದವೂ ಕೇಳಿಸುತ್ತಿರಲಿಲ್ಲ.

ಮತ್ತಷ್ಟು ಗಂಭೀರವಾಗಿ ಹಾಗೂ ದೃಢವಾಗಿ ತರಾ ಗುಲಬ್‌ನನ್ನು ಅಪ್ಪಿಕೊಂಡು ತನ್ನ ಬಳಿಗೆಳೆದುಕೊಂಡಳು.

"ನೀನೇ ನನ್ನ ಮನೆ; ನನ್ನ ಸರ್ವಸ್ವ."

ಬುವಿಯ ತಪ್ತಗರ್ಭದೆಡೆಗೆ ತೊಯ್ದ ಬಾನು ಇಳಿದು ಬಂದಿತ್ತು. ಧನಶಿರಿಯ ದಡವನ್ನು ಕೊಚ್ಚಿ ಹಾಕುತ್ತಿತ್ತು. ಹೊಸದಾಗಿ ಆಬಾದು ಮಾಡಿದ ಜಮೀನಿನ ಮೇಲೆ ಭಾದ್ರಪದ ಮಾಸದ ಪ್ರವಾಹದ ಮೆಕ್ಕಲು ಮಣ್ಣಿನಿಂದ ಕೂಡಿದ ಕೆಸರನ್ನು ತಂದು ಬಾಚುತ್ತಿತ್ತು.

ಆ ಸಮಯದಲ್ಲಿ ಚಂದ್ರ ಮಾತ್ರ ಜಾಗ್ರತನಾಗಿ ಬಹುಶಃ ಎಲ್ಲಿಯೋ 'ರಿಲೀಫ್' ಬಗ್ಗೆ ಚಿಂತಿಸುತ್ತಿದ್ದ. ಕಪಾಹಿಯಂಥವರಿಗೆ ಧೈರ್ಯ ಹೇಳುತ್ತಿದ್ದ. - "ಮಳೆಗಾಲದಲ್ಲಿ ಪ್ರವಾಹ ಬಂದಿದೆ. ಇಳಿದು ಹೋಗುತ್ತೆ. ಭಯವೇತಕ್ಕೆ?"

Printed at The Central Electric Press A12/1 Naraina Indl. Area, Phase-I, New Delhi-110028